ಪ್ರತಿಭಾಗ್ರಂಥಮಾಲೆ, ಧಾರವಾಡ. ವರ್ಷ ೫ನೇ ಕಿರಣ ೫-೬

# ಅಶೋಕ ಚಕ್ರ

( ಸ್ವತಂತ್ರ ಸಾಮಾಜಿಕ ಕಾದಂಬರಿ )



ಶ್ರೀ. ಮಿರ್ಜಿ ಅಣ್ಣಾರಾಯರು



ಜುಲೈ ೧೯೪೮

ಬೆಲೆ: ೩-೮-೦

# ಮುನ್ನುಡಿ



ನಮ್ಮ ಭಾರತೀಯ ಸಭ್ಯತೆ (ನಾಗರಿಕತೆ) ಹಳ್ಳಿಗಳಲ್ಲಿ ಹುಟ್ಟಿ ಬೆಳೆದುದು. ಹಿಂದೆ ನಮ್ಮ ಹಳ್ಳಿಗಳಲ್ಲಿ ಇಹಪರ ಜೀವನಕ್ಕಾಗಿ ದುಡಿಮೆಯಿದ್ದಿತು. ಎಂತಲೆ ಅನ್ನವಿದ್ದಿತು; ತಿಳಿವು ಇದ್ದಿತು. ಆದುದರಿಂದಲೆ ಜೀವನದಲ್ಲಿ ಸೌಂದರ್ಯವಿದ್ದಿತು; ಸುಖಸಮಾಧಾನಗಳಿದ್ದುವು. ಅಂಧಶ್ರದ್ಧೆಯಿದ್ದಿತೆಂದು ಹೇಳಿದರೂ ಅದು ಒಳ್ಳೆಯ ಗುರಿಯತ್ತ ಕರೆದೊಯ್ಯುತ್ತಿದ್ದಿತು. ಇಂದಿನ ಹೊಸ ನಾಗರಿಕತೆ ಬಳೆದಂತೆ, ಹಳ್ಳಿಗಳಲ್ಲಿ ದುಡಿಮೆ ಕಡಿಮೆಯಾಯಿತು. ಎಂತಲೆ ಬಡತನ-ತಿಳಿಗೇಡಿತನಗಳು ಹೆಚ್ಚಿದುವು. ಅನ್ನ ಕಡಿಮೆಯಾಯಿತು; ಅಸಂತುಷ್ಟಿ-ಅಸಮಾಧಾನಗಳು ಹೆಚ್ಚಿದುವು. ಯಾವ ಬಗೆಯ ಶ್ರದ್ಧೆಗೂ ಅವಕಾಶವಿಲ್ಲದುದರಿಂದ, ಸ್ವಾರ್ಥಸಾಧನೆಯು ಹೊರತು ಒಳ್ಳೆಯ ಗುರಿಯೆ ಕಾಣದಂತಾಯಿತು ಆದುದರಿಂದಲೆ ಇಂದಿನ ನಮ್ಮ ಹಳ್ಳಿಗಳು ಅಶಾಂತಿಯ ಬೀಡುಗಳಾಗಿವೆ. ಸದ್ಬುದ್ಧಿ-ಸದ್ಭಾವನೆಗಳಿಗೆ ಅಲ್ಲಿ ನೆಲೆಯೆ ಇಲ್ಲವಾಗಿದೆ. ಭಾರತದ ಶುಭಭವಿಷ್ಯದ ಅಪೇಕ್ಷೆಯಿಂದ ನೋಡಿದರೆ, ಇಂದಿನ ನಮ್ಮ ಹಳ್ಳಿಗರ ಬಾಳು ತೀರ ನಿರಾಶಾದಾಯಕವಾಗಿದೆ.

ನಮ್ಮ ನೈಸರ್ಗಿಕಸ್ಥಿತಿ, ಸಾಮಾಜಿಕ ಪರಂಪರೆ, ಸಂಸ್ಕೃತಿಯ ಚರಿತ್ರೆ ಇವುಗಳನ್ನು ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸುವವರಿಗೆ ' ಹಳ್ಳಿಗಳ ಪುನರುದ್ಧಾರವೇ ಭಾರತದ ಪುನರುದ್ಧಾರ ! ' ಎಂಬ ಸತ್ಯದ ಸಾಕ್ಷಾತ್ಕಾರವಾಗದೆ ಹೋಗದು. ಹಳ್ಳಿಗಳಲ್ಲಿ ಸಮಾಜ ವ್ಯವಸ್ಥೆಗೊಂಡರೆ ಇಡಿ ರಾಷ್ಟ್ರವೆ ವ್ಯವಸ್ಥೆಗೊಳ್ಳುವುದೆಂಬ ಮಾತು ಮನವರಿಕೆಯಾಗದಿರದು.

ಪಶ್ಚಿಮದ ಭೌತಿಕ ನಾಗರಿಕತೆ, ನಮ್ಮ ಆಧ್ಯಾತ್ಮಿಕ ನಾಗರಿಕತೆಯ ಆರ್ಥಿಕವ್ಯವಸ್ಥೆಯನ್ನು ತಲೆಕೆಳಗೆ ಮಾಡಿಬಿಟ್ಟಿತು. ಆದುದರಿಂಲೇ ವಿವಿಧ ಗೃಹೋದ್ಯಮಗಳಲ್ಲಿದ್ದ ನಮ್ಮ ಹಳ್ಳಿಗರು ನಿರುದ್ಯೋಗಿಗಳಾದರು. ಕೃಷಿಯೊಂದೇ ಹಳ್ಳಿಗರೆಲ್ಲರ ಅನ್ನಕ್ಕೆ ದಾರಿಯಾಯಿತು. ಆದರೆ ದುಡಿಯುವ

ಒಕ್ಕಲಿಗನಿಗೆ ಒಡೆತನದ ಭೂಮಿಯಿರದುದರಿಂದ, ಅವನ ದುಡಿತದ ಫಲವೆಲ್ಲ ಭೂಮಿಯೊಡೆಯರಾದ ಸಿರಿವಂತರ ಮನೆಯಲ್ಲಿ ಬೀಳತೊಡಗಿತು. ಸಿರಿವಂತರ ನಾಗರಿಕ ಸುಖ-ಸೌಕರ್ಯದ ಸಾಧನಗಳೆಲ್ಲ ಪರದೇಶಗಳಿಂದ ಬರಲು ತೊಡಗಿದುದರಿಂದ, ನಮ್ಮ ಧನ-ಧಾನ್ಯದ ಪ್ರವಾಹ ಬಹಿರ್ಮುಖವಾಗಿ ಹೊರಟಿತು. ದೇಶದಲ್ಲುಳಿದ ಕೆಲವು ತುತ್ತುಗಳಿಗಾಗಿ, ಮನುಷ್ಯರು ಮನುಷ್ಯತ್ವವನ್ನು ಮರೆತು ನಾಯಿಗಳಂತೆ ತಮ್ಮ-ತಮ್ಮೊಳಗೆ ಕಡಿದಾಡಬೇಕಾಯಿತು.

ಅನ್ನಕ್ಕಾಗಿ ಕಡಿದಾಡತೊಡಗಿದಾಗ,ಆದರ್ಶ ಜೀವನದ ನೆನಪು ಯಾರಿಗಾದೀತು ? ಆದರ್ಶಜೀವನವಿಲ್ಲದಲ್ಲಿ ಸಮಾಜದಲ್ಲಿ ಸುವ್ಯವಸ್ಥೆ ಹೇಗೆ ಉಳಿದೀತು? ಇಂತಹ ಅವ್ಯವಸ್ಥಿತ ಸಮಾಜದಲ್ಲಿ ಹಸಿವು-ಕಾಮಗಳೆರಡೆ ತಮ್ಮ ಕಾಲಾಟವನ್ನು ಅಖಂಡವಾಗಿ ನಡೆಯಿಸಿರುವುವು. ಇಲ್ಲಿ ಪರಸ್ಪರರಲ್ಲಿ ವಿಶ್ವಾಸವೆ ಉಳಿಯದು. ಗಂಡ-ಹೆಂಡಿರಲ್ಲಿಯೂ ಅಣ್ಣ-ತಮ್ಮಂದಿರಲ್ಲಿಯೂ ತಂದೆ-ಮಕ್ಕಳಲ್ಲಿಯೂ ಗೆಳೆಯ-ಗೆಳೆಯರಲ್ಲಿಯೂ ಪ್ರೀತಿವಿಶ್ವಾಸಗಳಿಗಿಂತ ಸಂದೇಹ-ಭೀತಿಗಳೇ ಹೆಚ್ಚಾಗಿ ಬಳೆಯತೊಡುಗುವುವು ಎಲ್ಲೆಲ್ಲಿಯೂ ವಿಷಮ ಪರಿಸ್ಥಿತಿ ತಲೆದೋರುವುದು. ಎಲ್ಲಿಯಾದರೂ ಒಂದು ಆದರ್ಶಜೀವಿ ಇಂತಹ ವಿಷಮಪರಿಸ್ಥಿಯಲ್ಲಿಯೂ ಒಳ್ಳೆಯ ರೀತಿಯಿಂದ—ಮನುಷ್ಯರಂತೆ—ಬದುಕಬೇಕೆಂದು ಅಪೇಕ್ಷಿಸಿ ಮುಂದುವರಿಯತೊಡಗಿದರೆ, ಹತ್ತು ದಿಕ್ಕುಗಳಿಂದಲೂ ಅದಕ್ಕೆ ಏಟುಗಳು. ದುಃಖವನ್ನೆ ತಿಂದು ಅದು ಬದುಕಬೇಕು; ದುಃಖದಿಂದ ಬಿಕ್ಕುತ್ತಲೆ ಅದು ಸಾಯಬೇಕು. ಇಂದು ಯಾವ ಹಳ್ಳಿಗನ–ಅವನ ಕುಟುಂಬದ–ಜೀವನವನ್ನು ನೋಡಿದರೂ ಅದು ನಮ್ಮ ಸಾಹಿತ್ಯಿಕರಿಗೆ ದುರಂತ ಕತೆ–ಕಾದಂಬರಿಗಳಿಗಾಗಿ ವಸ್ತುವನ್ನು ಒದಗಿಸಿಕೊಡುವುದು.

ಹಳ್ಳಿಯಲ್ಲಿಯೆ ಹುಟ್ಟಿ–ಬಳೆದವರಾದ ಶ್ರೀಮಾನ್ ಮಿರ್ಜಿ ಅಣ್ಣಾರಾಯರಿಗೆ—ನೋಡಿ ಅರಿಯುವ—ಒಳಗಣ್ಣು ಇದ್ದುದರಿಂದ, ಇಂತಹ ದುರಂತ ಕತೆಗಳು ಹಲವಾರು ಗೊತ್ತಿರಬಹುದು. ಬಹುಜನರ ಮೆಚ್ಚಿಕೆಗೆ ಪಾತ್ರವಾದ ತಮ್ಮ 'ನಿಸರ್ಗ' ಕಾದಂಬರಿಗಾಗಿ ಕಥಾವಸ್ತುವನ್ನು ಹುಡುಕಲಿಕ್ಕೆ, ಅವರಿಗೆ ವಿಶೇಷ ಶ್ರಮವಹಿಸಬೇಕಾದ ಸಂದರ್ಭವೇನೂ ಬಂದಿರಲಾರದು. ಅದರಂತೆಯೆ ಅವರ 'ರಾಷ್ಟ್ರಪುರುಷ', 'ರಾಮಣ್ಣ ಮಾಸ್ತರು' ಗಳ ಕಥಾವಸ್ತುಗಳೂ ಕಂಡುಂಡ ಸಂಗತಿಗಳೇ ಆಗಿರಬೇಕು. ಈಗ ಓದು

ಗರ ಕೈಯಲ್ಲಿರುವ ಈ 'ಅಶೋಕ ಚಕ್ರ'ಕ್ಕೂ ಹಳ್ಳಿಯ ಒಂದು ಕುಟುಂಬದ ದುರಂತ ಘಟನೆಯೆ ತಳಹದಿಯಾಗಿದೆ.

ಬಾಬಣ್ಣ ಎಂಬ ತರುಣನ ಮದುವೆಯ ಸಂಭ್ರಮದಲ್ಲಿ ಮೊದಲಾದ ಈ ಕಾದಂಬರಿ, ಅವನ ಅಕಾಲ ಮರಣದ ಸಂಕಟದಲ್ಲಿ ಕೊನೆಗೊಳ್ಳುತ್ತದೆ. ಸುಖ-ಸಮಾಧಾನಗಳಿಂದ ಬದುಕಬೇಕೆಂದು ಅವನಿಗೆ ತುಂಬ ಆಶೆ. ಆದರೆ ಅಜ್ಞಾನ, ಅಶಕ್ತತೆ, ಕಾಮುಕತೆ, ದಾಯಾದಿತನ, ಗೌಡಿಕೆ, ಸಾವುಕಾರಿಕೆ, ಇವೆಲ್ಲ ದುಶ್ಶಕ್ತಿಗಳು ಅವನ ಬೆನ್ನನ್ನು ಹತ್ತಿ, ನಿಂತಲ್ಲಿ ನಿಲ್ಲಗೊಡದೆ—ಕುಳಿತಲ್ಲಿ ಕುಳ್ಳಿರಗೊಡದೆ—ಎಲ್ಲೆಲ್ಲಿಯೊ ಓಡಾಡಿಸಿ, ಕೊನೆಗೆ ಈ ಲೋಕದಿಂದಲೆ ಓಡಿಸಿಬಿಡುತ್ತವೆ. ಅವನನ್ನು ಒಳ್ಳೆಯ ರೀತಿಯಿಂದ ಬದುಕಿಸಿ, ಸುಖಸಂಸಾರಿಯನ್ನಾಗಿ ಮಾಡಬೇಕೆಂದು ಬಯಸುವ ಕೆಲವು ಸುಶಕ್ತಿಗಳೂ ಕಾಣುವುವು. ಆದರೆ ಸಾಮಾಜಿಕ ಪರಿಸ್ಥಿತಿ–ವ್ಯಕ್ತಿಯ ಅಸಮರ್ಥತೆಗಳ , ಆ ಸುಶಕ್ತಿಗಳನ್ನು ದುರ್ಬಲಗೊಳಿಸಿ ಪ್ರಯೋಜನಕ್ಕೆ ಬಾರದಂತೆ ಮಾಡುವುವು. ಈ ದುಶ್ಶಕ್ತಿ-ಸುಶಕ್ತಿಗಳ ಹೋರಾಟದ ಚಿತ್ರ, ನಮ್ಮ ಉತ್ತರ ಕರ್ನಾಟಕದ ಹಳ್ಳಿಯ ಜೀವನದ ಹಿನ್ನೆಲೆಯೊಂದಿಗೆ ಈ ಕಾದಂಬರಿಯಲ್ಲಿ ಚೆನ್ನಾಗಿ ಮೂಡಿನಿಂತಿದೆ. ನಮ್ಮ ಹಳ್ಳಿಗಳನ್ನು ನೋಡುವವರಿಗೆ ಇಲ್ಲಿಯ ಯಾವ ವ್ಯಕ್ತಿಯೂ ಅಪರಿಚಿತವೆನಿಸದು; ಯಾವ ಘಟನೆಯೂ ಅಸ್ವಾಭಾವಿಕವೆನಿಸದು.

ಕಾದಂಬರಿಯನ್ನೋದಿ ಮುಗಿಸಿದೊಡನೆಯೆ ಮನದಲ್ಲಿ ಅಚ್ಚೊತ್ತಿ ನಿಲ್ಲುವಂತಹ ವ್ಯಕ್ತಿತ್ವ ಬಾಬಣ್ಣನ ಹೆಂಡತಿ ಪದ್ಮಾವತಿಯದು. ಅವಳ ಸತೀತ್ವದ ತಿಳಿವಳಿಕೆ, ಕರ್ತವ್ಯಬುದ್ಧಿ, ಕಷ್ಟಸಹನೆ, ಸ್ವಾರ್ಥತ್ಯಾಗಗಳು ಅವಳನ್ನೊಂದು ದೇವತೆಯ ಮಟ್ಟಕ್ಕೇರಿಸಿವೆ ಆದರೆ ಭೌತಿಕ ಸುಖದ ದೃಷ್ಟಿಯಿಂದ ಅವಳ ಜೀವನ ನಿರರ್ಥಕ. ದುಃಖದ ಎಡೆಯನ್ನೆ ಅವಳೆದುರು ಯಾವಾಗಲೂ ಬಡಿಸಿಟ್ಟಿರುವುದು; ಆದರೆ ಈ ಕರ್ತವ್ಯದೃಷ್ಟಿಯ ಯೋಗಿನಿ, ಆ ಎಡೆಯನ್ನುಣ್ಣಲಿಕ್ಕೆ ಎಂದೂ ಹಿಂಜರಿಯಳು ಬಾಬಣ್ಣನ ಮಾವ ತಾತೋಬಾ ಕೂಡ ಈ ಮಟ್ಟದ ವ್ಯಕ್ತಿ. ಜೀವನದಲ್ಲಿಯ ಒಂದು ಅತೃಪ್ತಿ ಅವನನ್ನು ಗಂಗವ್ವನ ಬೆನ್ನು ಹಚ್ಚಿದ್ದರೂ ಅರಳಿದ ಎದೆಯಿದ್ದವನವನು. ಬಾಬಣ್ಣನ ಸಂಸಾರಸುಖಕ್ಕಾಗಿ ತೋರಿಸಿದ ಈತನ ತ್ಯಾಗವು ಕೂಡ, ಇವನ ಮಿಕ್ಕ ತಪ್ಪುಗಳನ್ನೆಲ್ಲ ಮರೆಯಿಸುವಂತಹದು.

ಲಂಚದಾಶೆಯ ಗೌಡರು, ಲಾಭದಾಶೆಯ ಸೆಟ್ಟರು, ಬಾಬಣ್ಣನ ಕಕ್ಕ ದಾಯಾದಿ-ಕಲ್ಲಪ್ಪ, ಭೋಗದಾಶೆಯಿಂದ ದಾರಿ ತಪ್ಪಿದ ಗೃಹಿಣಿ ಗಂಗವ್ವ, ಅವಳ ಮಗಳು ಸುಂದರಿ ಇವರೆಲ್ಲ ಸೇರಿ ಬಾಬಣ್ಣನ ಸುಖಜೀವನವನ್ನು ಕೆಡಿಸುವರು; ಅವನ ಅಕಾಲಮರಣಕ್ಕೆ ಕಾರಣರಾಗಿ ನಿಲ್ಲುವರು. ಇವರ ಪಾತ್ರಗಳ ಪರಿಪೋಷಣೆ ಸಹಜತೆಯಿಂದ ಕೂಡಿದೆ. ಇಂತಹರೆಲ್ಲ ಮನುಷ್ಯರ ನೀತಿಯಿಂದ ವರ್ತಿಸಿದ್ದರೆ, ಬಾಬಣ್ಣನಂತಹರ ಬಾಳೀಕೆ ಹಾಳಾಗುತ್ತಿದ್ದಿತೆಂದು ಯಾರಿಗೂ ಎನಿಸುವಂತಿದೆ ಆದಪ್ಪ ಮಾಸ್ತರು, ಅವರ ತಾಯಿ ಚಂದ್ರವ್ವ ಇವರ ಔದಾಸೀನ್ಯ ಹಿತಬುದ್ಧಿಯೂ ಕಾದಂಬರಿಯ ಸಹಜವಾದ ಬೆಳವಣಿಗೆಗೆ ಸಹಾಯ ಸಲ್ಲಿಸಿದೆ.

ಇದರ ಭಾಷೆ ಅಷ್ಟೊಂದು ಹದಗೊಂಡುದಲ್ಲ. ಹಳ್ಳಿಗರ ಭಾಷೆ, ಕಲಿತವರ ಭಾಷೆ—ಇವುಗಳ ಕಲಸುಮೇಲೋಗರವಾದಂತೆ ಪದಪ್ರಯೋಗಗಳು ಕಾಣಬಹುದು. ಆದರೆ ನುಡಿಗಟ್ಟು ಮಾತಿನ ಬಗೆಗಳು ಕೇವಲ ಹಳ್ಳಿಗರ ರೀತಿಯವೇ ಆಗಿವೆ. ಆದರೂ ಈ ಭಾಷಾವೈಷಮ್ಯ ಇಲ್ಲದಂತಾಗಿದ್ದರೆ, ಈ ಕಾದಂಬರಿಯ ಗುಣ ಇನ್ನೂ ಹೆಚ್ಚುತ್ತಿದ್ದಿತೆಂದು ಹೇಳದಿರಲಾರೆ.

ಶ್ರೀ. ಮಿರ್ಜಿ ಅಣ್ಣಾರಾಯರು ತರುಣರಾದರೂ ನನ್ನ ಗೆಳೆಯರು. ನೀವೇ ಮುನ್ನುಡಿ ಬರೆಯಬೇಕೆಂದು ಪ್ರೀತಿಯಿಂದ ಹೇಳಿದುದರಿಂದ, ಇಲ್ಲಿ ಏನೋ ನಾಲ್ಕು ಮಾತುಗಳನ್ನು ಬರೆದಿದ್ದೇನೆ. ನನ್ನ ಮುನ್ನುಡಿಯಿಂದಲೇ ಈ ಕಾದಂಬರಿ ಬದುಕಬೇಕಾಗಿಲ್ಲವೆಂಬ ಮಾತು ನನಗೆ ಸಂಪೂರ್ಣವಾಗಿ ಗೊತ್ತಿದೆ. ಏಕೆಂದರೆ ತನ್ನ ಒಳ್ಳೆಯ ಗುಣದಿಂದ ಬದುಕಬಲ್ಲ ಗಟ್ಟಿತನ ಇದಕ್ಕೆ ಸಾಕಷ್ಟು ಇದೆ ಇಂತಹ ಚಿತ್ರಗಳು ಈ ನನ್ನ ಗೆಳೆಯರಿಂದ ಸಾಕಷ್ಟು ಹೊರಕ್ಕೆ ಬರಲೆಂದು ಹಾರಯಿಸುವೆನು.

ತಾ ೧೦—೬—೪೮
'ಜಯಂತಿ' ಕಾರ್ಯಾಲಯ
ಧಾರವಾಡ

ಬೆಟಗೇರಿ ಕೃಷ್ಣಶರ್ಮ

# ಅ–ಶೋಕ ಚಕ್ರಕ್ಕೆ ಮೊದಲು,—

ಭರತವರ್ಷ ಸ್ವತಂತ್ರವಾಯಿತು. ನಮ್ಮ ನಾಡಿನಲ್ಲಿ ನಮ್ಮ ಆಧಿ-ಪತ್ಯ ನೆಲಸಿದುದಕ್ಕೆ ಎಲ್ಲರೂ ಸಂತಸಪಟ್ಟರು. ಅಶೋಕಚಕ್ರಾಂಕಿತ ರಾಷ್ಟ್ರಧ್ವಜ ಗಗನಕ್ಕೇರಿತು. ಕನ್ನಡ ನಾಡಿನ ಕವಿಗಳೊಬ್ಬರು 'ಅಶೋಕ ಚಕ್ರ'ವೆಂಬ ಕವನ ಸಂಗ್ರಹವನ್ನು ಪ್ರಕಟಿಸಿದರು. ಅಂದರೂ ಕೂಡ ಈ ಅ–ಶೋಕ ಚಕ್ರವನ್ನು ಈಗಲೂ ನಾನು ಓದುಗರ ಕೈಯಲ್ಲಿ ಕೊಡುತ್ತಿದ್ದೇನೆ.

ಸ್ವಾತಂತ್ರ್ಯ ಬಂದಿದೆ, ಸ್ವರಾಜ್ಯ ಬಂದಿಲ್ಲ. ಹಳ್ಳಿಹಳ್ಳಿಯಲ್ಲಿಯೂ ಬಡಒಕ್ಕಲಿಗರ ಸುತ್ತಲೂ ಅವರ ಅಜ್ಞಾನದ ಲಾಭವನ್ನು ಹೊಂದಿ ಕೊಬ್ಬಿ-ರುವ ಘಟಸರ್ಪವೊಂದು ಸುರುಳಿ ಸುತ್ತಿ ಕೂತಿದೆ. ಅದೊಂದು ವಿಷ ವರ್ತುಲ, ರೈತರ ಕೊಲೆಗಾಗಿ ಶೋಕಪಡದಿರುವ ಅ–ಶೋಕ ಚಕ್ರ. ಇದು ಎಷ್ಟು ಭೀಕರವಾಗಿದೆ ಎಂಬುದನ್ನು ಇಲ್ಲಿ ಚಿತ್ರಿಸಲು ಯತ್ನಿಸಿದ್ದೇನೆ.

ಈ ಚಿತ್ರಕ್ಕೆ ಮುನ್ನುಡಿಯ ಒಪ್ಪನ್ನಿಡುತ್ತಿದ್ದವರು, ಹಳ್ಳಿಯಲ್ಲಿಯೇ ಬೆಳೆದು, ನಮ್ಮ ಬದುಕನ್ನು ಕಂಡುಂಡ ಶ್ರೀ. ಬೆಟಗೇರಿ ಕೃಷ್ಣಶರ್ಮರವರು. ಓದುಗರಿಗೆ ತಮ್ಮ ಮುನ್ನುಡಿಯಿಂದ ಅಶೋಕಚಕ್ರದ ಸುದರ್ಶನ ಮಾಡಿಸಿದುದಕ್ಕೆ ನಾನವರಿಗೆಂದಿಗೂ ಕೃತಜ್ಞನಾಗಿರುವೆ.

ಈ ಕೃತಿಯನ್ನು ಪ್ರಕಟಿಸಿದ, ಶ್ರೀ. ಭಾಲಚಂದ್ರ ಘಾಣೇಕರ ಅವರಿಗೂ ನನ್ನ ನೆನಕೆಗಳು ಸಲ್ಲಬೇಕು.

ಶಾಂತಿಸೇವಾಸದನ
ಸೇಡಬಾಳ
೨೭–೫–೧೯೪೮

**ಮಿರ್ಜಿ ಅಣ್ಣಾರಾಯ.**

———

# ಪ್ರಕಾಶಕರ ನುಡಿ

ಇದು ಪ್ರತಿಭಾ ಗ್ರಂಥ ಮಾಲೆಯ ಐದನೆಯ ವರ್ಷದ ಐದನೆಯ ಮತ್ತು ಆರನೆಯ ಕಿರಣ. ಈ ವರ್ಷ ಇದುವರೆಗೆ ಕೊಟ್ಟ ಆರು ಕಿರಣಗಳೂ ಸೇರಿ ಒಟ್ಟು ಎಂಟುನೂರು ಪುಟ ಸಾಹಿತ್ಯವನ್ನು ಓದುಗರಿಗೆ ನೀಡಿದ್ದಾಯಿತು. ಅನುವಾದಕ್ಕಿಂತ ಇದರಲ್ಲಿ ಮುಕ್ಕಾಲು ಪಾಲು ಸ್ವತಂತ್ರ ಸಾಹಿತ್ಯವೇ ಹೆಚ್ಚಾಗಿದೆಯೆಂದು ತಿಳಿಸಲು ಹರ್ಷವಾಗುತ್ತಿದೆ.

ಇನ್ನು ನಾವು ಕೊಡಬೇಕಾದ ಈ ವರ್ಷದ ಮಿಕ್ಕ ನಾನೂರು ಪುಟ ಸಾಹಿತ್ಯವಾದರೂ ಸ್ವತಂತ್ರ ಸಾಹಿತ್ಯವೇ ಆಗಿದೆ ಅದು ಶ್ರೀಮಾನ್ ಮುದ್ಗಲ್‌ರವರ ಸ್ವತಂತ್ರ ಸಾಮಾಜಿಕ ಕಾದಂಬರಿ, "ದೇವರೆಲ್ಲಿ!" ಎಂಬುದು. ಚಂದಾದಾರರನ್ನು ಈ ವರ್ಷದ ಪ್ರತಿಭಾ ಕಿರಣಗಳು ತೃಪ್ತಿ ಪಡಿಸುವವೆಂಬುದರಲ್ಲಿ ಸಂದೇಹವಿಲ್ಲ.

ಶ್ರೀ ಮಿರ್ಜಿ ಅಣ್ಣಾರಾಯರು ತಮ್ಮ ಅಮೌಲ್ಯವಾದ ಈ ಕಾಣಿಕೆಯನ್ನು ನಮ್ಮ ಮಾಲೆಗೆ ಕೊಟ್ಟು ನೆರವಾಗಿದ್ದಾರೆ. "ಜಯಂತಿ" ಸಂಪಾದಕರಾದ ಶ್ರೀ ಬೆಟಗೇರಿ ಕೃಷ್ಣಶರ್ಮರು ತಮ್ಮ ಪ್ರತಿಭಾಯುಕ್ತ ಮುನ್ನುಡಿಯಿಂದ ಈ ಕಾದಂಬರಿಗೊಂದು ಅಲಂಕಾರವನ್ನು ತೊಡಿಸಿದ್ದಾರೆ. ಇವರಿಬ್ಬರಿಗೂ ನಾವು ಉಪಕೃತರಾಗಿದ್ದೇವೆ. ಮುದ್ರಕರ ನೆರವಿಲ್ಲದೆ ಪುಸ್ತಕ ಹೊರಗೆ ಬರುವದೇ ಸಾಧ್ಯವಿಲ್ಲ. ಅವರಿಗಂತೂ ಸದಾ ಋಣಿ.

ಭಾಲಚಂದ್ರ ಘಾಣೇಕರ

# ಅಶೋಕ ಚಕ್ರ

೧

" ಗಂಗಾ, ಪರದೇಶಿ ಹುಡುಗ ತಾಯಿ ! ನಾವೆಲ್ಲ ಕಚ್ಚಿ ಮುಚ್ಚಿ ಮಾಡಿದರ ನೆಟ್ಟಗವ್ವ. ಇಲ್ಲಿ ಮನೆಯೊಳಗ ಯಾರ ಕೇಳವರು ಹೇಳವರು ಇದ್ದಾರೇನ ನೋಡು. ಅಲ್ಲಿಯದು ಅಲ್ಲೇ ಬಿತ್ತು, ಇಲ್ಲಿಯದು ಇಲ್ಲೇ ಬಿತ್ತು ಮಾಡಿದರ ಹೇಗಾಗೋದು.... ? "

ನೆಲಕ್ಕೆ ಬಿದ್ದ ಮುಸುರೆ, ಕಣಕದ ಮುದ್ದೆಗಳನ್ನು ತೋರಿಸುತ್ತ ಚಂದ್ರವ್ವ ನುಡಿದಳು.

" ಅಲ್ಲs ಚಂದ್ರಾ ! ಎಷ್ಟಾದರೂ ಇದು ಮದುವೆಮನೆ ತಾಯಿ ! ಬೀಳೋದೂ ಏಳೋದೂ ಹಾಗೇ ನಡೆಯೋವೇ. ಹನ್ನೆರಡ ಮನೆ ಹೆಂಗಸರು ಹುಡುಗರು ಬರತಾರ, ತಿನ್ನತಾರ. ಆಗೋದವ್ವ ಅದು. ಹುಡುಗರು ಹುಬಚಿ ತಿಂದರೆ ಉಂಡರನs ಮದುವೆಯಲ್ಲ ? ನಾಳೇನ ನಮ್ಮ ಹುಡುಗರ ಏನ ತಿನ್ನಲಿಕ್ಕೆ ಬಾ ಅಂದರ ಬಂದಾರು ? "

ಹೂರಣದ ಮುದ್ದೆಯೊಂದನ್ನು ಎತ್ತಿ ತನ್ನ ಮಗನ ಕೈಯಲ್ಲಿ ಕೊಡುತ್ತ ಗಂಗವ್ವ ಹೇಳಿದಳು.

" ತಿನ್ನಲಿ ಗಂಗಾ ! ಮಕ್ಕಳಮರಿ ತಿಂದರೆ ಉಂಡರ ಕಡಿಮಿ ಆಗುವದಿಲ್ಲ. ಇದೆಲ್ಲ ಮಾಡೋದು ಯಾತಕ್ಕ ? ಆದರ ಕೈಯೊಳಗ ಕಾಲೊಳಗ ಚೆಲ್ಲಿ ಕೆಡಸೋದು ಬೇಡಂತ ಹೇಳಿದೆ ನಾನು. ಹುಡುಗರು ತಿಂದರ ಇನ್ನಷ್ಟು ಕೊಡಲ್ಲ, ಯಾರ ಬೇಡ ಅಂತಾರು ? "

ತಲೆಯ ಮೇಲಿನ ಸೆರಗು ಸಾವರಿಸಿಕೊಳ್ಳುತ್ತ ಚಂದ್ರವ್ವ ಸೂಚಿಸಿದಳು. ಅವರೊಡನೆಯೇ ಹೆಂಗಸರು ಮಾಡುತ್ತಿರುವ ಹೋಳಿಗೆಗಳನ್ನು ಬುಟ್ಟಿಯಲ್ಲಿ ತುಂಬಿಕೊಳ್ಳುತ್ತ ಇನ್ನೊಬ್ಬಳಿಗೆ ನುಡಿದಳು,—

" ಹೀಗೆ ಹಸಿಬಿಸಿ ಮಾಡಬೇಡಬೇ ! ಗಂಡಸರು ಎಲೆಯೊಳಗ ಅಲ್ಲೇವ ಅಲ್ಲೇ ಒತ್ತಿ ಇಡತಾರು. ಖರ್ಚ ಮಾಡಿದ್ದಕ್ಕ ನಾಲ್ಕ ಜನರ ಬಾಯೊಳಗ ಆದರೂ ಬೀಳಲಿ. "

" ಕಟ್ಟಿಗೇ ಉರಿಯುವಲ್ಲುವು ಏನ ಮಾಡೋಣ....ಕಾಕೀ... ! ನಾವೇನ ಬೇಯಿಸದ ಬೇಕಂತ ಬಿಡತೇವಿ ? "

" ಕಲ್ಲಪ್ಪನ ಕಾರಭಾರ ! ಒಂದ ಸಾಮಾನು ನೆಟ್ಟಗ ನೋಡಿ ತರುವಂತಿಲ್ಲ ಬಿಡುವಂತಿಲ್ಲ. ಹೆಂಗಸರಿಗೆ ಅಡಿಗೆ ಮಾಡಲಿಕ್ಕೆ ಬರುವದಿಲ್ಲಂತ ಹೆಸರಿಟ್ಟರ ಏನ ಮಾಡೋದು ? ನಮ್ಮ ಕೈಯಿಂದ ಆದಷ್ಟು ಮಾಡತೇವಿ ತಾಯಿ ನಾವು. " ಗಂಗವ್ವ ಹೋಳಿಗೆ ಲಟ್ಟಿಸುತ್ತ ನುಡಿದಳು.

ಇನ್ನೊಬ್ಬಳು ಊದುಗೊಳವೆಯಿಂದ ಒಲೆ ಊದಿ ಊದಿ ಹೊತ್ತಿಸತೊಡಗಿದಳು. ಉರಿಯು ಆಗದಿರಲು ಬೇಸತ್ತು ಸುಮ್ಮನೆ ಕುಳಿತಳು. ಸ್ವಲ್ಪ ತಡೆದು ಸಿಟ್ಟಿನಿಂದ ಉರುವಲ ಕಟ್ಟಿಗೆಯನ್ನು ಒಲೆಯಲ್ಲಿ ಜೋರಿನಿಂದ ತಿವಿದಳು.

" ಹೀಗೆ ಸಿಟ್ಟಿಗೆ ಬಂದರೇನಾಗೋದು ? "

" ಏನ ಮಾಡಲೇ ಕಾಕೂ ? ಊದಿ ಊದಿ ಉಸುರು ಜಗ್ಗಿ ಹೋಯ್ತು ! ಕಣ್ಣು ಕೆಂಪಗ ಆದುವು. ಒಲಿಯೋ ಹೊತ್ತವಲ್ಲದು. "

ನೀರೊಡೆದ ಕಣ್ಣುಗಳನ್ನು ಉಟ್ಟ ರೇಶಿಮೆಯ ಮುಗುಟದಿಂದ ಒರಸಿಕೊಳ್ಳತೊಡಗಿದಳು.

" ಮುಗುಟ ಹೊಲಸ ಮಾಡುವಿ ನೀ. ನಿಮ್ಮತ್ತಿ ಮನೆಯೊಳಗ ಹೋದ ಮೇಲೆ ಬೈತಾಳ ನೋಡು. "

" ನನ್ನ ಜೀವದಕಿಂತ ಹೆಚ್ಚಿನದೇನ ಇದು ? "

" ಮಾತಿನೊಳಗೇ ನಡಿಯಿತಲ್ಲ ವೇಳೆ ? ಚಟ್ ಚಟ್ ಮಾಡಿ ಮುಗಸರಿ. ಈಗ ಅರಿಸಿಣ, ಐರಣಿಗಿ ಅಂತ ಹೊರಗ ನೋಡಲಿಕ್ಕೆ ಎದ್ದ ಹೋಗ್ತೀರಿ. "

ಚಂದ್ರವ್ವ ಹಿರಿಯತನದ ಸ್ವರದಲ್ಲಿ ಆಜ್ಞಾಪಿಸಿದಳು.

" ಯಾರಿಗೆ ನೋಡೋದು ಬೇಕಾಗೇದ ತಗೋ ತಾಯಿ ! "

" ಎಲ್ಲಾ ಹೀಗೆ ಅನ್ನಲಿಕ್ಕೇ ಬರತದ. ಈಗ ಬಾರಸೋದು ಕೇಳಸಲಿ. ಇಲ್ಲಿ ಒಬ್ಬರೂ ನಿಲ್ಲುವದಿಲ್ಲ. ಇಪ್ಪತ್ತ ಹಂಚು ಇಟ್ಟೇದೀರಿ, ಇಲ್ಲಿ ಐದ ಸೇರಿನ ಹೋಳಿಗೆಯಾದರೂ ಆಗಲಿ ಅಲ್ಲ. ಆ ಪಡಸಾಲೆಯೊಳಗ ಎಂಟೇ ಒಲೆ ಹೂಡಿರುವರೆಂದರ ಈಗ ಒಂದು ಹೊರಸಲು ತುಂಬ ಹೋಳಿಗೆ ಮಾಡಿದರು.

ನೀವೂ ಏನ ಸಣ್ಣವರೇ ? ಏನ ಹೇಳೋದವ್ವ. ಸಂಗಡ ನಾಲ್ಕ ನಾಲ್ಕ ಹುಡುಗರನ್ನ ಬೇರೆ ಕರೆದ ತಂದಿದೀರಿ. ಹೋಳಿಗೆ ಮಾಡಲಿಕ್ಕೆ ಬಂದಿರು ವಿರೋ ಏನ ಮಕ್ಕಳನ್ನ ಆಡಸಲಿಕ್ಕೆ ಬಂದಿರುವಿರೋ ಏನೋ ನಮ್ಮವ್ವ ! ”

ಎಂದು ಚಟ್ಟನೆ ಹೋಳಿಗೆಯ ಬುಟ್ಟಿಯನ್ನು ಎತ್ತಿಕೊಂಡು, ಸ್ವಲ್ಪ ಸಿಡುಕಿನಿಂದಲೇ ಚಂದ್ರವ್ವ ಒಳಗೆ ಹೋದಳು.

ಚಿಕ್ಕ ಹಂಚಿನ ಮನೆ. ಅದರಲ್ಲಿಯೇ ಇಪ್ಪತ್ತು ಒಲೆಗಳು, ಇಪ್ಪತ್ತು ಜನ ಹೆಂಗಸರು, ಹಲವು ಹುಡುಗರು. ಗೊಂದಲವೇ ಗೊಂದಲ. ಒಬ್ಬಳು ಲಟ್ಟಿಸುವಳು, ಇನ್ನೊಬ್ಬಳು ಬೇಯಿಸುವಳು, ಮತ್ತೊಬ್ಬಳು ಕಣಕ ಹದ ಮಾಡಿ ಉಳ್ಳಮಾಡಿ ಕೊಡುವಳು; ಇನ್ನೊಬ್ಬಳು ಹೂರಣ ಮಿದ್ದುವಳು, ನಡೆದಿದೆ ಮದುವೆಯ ಅಡಿಗೆ. ಮನೆಯಲ್ಲಿ ಹೊಗೆ ಹಿಡಿಸದೆ ಹಂಚು, ಬಾಗಿಲುಗಳಿಂದ ಹೊರಗೆ ಬರುತ್ತಿದೆ.

ಅಂಥ ಹೊಗೆ ತುಂಬಿದ ಮನೆಯಲ್ಲಿ ಮಾತು, ನಗೆ, ಸಿಡುಕು, ಸೆಡವು ಗಳೊಡನೆ ಹೋಳಿಗೆ ಮಾಡುವ ಕೆಲಸ ಸಾಗಿದೆ. ಮದುವೆಯ ಮನೆ ಊರಿಗೆ ಊರೇ ಉಂಡು ತೇಗುವ ಯೋಜನೆ. ಅದರಿಂದ ನೂರಾರು ಮನೆಯ ಹೆಂಗ ಸರು ಅಡಿಗೆಗೆ ಕೂಡಿದ್ದಾರೆ. ಹತ್ತೆಂಟು ಜನ ಹೆಣ್ಣುಮಕ್ಕಳು ಮೇಲ್ವಿ ಚಾರಣೆ ಮಾಡುತ್ತಲಿದ್ದಾರೆ. ಮತ್ತೊಂದು ಮನೆಯಲ್ಲಿ ಹುಗ್ಗಿ ಮಾಡಲಿಕ್ಕೆ ಕಾವಲಿ ಇಟ್ಟಿದ್ದಾರೆ. ಅಲ್ಲಿ ಗಂಡಸರು ಅಡಿಗೆ ಮಾಡುತ್ತಲಿದ್ದಾರೆ.

ಹೊರಗೆ ಮದುವೆಯ ಮಂಟಪದಲ್ಲಿ ಕೆಲವು ಹುಡುಗರು ಅಡಿಕೆಗಳನ್ನು ಗೆದ್ದು ಆಡುತ್ತಿದ್ದಾರೆ, ಕೇಕೆ ಹಾಕುತ್ತಿದ್ದಾರೆ. ಹಂದರದಲ್ಲಿಯೂ ತಿಳಿ ಯಾದ ಹೊಗೆ ತೇಲಾಡುತ್ತಿದೆ.

ಅಲ್ಲಿಯೇ ಒಂದು ಮಗ್ಗುಲಿಗೆ ತಳವಾರ ಹೊರಜಗುಲಿಗೆ ಸುಣ್ಣ ಬಳಿ ಯುತ್ತಿದ್ದಾನೆ. ಒಳಿದಾದ ಭಾಗದಲ್ಲಿ ಪುರೋಹಿತರು ಸ್ವಸ್ತಿಕ ಹಾಕುತ್ತಿ ದ್ದಾರೆ. ಮತ್ತೊಬ್ಬರು ಮುಂದೆ ಹೋಮ ಕುಂಡವನ್ನು ನಿರ್ಮಿಸುತ್ತಿದ್ದಾರೆ.

“ ಲಗೂನೆ ಅಷ್ಟ ಸಂಕ್ಷಿಪ್ತದೊಳಗ ಮುಗಿಸಿ ಬಿಡರಿ ಪಂಡಿತರ. ಒಮ್ಮೆ ಊಟಕ್ಕ ಜನ ಬರಲಿಕ್ಕೆ ಹತ್ತಿತೆಂದರೆ ನಿಮ್ಮ ಕೆಲಸ ಮುಂದೆ ಸಾಗುವದಿಲ್ಲ, ಆ ಮೇಲೆ. ”

ಕಲ್ಲಪ್ಪ ಪಂಡಿತರಿಗೆ ಅವಸರ ಮಾಡಲು ಸೂಚಿಸಿದ.

" ಮಾಡಿ ಲಗ್ನ ಬೇರೆ ಅಂತೀರಿ. ಹೀಗೆ ಗಡಬಡಿ ಮಾಡಿದರೆ ಹೇಗೆ? ಎಲ್ಲನೂ ವಿಧಿಪ್ರಕಾರ ಆಗಲಿಕ್ಕೆ ಬೇಡಾ ? ನಾಳೆ ನೀವೇ ನಾಲ್ಕು ಮಂದಿ ದೊಡ್ಡವರ ಕಟ್ಟೆಗೆ ಕುಳಿತು ಹೆಸರ ಇಡತೀರಿ ಕಲ್ಲಾ...."

ಜನಿವಾರದೊಳಗಿನ ಬೀಗದ ಕೈಯನ್ನು ನಡುವಿನಲ್ಲಿ ಸಿಕ್ಕಿಸಿಕೊಳ್ಳುತ್ತ ಹೇಳಿದ ಪಂಡಿತ. ಸಮೀಪದಲ್ಲಿ ಇಟ್ಟ ಗುಲಾಲು, ರಂಗವಲ್ಲಿಯ ಹಿಟ್ಟಿನ ದೊನ್ನೆಗಳನ್ನು ಎತ್ತಿ ಮಣೆಯ ಮೇಲೆ ಇಡತೊಡಗಿದ. ಅಷ್ಟರಲ್ಲಿ ಹುಡುಗರು ಆಡುವ ಅಡಿಕೆಯೊಂದು ಅಲ್ಲೇ ಇಟ್ಟ ದರ್ಭೆಯ ಕಡ್ಡಿಗಳಲ್ಲಿ ಬಂದು ಸೇರಿತು. ಬಾಲಕನೊಬ್ಬ ಓಡಿ ಬಂದು ಕೈಹಾಕಿದ.

" ನಿಮ್ಮದೂ ಇಲ್ಲೇ ಬಂಡದ ಏನಪ್ಪ ? ಒಂದ ಮದುವೆಗೆ ಸಾವಿರ ವಿಘ್ನ ಅಂತ ! "

ಎಂದು ಪಂಡಿತ ಹುಡುಗನನ್ನು ಬೆದರಿಸಿ ಕಳಿಸಿದ. ಹಾಗೆಯೇ ಹೋಮಕುಂಡದ ಸುತ್ತಲೂ ರಂಗವಲ್ಲಿ ಹಾಕುತ್ತ ಕುಳಿತ.

ಸ್ವಲ್ಪ ಹೊತ್ತು ಮೌನವಾಗಿ ನಿಂತ ಕಲ್ಲಪ್ಪ. ತಲೆಯ ಮೇಲಿನ ಜರದ ರುಮಾಲಿನ ಕಟ್ಟು ತಿದ್ದಿಕೊಂಡ. ಧಡಿಯ ದೋತರವನ್ನು ಹೆಗಲ ಮೇಲೆ ಸರಿಯಾಗಿ ಒಗೆದುಕೊಂಡು, ಒಂದು ಮೂಲೆಗೆ ಹೋಗಿ ಬಾಯೊಳಗಿನ ತಾಂಬೂಲನ್ನು ಉಗುಳಿ ಬರುತ್ತ ನುಡಿದ,—

" ಬಡವರ ಮದುವೆ ಅಂದರೆ ಹಾಗೇ ಪಂಡಿತರs....ಇದೇ ಊರೊಳಗ ಗೌಡರ ಮನೆತನದೊಳಗ ಮದುವೆ ಇರಲಿ, ನೀವೇ ಓಡಾಡಿ ಮಾಡತೀರಿ. ಅದೇ ಮುಂಜಾನೆ ನಾಲ್ಕು ನಾಲ್ಕು ಸಾರೆ ಎಡತಾಕಿದರೂ ಭಾಷ್ಟಿಗೆಗೆ ಸೆಟ್ಟಿಯೂ ಇಲ್ಲ, ಮಗದುಮನೂ ಇಲ್ಲ. ಗೌಡ ಬರುವದಂತೂ ದೂರೇ ಉಳಿಯಿತು. ಅದರೊಳಗ ನೀವು ದಕ್ಷಿಣೆಗೆ ನ್ಯಾಯ ತಕ್ಕೊಂಡ ಕೂತಿದೀರಿ ? "

" ನಮ್ಮದೇನ ನ್ಯಾಯ ಕಲ್ಲಾ ? ಇದ್ದರೂ ಮಾಡತೇವಿ, ಇರದಿದ್ದರೂ ಮಾಡತೇವಿ. ಇಷ್ಟೆಲ್ಲ ಖರ್ಚ ಮಾಡುವಿರಿ. ಪಂಡಿತರಿಗೆ ನಾಲ್ಕು ದುಡ್ಡು ಕೊಡಲಿಕ್ಕೆ ಇಷ್ಟೇಕೆ ಜೀನತನ ಅನ್ನತೇನ ನಾ ..."

ರಂಗವಲ್ಲಿ ಹಾಕುವದನ್ನು ನಿಲ್ಲಿಸಿ ಕಲ್ಲಪ್ಪನ ಕಡೆಗೆ ಹೊರಳಿ ಕೇಳಿದ ಪಂಡಿತ.

"ಆದೇನರ ಆದೀತು ಬಿಡು, ಮುಂದ ನೋಡಿ ನೆಟ್ಟಗ ರಂಗವಲ್ಲಿ ಹಾಕು. ಅದು ನೋಡು, ಹೊತ್ತಕೊಂಡ ದೋತರ ಸೆರಗ ಬಿದ್ದು ಹಾಕಿದ್ದೆಲ್ಲ ಕೆಡಲಿಕ್ಕೆ ಹತ್ತೇದ...."

ಹಿರಿಯ ಪಂಡಿತನೊಬ್ಬ ಹೊರಜಗಲಿಯ ಮೇಲೆ ಕಾಗದ ಸುರುಳಿಯನ್ನು ಬಣ್ಣದಲ್ಲಿ ಅದ್ದಿ ಅದ್ದಿ "ವೀತರಾಗಾಯ ನಮಃ" ಎಂಬುದನ್ನು ಬರೆಯುತ್ತ ಇದ್ದದ್ದನ್ನು ತಡೆದು ಹೇಳಿದ

"ಸ್ವಲ್ಪ ಕೈ ಸಡಿಲು ಬಿಟ್ಟರೆ ನೂರಾರು ರೂಪಾಯಿ ಒಂದೆರಡ ತಾಸಿನೊಳಗ ಹಾರಿ ಹೋಗತಾವ ನಿಬ್ಬಣ ತಂದ ನಿನ್ನೆ ಮನೆಗೆ ಹಚ್ಚುವದರೊಳಗ ಐವತ್ತ ರೂಪಾಯಿ ಸಪ್ಪಳ ಇಲ್ಲದೇ ಹೋದವು...."

"ಐವತ್ತ ರೂಪಾಯಿ ಏನ ಮಾಡಿರಿ ?"

ತಿರುಗಿ ಕೇಳಿದ, ರಂಗವಲ್ಲಿ ಹಾಕುವ ಆ ತರುಣ ಪಂಡಿತ.

"ಏನ ಮಾಡಿರಿ ? ಮದುವೆ ಮನೆ ಬುಪ್ಪ ! ಖರ್ಚ ಒಂದೋ ಎರಡೋ. ಕೊರವರ ಶೆರಿಗೆ ಹಾರಿದು ಹದಿನೈದ ರೂಪಾಯಿ....ಸನಾದಿಯವನ ಮೇಲೆ ಎಂಟಾಣೆ ಗುಲಾಲ ಹಾರಿಸಿದರು ..ಏನ ಕೇಳೋದು...."

"ಬೇಕ, ಕಲ್ಲಾ, ಬೇಕು, ಮಾಡಲಿಕ್ಕೆ ಬೇಕು. ಏನ ಮೇಲಿಂದ ಮೇಲೆ ಆಗೋದ ಅದ?...ಮದುವೆಯೊಳಗೇ ಉಣ್ಣೋದು ತಿನ್ನೋದು...."

ನಡುವೆಯೇ ಕಲ್ಲಪ್ಪನ ಮಾತನ್ನು ತಡೆದು ಹಿರಿಯ ಪಂಡಿತ ಹೇಳಿದ.

"ಮತ್ತ ಪಂಡಿತರಿಗೆ ದಕ್ಷಿಣೆ ಕೊಡಬೇಕಾದರೆ ಜೀವ ಕೆಳಗ ಮೇಲೆ ಆಗ್ತದಲ್ಲ ಇವರದು." ಚಿಕ್ಕ ಪಂಡಿತ ಹೀಯಾಳಿಸುವ ಸ್ವರದಲ್ಲಿ ಕೇಳಿದ.

"ಕೊಡತಾರ ಏಳಪ್ಪ ಕಲ್ಲಪ್ಪ. ಎಲ್ಲಿ ಹೋಗತಾವ ನಮ್ಮ ದಕ್ಷಿಣಾ.... ಕಲ್ಲಾ ಮುಂದ ನಿಂತ ಮಾಡಲಿಕ್ಕೆ ಹತ್ತಿದ ಮೇಲೆ ನಾವೇನ ತಿರುಗಿ ಕೇಳುವಂತಿಲ್ಲ ನೋಡು. ನೂರಾರು ಮದುವಿ ಮಾಡೀದಾ, ನೋಡಿದಾ, ಅವನಿಗೇನ ನಾವು ಹೇಳಲಿಕ್ಕೆ ಹತ್ತತದ ?" ಹೊಗಳಿಕೆಯಿಂದ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುವ ಉದ್ಯೋಗಕ್ಕೆ ತೊಡಗಿದ ಪಂಡಿತ.

"ಯಾರ ಯಾರಿಗೆ ಎಷ್ಟೆಷ್ಟ ಸಲ್ಲಬೇಕು ಅಷ್ಟಷ್ಟ ಮುಟ್ಟಿಸತೇನಿ.... ನನಗೂ ಏನ ತಿಳಿಯುವದಿಲ್ಲ ?"

ಕಲ್ಲಪ್ಪ ಆಧ್ಯತೆಯಿಂದ ನುಡಿದ, ಬಿಳಿಯ ಮೀಸೆಯ ಮೇಲೆ ಕೈ ತಿರುವುತ್ತ.

“ ಅದನ್ನ ತಿಳಕೊಂಡೇ ನಾನು ಮುನ್ನೋಡಿ ಕೆಲಸಕ್ಕ ತೊಡಗೇನಿ. ಮತ್ತ ಯಾರಾದರೂ ಬಂದಿದ್ದರೆ ಇಪ್ಪತ್ತೈದ ರೂಪಾಯಿ ಇಲ್ಲದ ಹಂದರ ದೊಳಗ ಕಾಲ ಇಡುವವನಲ್ಲ. ತಿಳಿತು ? ”

ದೇಶಾವರಿ ನಗೆ ನಕ್ಕು ಕಲ್ಲನ ಮುಖದ ಕಡೆಗೆ ನೋಡಹತ್ತಿದ ಪಂಡಿತ. ಕಲ್ಲಪ್ಪನ ಮುಖದಲ್ಲಿಯ ಏರಿಳಿತವನ್ನು ಕಂಡು ಮಾತನ್ನು ಮುಂದವರಿಸಿದ, —

“ ಹೌದ ಕಲ್ಲಾ, ಮುದಕಿ ಹಿಂದೇನ ಗಂಟ ಗಿಂಟ ಇಟ್ಟ ಹೇಗಿತ್ತೊ? ಏನ ನಾಳೆ ಬೆಳಗಾದರೆ ಸಾವುಕಾರ ಮನೆ ಕಾಣೋದೊ ? ”

ರಹಸ್ಯದ ಸ್ವರದಲ್ಲಿ ಪಂಡಿತರ ಮಾತಿದ್ದಂತಿತ್ತು.

“ ಎಲ್ಲಾ ಗುಡ್ಡಾ ಸುತ್ತಿ ಮೈಲಾರಕ್ಕ ಬಂದಂತೇನೇ ಆಗಿದೆ. ” ಸ್ವಲ್ಪ ಆಧ್ಯತೆಯಿಂದಲೇ ಕಲ್ಲಪ್ಪ ಮಾತು ಮುಂದರಿಸಿದ “ ಹುಚ್ಚ ಇದ್ದೀದಿ ಏನ ಸೀ ? ಎರಡ ಹುಡುಗರ ಮೇಲೆ ಹತ್ತ ವರ್ಷ ಜನ್ಮಾ ತಗದಳ ಮುದಕಿ, ಇಂಥಾ ಊರೊಳಗ. ಹೊಟ್ಟಿ ತುಂಬಿಕೊಳ್ಳೋದೇ ಹೆಚ್ಚಿನದು,- ದುಡ್ಡ ಎಲ್ಲಿಂದ ಮಾಡತಾಳು ? ಈಗ ಪೋರಿ ಮದುವೆ ಮಾಡಿ ಉಸ್ಸ ಅನ್ನುವುದ ರೊಳಗ ತಾ ಹಾಸಿಗೆ ಹಿಡಿದಳು. ಏನ ಮಾಡತಾಳ ಪ್ರಾಣಿ ! ”

“ ಹಾಗಾದರ ಇದಕ್ಕೆಲ್ಲ ಏನಪ್ಪಾ ? ”

“ ಎಲ್ಲಿಯಾದರೂ ತೂತ ಕೆಡಿಯೋದೇ ಅಲ್ಲ. ಪರದೇಶಿ ಹುಡುಗನ ಮದುವೆ ಹೇಗೆ ನಿಲ್ಲಸತಿ ನೋಡು ! ಇದೊಂದ ತಿಂಗಳ ದಾಟಿತೆಂದರೆ ಮುಂದ ಮೂರ ವರ್ಷ ಮನೆಯೊಳಗ ಮದುವೆ ಆಗುವಂತಿಲ್ಲ. ಆ ಸೋದರ ಮಾವ ನರೇ ಏನು ? ಹುಡುಗನ ಕಾಳಜಿ ಮಾಡತಾನ ಅನ್ನುವಿ ? ಇಲ್ಲೇ ಇಲ್ಲ. ಅವನಿಗೊಂದಿಷ್ಟ ಹಸರ ತಂಬಾಕು ಚಿಲುಮೆ ಅವರ ತೀರಿತು. ಎಲ್ಲಾ ನನ್ನ ತಲೆ ಮೇಲೆ ಬಿದ್ದದ. ದೇವರ ಶಕ್ತಿ ಕೊಟ್ಟದಾನು, ಸಾಗಸತೇನ ಆಯ್ತು. ಮುಂದ ಏನಾದರೂ ಮಾಡಿ ಕಳದಾನ ಮಗಾ, ನಾಲ್ಕ ಕೂರಿಗೆ ಅಡವಿ ಅದ....ಎಲ್ಲಿ ಹೋಗ್ತದ ? ”

" ಹುಡುಗ ಅಂಥವ ಅಲ್ಲ ತಗೊ ! "

" ಅಂತ ಹೇಳೇ ನಿಂತ ಮಾಡೋದಲ್ಲ? ಇಂಥ ವೇಳೆಗೆ ಆಗದಿದ್ದರೆ ಅಣ್ಣ ತಮ್ಮರ ಯಾತಕ್ಕ ಇರಬೇಕು ? "

" ಯಾತಕ್ಕಾದರೂ ಬಳಗ ಅಂದರ ಹೆಚ್ಚಿನದು ನೋಡಪ್ಪಾ ! "

ತಲೆದೂಗಿದ ಪಂಡಿತ. ಹಣೆಯೇರಿಸಿ ಮುಖದ ಮೇಲೆ ಬೆರಗಿನ ಭಾವ ಪ್ರದರ್ಶಿಸುತ್ತಲಿದ್ದ. ಅದನ್ನು ಹೆಚ್ಚಿಸಲೆಂದೋ ಏನೋ ಆಜ್ಞಾಪಿಸುವ ಸ್ವರದಲ್ಲಿ ಅಡಿಗೆ ಮಾಡುವವರಿಗೆ ಕೂಗಿ ಕಲ್ಲಪ್ಪ ಹೇಳ ಹತ್ತಿದ.—

" ಹುಗ್ಗಿಗೆ ನಾಲ್ಕೆಂಟ ಸೇರ ಬೆಲ್ಲಾ ಹೆಚ್ಚಿಗಿ ಹಾಕಿರಿ, ಅಂದರೆ ಅಡಿಗೆ ಕಡಿಮೆ ಬೀಳುವದಿಲ್ಲ."

" ಕಲ್ಲಾನ ಬುದ್ಧಿನೂ ಬಹಳ ಅ್ಣಾ ? ಮೂರ ಮಾರ ಮುಂದ ಹಾರಿಕಿ ಇರತದ ನೋಡು ! "

" ಎಲ್ಲಾ ಇರಲಿಕ್ಕೆ ಬೇಕಪ್ಪ ! ಜನ ಬಂತಂದರ ಆಪ್ತರ ಎದುರಿಗೇನ ಮುಖ ಒಡಿಸಿಕೊಳ್ಳೋದ ಅದ? ಅವರ ಎಕ್ಸಂಬಿ ಜನ. ಬೆಲ್ಲದ ನಾಡ ವರು. ತೋಟಪಟ್ಟಿ ಇದ್ದವರು. ಮೂರ ಮೂರ ತಿಂಗಳ ಗಾಣ ನಡಿತಾವ ಅಂತ ಅವರ ಊರೊಳಗ ನಾ ಮುಂದಾಗಿ ಹುಡುಗೆಯನ್ನ ತಂದ ಮಾಡೇನಿ. ಇಲ್ಲಾದರ ಇಂಥಾ ಮನೆತನ ಸಿಗತಿತ್ತ ಈ ಅಪ್ಪಗ...."

ಇನ್ನೂ ಕಲ್ಲಪ್ಪನ ಆಢ್ಯತೆಯ ಮಾತು ಎಲ್ಲಿಯವರೆಗೆ ಮುಂದುವರಿ ಯುತ್ತಿತ್ತೋ ಏನೋ. ಅಷ್ಟರಲ್ಲಿ ಬಾರಿಸುವ ಸಪ್ಪಳ ಕೇಳ ಬರಹತ್ತಿತು. ಕೊಂಬು ಹೊಡೆಯುವ ನಿನದವೇಳಹತ್ತಿತು.

" ಬಸ್ತಿಯೊಳಗ ಅರಿಸಿಣ ಹತ್ತಿತ ನೋಡಿರಿಬೇ. ಇನ್ನ ಚೌಗುಲೆ ಯವರ ಮನೆಯಲ್ಲಿ ಅರಸಿಣ ಬಂದದ ಏನೋ.... "

ಹಂದರದೊಳಗಿಂದ ಹೋಳಿಗೆಯ ದುರುಡಿಯನ್ನು ತಕ್ಕೊಂಡು ಹೋಗುತ್ತ ಹೆಂಗಸರಿಗೆ ಚಂದ್ರವ್ವ ಹೇಳಿದಳು.

" ಹೌದ, ಚೌಗುಲೆ ಅವರ ಸುಂದರಾ ಮತ್ತ ನೇಮೀಶಾನ ಕೈಯಿಂದ ಅರಿಸಿಣ ಬಂದದ. ಮಕ್ಕಳವಂತಿಗೆಯರು....ಹುಡುಗನಿಗೆ ಪಟ ಪಟ ನಾಲ್ಕ ಹೆಣ್ಣ ನಾಲ್ಕ ಗಂಡ ಆಗಲಿ ತಾಯಿ ! ಮುದುಕಿ ಹಿಂದ ವಂಶ ಆದರೂ ಬೆಳಿ ಯಲಿ." ಹೋಳಿಗೆ ಮಾಡುವ ಹೆಂಗಸೊಬ್ಬಳು ನುಡಿದಳು.

" ಆಗಲಿ ತಾಯಿ ! " ಇನ್ನೊಬ್ಬಾಕೆ ದನಿ ಎಳೆದಳು.

" ಆದಾವು ತಗೋ, ಪೋರಿ ಮೈನೆರದ ಮೂರ ವರ್ಷ ಆಗಿಹೋಯ್ತು !"

" ಇನ್ನೂ ಸಣ್ಣದ ಕಾಣ್ತದಲ್ಲ ಗಂಗೂ ? "

" ಅವ್ವಾ ! ಸಣ್ಣಾಕಿ ಯಾನ ? ನಿನ್ನೆ ಕುದರಿ ಮೇಲಿಂದ ಇಳಸ ಕೋಲಿಕ್ಕ ಹೋದರ ನಮ್ಮವರ ನಡ ಸಳಕ್ ಅಂತಂತ...."

"ಮುಸುಕ ಹಾಕೊಂಡ ಕೂತಾಗ ಸಣ್ಣದ ಕಾಣಿಸೇದ. ಇಳಸಕೋಲಿಕ್ಕ ಮುಂದ ಹೋಗ್ಯಾನ ಅಪ್ಪಣ್ಣ. ೪ಹ ಕುಡದ ಮನುಷ್ಯ, ಜೋಲಿ ಹೇಗೆ ಸಂಬಾಳಸಬೇಕು ? "

" ಬೇಕಾದಂಗ ಜೋಳದ ಚೀಲಾ ಹೊರತಾರ ಏಳ ತಾಯಿ ! " ಗಂಗವ್ವ ತನ್ನ ಪತಿಯ ಸಾಮರ್ಥ್ಯವನ್ನು ಸಮರ್ಥಿಸ ಹೋದಳು.

ಹೀಗೆಯೇ ಹೆಂಗಸರ ತುದಿ ಮೊದಲಿಲ್ಲದ ಮಾತುಗಳು ಬೆಳೆದು ಯಾವ ಯಾವ ವಿಷಯಗಳನ್ನು ಬೈಲಿಗೆ ತರುವವೋ ಏನೋ ಎಂದು ಭಾವಿಸಿ. ಕಲ್ಲಪ್ಪ ಚಟ್ಟನೆ ಅತ್ತ ಹೋಗಿ ಹೇಳಿದ,—

" ಮಾತಿನೊಳಗ ಮೈಮರತ ಹಸಿಬಿಸಿ ಹೋಳಿಗೆ ಮಾಡಬೇಡಿರಿಬೇ. ಉಣ್ಣುವಾಗ ಗಂಡಸರು ಹೆಸರ ಇಟ್ಟಾರ ನೋಡಿರಿ ! "

೨

ದುಂಡಗೆ ತುಂಬಿದ ಮೈಯು. ಇದೀಗ ಮೊಗಮೀಸೆ ಕಪ್ಪು ವರ್ಣಕ್ಕೆ ತಿರುಗುತ್ತಿರುವ ಮುಖ. ನಿದ್ರೆ ಇಲ್ಲದುದರಿಂದ ಕೆಂಪಾದ ಕಣ್ಣುಗಳು. ಹುಣಸೆ ವರ್ಣವಾದರೂ ಅರಸಿಣ ತೊಡೆದುದರಿಂದ ಒಂದು ತರದ ಕಾಂತಿಯಿಂದ ಒಪ್ಪುವ ಕೈಕಾಲುಗಳು. ಮದುಮಗನ ಉಲ್ಹಾಸದಿಂದ ಬಾಬಣ್ಣ ಮಂಟಪದಲ್ಲಿ ಓಡಾಡುತ್ತಿದ್ದಾನೆ.

ಉಟ್ಟ ಮ್ಯಾಂಚೆಸ್ಟರ ದೋತರ ಅರಿಸಿಣ ಹತ್ತಿ ಹಳದಿ ಆಗಿವೆ. ನೀಳವಾಗಿ ಬಿಟ್ಟ ಅದರ ಸೆರಗು ನೆಲವನ್ನು ಗುಡಿಸುತ್ತಲಿವೆ. ಮೈಯಲ್ಲಿ ತೊಟ್ಟ ಮಲಮಲಿಯ ಶರ್ಟಿನೊಳಗಿಂದ ತುಂಬಿದ ಎದೆಯ ಮೇಲೆ ಬೆಳೆದ ಕೂದಲುಗಳು ತೋರುತ್ತಿವೆ. ಹಗುರಾಗಿ ಸುತ್ತಿದ ಬಾದಲಿ ಪಟಕೆಯಲ್ಲಿ—ನೆತ್ತಿಯ ಮೇಲೆ—ಬೀಡಿಯ ಕಟ್ಟು, ಕಡ್ಡಿಯ ಪೆಟ್ಟಿಗೆಗಳು ಅರ್ಧ ಮುಖವನ್ನು

ಹೊರಗೆ ತೋರಿ ತಮ್ಮ ಸ್ಥಾನ ಮಾನಗಳಿಗಾಗಿ ಹೆಮ್ಮೆಪಟ್ಟುಕೊಳ್ಳುತ್ತಿದ್ದನೆ.

ಮುಂಗೈಗೆ ಕಟ್ಟಿದ ಪೋಚು, ಬೆರಳಿಗೆ ಹಾಕಿದ ಉಂಗುರಗಳು ಸಡಿಲಾಗಿ ಈಗೋ ಇನ್ನೊಂದು ಕ್ಷಣಕ್ಕೋ ಕಳಚುವಂತಿದ್ದವು; ಈತ ತಮ್ಮ ಒಡೆಯನಲ್ಲ ಎಂಬುದನ್ನು ಪ್ರದರ್ಶಿಸುತ್ತಿದ್ದವು.

ಅಲ್ಲೇ ಮಂಚದ ಒಂದು ಬದಿಗೆ ಕುಳಿತ ಕಲ್ಲಪ್ಪ ಕರೆದು ಹೇಳಿದ,—

" ಬಾಬಣ್ಣಾ, ನೀನು ನಿನ್ನ ಹೆಂತಿ ಇದ್ದೈದ ಎಲೆ ತಗಿಯಬೇಕಪ್ಪ,—"

" ಐ! ಮದುಮಕ್ಕಳ ಆಗಿ ಅವರ್‍ಯಾಕ ತಗಿತಾರ? ಎಲೆ ತಿನತ ಗುಗ್ಗಿ ಸಾಕತ ಕೂತಿದಿ ತಾಸ ಆಯ್ತು. ಎದ್ದ ಗಂಡಗಚ್ಚಿ ಹಾಕಿ ತಗಿ ಏಳಲ್ಲ."

ವಂಕಿಯ ತೋಳು ತಿರುವುತ್ತ ನಗೆಯ ಸ್ವರದಲ್ಲಿ ಗಂಗವ್ವ ಬಿಂಕದಿಂದ ಅಂದಳು. ಆಗ ಅವಳುಟ್ಟ ಮಡಿಯ ಸೆರಗು ಎದೆಯ ಮೇಲಿಂದ ಸರಿದು ಕೊರಳೊಳಗಿನ ದೊಡ್ಡ ಗೆಜ್ಜೆಯ ಟಿಕ್ಕಿ ಹೊರಗೆ ತೋರುತ್ತಿದ್ದಿತು.

" ತಗೀಬೇಕಂತವಳು. ಇಂದ ಮದುಮಕ್ಕಳ ಒಂದ ಐದರ ಎಲೆ...."

ನಡುವೆ ಚಂದ್ರವ್ವ ತುಪ್ಪದ ಗಿಂಡಿಯನ್ನು ಕೈಯಲ್ಲಿ ಹಿಡಿದುಕೊಂಡು ಬರುತ್ತ ಕಲ್ಲಪ್ಪನ ಮಾತನ್ನು ಎತ್ತಿ ಹಿಡಿದಳು.

" ಆಕೆಗೆ ಏನ ಗೊತ್ತಿಲ್ಲೇನ ತಗೊ!"

ಕಲ್ಲಪ್ಪ ಓರೆನೋಟದಿಂದ ಗಂಗವ್ವನ ಕಡೆಗೆ ನೋಡುತ್ತ ಹೇಳಿದ.

" ಎಲ್ಲಾರಿಗೂ ಗೊತ್ತ ಇದ್ದದ ಇರತದಲ್ಲ. ಜಗದೊಳಗ ಹೊಸದ ಏನ ಅದ?"

ತುಂಟತನದಿಂದ ನುಡಿದು ನಡೆದಳು, ಗಂಗವ್ವ. ಆಗ ಹೋಳಿಗೆಯ ಮಣೆಯ ಮೇಲೆ ಕಬ್ಬಿಣಂಚು ಡಬ್ಬು ಹಾಕಿಕೊಂಡು ಮನೆಗೆ ನಡೆದಿದ್ದಳಾಕೆ. ಹೋಳಿಗೆ ಮಾಡುವ ಕೆಲಸ ಮುಗಿದಿದ್ದಿತು.

" ಕಣಕ ಹೂರಣ ಎಲ್ಲಾ ಆಗಮಾಡಿದಿರೇನ, ಇಷ್ಟ ಲಗೂನ ನಡದಿ?"

" ಆಯ್ತಲ್ಲ!"

" ಲಗೂನ ಸೀರಿ ಉಟ್ಟಕೊಂಡ ಉಡಿಕ್ಕ ಬರ್‍ರಿ ಗಂಗಾ! ನಿಮ್ಮ ಅತ್ತಿಗೆಯನ್ನ ಕರಕೊಂಡೇ ಬಾ. ನುಮ್ಮನ ಒದಕಾಕಸ ಬೇಡಿರಿ. ಒಂದೇ

ಸ್ಟೋರಿ–ಬಾಳಾಬಾಯಿ– ಎಲ್ಲಾ ಕಡೆನೂ ಎಷ್ಟಂತ ನೋಡಕೊಂಡೋತು?'
ಚಂದ್ರವ್ವ ತಿರುಗಿ ನಿಂತು ಊಟಕ್ಕೆ ಬರಲು ಸೂಚಿಸಿದಳು.

"ಎಡತಾಕಲಿ ಅಲ್ಲ! ನಾಳೆ ಕಳಸಗಿತ್ತಿ ಸೀರಿ ಏನ ನಮಗ ಕೊಡಕ ಬರತಾಳು?"

ಗಂಗವ್ವನ ಉತ್ತರವಿದು.

"ಏನ ಹೊರಗಿನಾಕೆ ಇದ್ದಾಳ ಏನ ತಗೊ! ಬಂದ ತಿಂದ ಹೋಗ್ತಾಳ. ಮುಂಜಾನೆಯಿಂದ ಆಕೆ, ಆಕೆ ಮಕ್ಕಳ, ಆಕೆ ಗಂಡ ಮೂರ ಮೂರ ಸಾರೆ ಉಂಡಿದಾರ."

ಬೇಕೆಂತಲೇ ಕೆಣಕು ಸ್ವರ ತೆಗೆದು ನುಡಿದ ಕಲ್ಲಪ್ಪ.

"ಅವರ ಉಂಡರ ಅವರ ಪಾಲಿನದಾಯಿತು."

"ನೀನೂ ತಿಂದಾದಿ ಏಳ, ಹೋಳಿಗೆ ಮಾಡ್ತ ಮಾಡ್ತ ತುಪ್ಪ ಹೋಳಿಗೆ ಎರಡ ತಿನ್ನದ ಒಳ್ಳೇ ಇದ್ದಿ!"

"ಮಾಡತೇವಿ ಅಂದ ಮೇಲೆ ತಿನ್ನಲಿಕ್ಕೆ ಬ್ಯಾಡ?"

"ನೀರೊಳಗೇ ಇದ್ದ ಮೇಲೆ ಮೀನ ನೀರ ಕುಡಿಲಿ ಕುಡೀದಿರಲಿ ಕುಡದದನು ಅನ್ನೋದಲ್ಲ?"

ಚಂದ್ರವ್ವ ನಡುವೆ ಮಾತು ಜೋಡಿಸಿದಳು ತಾನಂದಂತೆ ಹೋಳಿಗೆ ಮಾಡುವ ಹೆಂಗಸರೆಲ್ಲರಿಗೂ ಎರಡೆರಡು ಹೋಳಿಗೆ ಹೆರತುಪ್ಪ ತಿನ್ನಿಸಿಯೇ ಬಿಟ್ಟಿದ್ದಳಾಕೆ. ಎಷ್ಟು ಗಡಬಡಿ ಮಾಡಿದರೂ ಗಂಡಸರ ಪಂಕ್ತಿಗಳಲ್ಲಿ ತೀರಿ, ಹೆಂಗಸರು ಊಟಕ್ಕೆ ಕೂಡಲಿಕ್ಕೆಂದರೆ ಗ್ಯಾಸ ಉರಿಸಬೇಕಾಗುತ್ತದೆಂಬುದು ಆಕೆಗೆ ಗೊತ್ತೇ ಇತ್ತು. ಮುಂಜಾನೆಯಿಂದ ಒಲೆಯ ಮುಂದೆ ಕುಳಿತು ಮೈ ಸುಟ್ಟುಕೊಂಡ ಹೆಂಗಸರು ಬೇಡಬೇಡ ಎನ್ನುತ್ತಿದ್ದರೂ ಕೈನುರಿದು ಹಾಕಿದರೆ ಎರಡೆರಡು ಹೋಳಿಗೆಯನ್ನಾದರೂ ತಿಂದೇ ತಿನ್ನುವರೆಂದು ಅನೇಕ ಮದುವೆಗಳಲ್ಲಿ ಓಡಾಡಿ ಅನುಭವ ಪಡೆದ ಚಂದ್ರವ್ವ ಬಲ್ಲಳು.

"ಎಲ್ಲಾ ಗೊತ್ತದ ಬಿಡ!" ಎಂದು ಗೋಣು ಹಾಕಿ ಗಂಗವ್ವ ಹೋದಳು.

ಇಲ್ಲಿಯ ವರೆಗೆ ಎಲ್ಲಿದ್ದನೋ ಏನೋ, ತಾತೋಬಾ ಕೈಯಲ್ಲಿ ಚಿಲುಮೆಯನ್ನು ಹಿಡಿದುಕೊಂಡು ಲಗುಬಗೆಯಿಂದ ಅವಳ ಬೆನ್ನು ಹತ್ತಿ ಹೋಗುತ್ತ ಅಂದ,—

" ನಿಲ್ಲು ! "

ಗಂಗವ್ವ ಗೋಡೆಯ ಮರೆಗೆ ಅಲ್ಲೇ ತಿರುಗಿ ನಿಂತಳು

" ಇವನೇಕೆ ಬೆನ್ನ ಹತ್ತಿದ ಮತ್ತ ! "

ರಹಸ್ಯದ ನಗೆಯೊಂದನ್ನು ಬೀರುತ್ತ—ಚಂದ್ರವ್ವನನ್ನುದ್ದೇಶಿಸಿ ಕಲ್ಲಪ್ಪ ಕುಳಿತಲ್ಲಿಂದಲೇ ಕೇಳಿದ. ಚಂದ್ರವ್ವ ಅದಕ್ಕೆ ಏನೂ ಹೇಳದೆ ತಿರಿಗಿ ತುಪ್ಪ ಬಡಿಸಲು ಒಳಗೆ ಹೋದಳು. ಕಲ್ಲಪ್ಪನಿಗೆ ಸುಮ್ಮನಿರಲಿಕ್ಕಾಗದೆ ಕೇಳಿದ,—

" ನೋಡೋ ತಾತ್ಯಾ, ಗಂಗಾ ಹಂಚಿನ ಬುಡದೊಳಗ ಇಟ್ಟುಕೊಂಡ ನಾಲ್ಕ ಹೋಳಿಗಿ-ಗೀಳಗಿ ಒಯ್ಯಲಿಕ್ಕೆ ಹತ್ತ್ಯಾಳೇನು....? "

ಗಂಗವ್ವ ಸೆಡವಿನಿಂದ ಮುಂದೆ ಒಂದು ಉತ್ತರ ಕೊಟ್ಟಳು, .

"ನಾ ಒಯ್ದರೇನ ಒಯ್ಯದಿದ್ದರೇನ ಎಲ್ಲಾ ಅಲ್ಲೇ ಅದ ಮುಚ್ಚಿ ಕಟ್ಟಿ ಕದ್ದೇಕೆ ಒಯ್ಯಲಿ ? ಅಣ್ಣಾತಮ್ಮರ ನೀವೇ ನೋಡರಿ ಹಾಗೆ ಮಾಡುವವರು. ನಮ್ಮ ಬಾಬು ಮೊದಲ ಮಳ್ಳ ಹುಡುಗ. ಮದುವೆ ಅನ್ನೋಣ ಉಪ್ಪಿ ಇವರ ಕೈಯೊಳಗ ಕಾರಭಾರ ಕೊಟ್ಟ ಕೂತಾನ ಆಯ್ತು." ಎಂದು ಅಲ್ಲೇ ಮಂಟಪದಲ್ಲಿದ್ದ ಬಾಬಣ್ಣನ ಕಡೆಗೆ ನೋಡಿ ಅಂದಳು

ಕಲ್ಲಪ್ಪನ ಮುಖ ಸುಟ್ಟ ಬದನೆಯಂತಾಯಿತು. ನಗೆಯಲ್ಲಿ ತೇಲಿಸಿ ಹೊಡೆದಳಲ್ಲ ಎಂದುಕೊಂಡ ಆದರೂ ಜಗ್ಗಿ ತಂದ ನಗೆಯಿಂದ ಮಾತನಾಡಿದ,

" ಇಲ್ಲ. ಮನೆಯೊಳಗ ಒಯ್ದು ಅಪ್ಪಣ್ಣಗ ತಿನ್ನಲಿಕ್ಕೆ ಕೊಡಾಕಿ...."

" ಮನೆಯೊಳಗ ಒಯ್ದೇಕೆ ಕೊಡಲಿ? ಬೇಕಾದರ ಕರದ ತಂದ ಉಣಲಿಕ್ಕೆ ಹಾಕತೇನೆ. ಇಲ್ಯಾರ ನನ್ನ ಕೈಯ ಹಿಡಿಯುವವರಿದ್ದಾರ? " ಎಂದು ಮಾತು ಮುಗಿಯುವಷ್ಟರಲ್ಲಿ ಅಲ್ಲಿಂದ ಹೋಗಿಬಿಟ್ಟಳು ಗಂಗವ್ವ. ಕುಳಿತಲ್ಲಿಯೇ ಕಲ್ಲಪ್ಪ ಮನಸಿನಲ್ಲಿ ಅಂದುಕೊಂಡ,—

" ತಾತೋಬಾ ಇರುವತನಕ ಮನೆಯೇ ನಿನ್ನದದ ಬಿಡು...."

ಜೇಬಿನಲ್ಲಿ ಚಿಲುಮೆ ಹಾಕಿಕೊಳ್ಳುತ್ತ ತಿರುಗಿ ಮಂಟಪದಲ್ಲಿ ತಾತೋಬಾ ಒರುತ್ತ ಹೇಳಿದ,—

" ಇಲ್ಲೇ ಕುಳಿತಿದಿ, ಯಾರ ಬಂದರು ಯಾರ ಇಲ್ಲ ಸ್ವಲ್ಪ ಲಕ್ಷ್ಯದೊಳಗ ಇಡಂದರಾಯಿತು. ಇನ್ನೂ ಮಗಮಮರ ಹುಡುಗರ ಯಾರೂ ಉಂಡ ಹೋದಂಗ ಕಾಣಸುಗಿಲ್ಲ "

“ ತೋಟದೊಳಗ ಇದ್ದಾರ. ಸಂಜೆಯಾದರೂ ಉಂಡ ಹೋದಾರು. ಒಮ್ಮೆ ಹೇಳ್ಯೇದ, ಆಯ್ತು. ”

ಆ ವಿಷಯಕ್ಕೆ ಮಹತ್ವ ಕೊಡದವರಂತೆ ನುಡಿದುಬಿಟ್ಟ.

“ ಇನ್ನೊಮ್ಮೆ ಸಾಯಕಲ್ಲ ಕೊಟ್ಟ ಯಾರನ್ನಾದರೂ ಕಳಿಸುವಿ ಏನ ನೋಡು ! ” ಕೆಮ್ಮುತ್ತ ಹೇಳಿದ ತಾತಪ್ಪ.

“ ಎಷ್ಟ ಕಡೆಗೆ ಅಂತ ಲಕ್ಷ್ಯ ಹಾಕಲಿ ನಾ. ಹೊರಗ ತಿರಗಕತ ಇದ್ದೀದಿ, ಅಷ್ಟ ಮಾಡಲ್ಲಿ ನೀ, ” ಸ್ವಲ್ಪ ತಡೆದು “ ಸುಮ್ಮನ ಕೈಕಟ್ಟಿಕೊಂಡ ಕೂಡೋದ ಅಂದರೆ ಏನ ಬಂತು ? ಎಲ್ಲಾನೂ ನಾನೇ ಒಪ್ಪಿಸಿಕೊಂಡಿದ್ದೇ ನೇನ ನಿನ್ನ ಸೋದರಳಿಯನ ಮದುವೇ ಅದೇ ಅಲ್ಲ. ನಾಳೆ ಸೋದರ ಸೊಸೆ ಬಂದ ಬಿಸಿ ಬಿಸಿ ರೊಟ್ಟಿ ಕೈಯಾಗ ಮಡಚಿ ಕೊಟ್ರಾ ಮುಚ್ಚಿ ಹೊಡದಿ ಅಲ್ಲಾ. ”

ಗಂಗವ್ವನ ಮಾತಿನ ಪೆಟ್ಟನ್ನು ಹೀಗೆ ತಾತಪ್ಪನ ಮೇಲೆ ಹೊರಳಿಸಿ, ಮನಸ್ಸನ್ನು ಹಗುರು ಮಾಡಿಕೊಂಡು, ಕಲ್ಲಪ್ಪ ಸುಮ್ಮನಾದ.

“ ಯಾವಾಗಾದರೂ ಅವನದು ಹಾಗೇ ಏಳು ! ”

ಮಾವನು ಮಾತಾಡದೆ ಸುಮ್ಮನೆ ಹೋಗುವದನ್ನು ಕಂಡು ಬಾಬಣ್ಣ ಹೇಳಿದ. ಆ ಮಾತು ಕಲ್ಲಪ್ಪನ ಮಾತಿಗೆ ಪುಷ್ಟಿ ಕೊಡುವಂತಿತ್ತು. ಕಲ್ಲಪ್ಪ ನಡಕಟ್ಟಿಕೊಂಡು ನಿಂತಾಗಲೇ ತನ್ನ ಮದುವೆ ಆದುದೊಂದು ಅವನಿಗೆ ಗೊತ್ತು. ‘ಎಕ್ಕಂಬಿಗೆ ಎರಡು ಸಲ ಎಡತಾಕಿ ಹೆಣ್ಣು ಗೊತ್ತುಮಾಡಿಕೊಂಡು ಬಂದವನೂ ಅವನೇ. ಹಿರಿಯರಿಲ್ಲದ ಮನೆ, ಹೆಂಗಸರಿಲ್ಲದ ಮನೆ ಎಂದು ತನಗೆ ಹೆಣ್ಣು ಕೊಡಲು ಹಲವರು ಹಿಂಜರಿದಾಗ ಈ ಮನೆತನದ ಗಂಟು ಹಾಕಿದವ ಕಲ್ಲಪ್ಪ ಕಕ್ಕನೇ. ಎಲ್ಲರೂ ಹಾಗೇ ಇರುವರೇನು ? ಆಪ್ತರಿಗೂ ಸ್ವಲ್ಪ ದುಡ್ಡಿನ ತೊಂದರೆ, ಯಾರಿಗೂ ತಿಳಿಯದಂತೆ ತೆರವು ಕೇಳಿದರು. ಅದಕ್ಕೇನು ಮಾಡುವುದು ? ಒಳಗಿಂದೊಳಗೇ ಕೊಟ್ಟು ಕಲ್ಲಪ್ಪ ಎಲ್ಲ ವ್ಯವಸ್ಥೆ ಮಾಡಿದ. ಮಾಡಲಿಕ್ಕೇ ಬೇಕು. ದೊಡ್ಡ ದೊಡ್ಡ ಮನೆತನದವರೂ ಹೀಗೆ ಒಳಗೊಳಗೇ ಮಾಡೇ ಮಾಡುವರು. ನಾವು ಕೊಟ್ಟ ನೂರು ರೂಪಾಯಿಗಳಾದರೂ ಅವರಿಗೆಲ್ಲಿ ಉಳಿಯುವವು ? ನನಗೇ ಉಡುಗರೆ ಕೊಡ ತಪ್ಪೇಲಿ ಅಂತ ಕೊಟ್ಟುಬಿಟ್ಟರು ! ತಮ್ಮ ಮನೆಯಿಂದ ವೆಚ್ಚಮಾಡಿ ಮಗಳ ಮದುವೆ

ಮಾಡಿ ಕೊಡೋಪೇ ಹೀಗೆ ಮಾಡಿದರಾಯಿತು. ನಮಗಾದರೂ ಏನು? ಲಗೂನೆ ಮದುವೆ ಆಯ್ತಂತ ನೆಟ್ಟಗೆ ಆಯ್ತು. ನಮ್ಮ ಮಾವ ಏನು ಬೇಕಾ ಪಲ್ಲಿ ತಿನ್ನುತ್ತ ದನಗಳ ವ್ಯಾಪಾರ ಮಾಡ್ತ ಕೂಡತಾನು. ಮನೆಯೊಳಗೆ ನಾನು ಉಂಡರೇನ ಬಿಟ್ಟರೇನ ಅದರ ಚಿಂತಿನೂ ಇಲ್ಲ. ಅಲ್ಲೀ ಗಂಗಾನ ಮನೆ ಯೊಳಗ ಹರಟೆಗೆ ಕುಳಿತ ಅಂದರೆ ತೀರಿಹೋಯ್ತು. ಅವ್ವ ಇರುವ ತನಕ ಅಂಜಿ ಎರಡ ಹೊತ್ತ ಮನೆಗೆ ಊಟಕ್ಕಾದರೂ ಬರತಿದ್ದ. ಇತ್ತಿತ್ತಲಾಗ ಅದೂ ಇಲ್ಲ. ಇದ್ದರ ಇಂಥವ ಒಬ್ಬ ಸೋದರ ಮಾವ. ಹೊಲ ಮನೆ ಹೆಂಡರ ಮಕ್ಕಳನ್ನ ಎಂದೋ ಹಾಳಿಗೆ ಹಚ್ಚಿ ಇಲ್ಲಿ ಬಂದ ಕುಳಿತಾನು. ನನ್ನ ಜನ್ಮ ಇವನ ಕಡೆಯಿಂದ ಸುಧಾರಿಸುವುದೂ ಅಷ್ಟರಲ್ಲೇ ಅದೆ. ಕಲ್ಲಪ್ಪನನ್ನ ಮುಂದ ಮಾಡಿದಾಗ ಇಷ್ಟೆಲ್ಲ ಆಯ್ತು.' ಎಂದು ವಿಚಾರಿಸುತ್ತ ಬಾಬಣ್ಣ ಪತ್ರಾವಳಿಗಳನ್ನು ಎತ್ತುತ್ತಲಿದ್ದ. ಆ ಅಸಹಾಯ ಭಾವದಲ್ಲಿ ತಾನು ಮದು ಮಗನೆಂಬುದನ್ನೂ ಮರೆತು ಹತ್ತೆಂಟು ಎಲೆಗಳನ್ನು ಹೆಚ್ಚಾಗಿಯೇ ಕೂಡ ಹಾಕುವುದರಲ್ಲಿದ್ದ. ಅಷ್ಟರಲ್ಲಿ,—

"ಸಾಕು ಬಿಡಪ್ಪ ಬಾಬು, ಸುಮ್ಮನ ಶಾಸ್ತ್ರಕ್ಕ ಐದ ಎಲೆ ತಗಿಯೋದು" ಎಂದು ಚಂದ್ರವ್ವ ಎಚ್ಚರಿಸಿದಳು, ಅಕ್ಕರತೆಯಿಂದ.

"ತಗಿಯಲಿ ಬಿಡರೆಪ್ಪ! ತನ್ನ ಹೆಂಡತಿ ಪಾಲದ್ದೂ ತಾನೇ ತಗಿಯ ಲಿಕ್ಕೆ ಹತ್ತಿದಾನ. ಅಲ್ಲೇನು?"

ಎಂದು ಇನ್ನೊಬ್ಬ ನಗೆಯಾಡಿದ.

"ಈಗಿನಿಂದೂ ಇಷ್ಟ ಪ್ರೀತಿ ಮಾಡಿದರ ಹ್ಯಾಗಪ್ಪ?"

ಇನ್ನೊಬ್ಬ ಆ ಮಾತನ್ನು ಎತ್ತಿಕೊಟ್ಟ.

ಸಂಕೋಚದಿಂದ ಬಾಬಣ್ಣನ ಮುಖ ಸ್ವಲ್ಪ ಕೆಂಪಾಯಿತು. ಮುಸುರೆ ತೆಗೆಯುವದನ್ನು ಬಿಟ್ಟು ದೂರ ಸರಿದ.

"ಅವರ ಅನ್ನತಾರಂತ ನೀನೂ ಹಾಗೇ ಮಾಡುವಿ ಏನು? ತಗೊ ಅಷ್ಟ ಮುಸರಿಯನ್ನೂ ಬೋಳಿದುಕೊಂಡೇ ಬಿಡು....ಅಂದರೆ ಒಂದ ಮಾರಿಗೆ ಎಲೆ ಹಾಕಲಿಕ್ಕಾದರೂ ಬರತದ. ಇನ್ನೂ ಆ ಪಡಸಾಲೆಯೊಳಗ ಮಂದಿ ಕುಳಿತದ, ಊಟಕ್ಕ ಎಬ್ಬಿಸುವ ದಾರೀಕಾಯುತ್ತ."

ಎಂದು ತಾತಪ್ಪ ಹೇಳುತ್ತ ಬಂದ. ಅವನ ಮಾತನ್ನು ಅದೇಕೋ ಖಂಡಿಸುತ್ತ ಕಲ್ಲಪ್ಪ ಎದ್ದು ಬಂದು,—

" ಅವನೇನ ಮುಸರಿ ಹೊಡಿತಾನ ತಗೋ! " ಅಲ್ಲೇ ನಿಂತ ಮುಸುರೆ ಬಳಿಯುವವನ ಕಡೆಗೆ ನೋಡಿ " ಹೀಗ ಚಟ್ ಚಟ್ ವ್ಯೈಮಣಿಸಿ ತಗೊಳ್ಳರಿ ಅಲ್ಲ. " ಎಂದು ತಾನೇ ಸ್ವತಃ ಸ್ವಲ್ಪ ಮುಸರಿಯನ್ನು ಕಸಬರಿಗೆಯಿಂದ ಉಡುಗುತ್ತ " ನಾಳೆ ನಿಮ್ಮ ಮಕ್ಕಳ ಮದುವೆಯೊಳಗೂ ಬಂದ ಬಾಬಣ್ಣ ದುಡಿತಾನ ತಗೊಳ್ಳರಿ. ಇದೇನು ಒಬ್ಬರು ಒಬ್ಬರಲ್ಲೆ ಕಡ ಇದ್ದಾಂಗ ಅನ ಅಪ್ಪ—" ಎಂದ.

ಇಷ್ಟರಲ್ಲಿ ಬಾಬಣ್ಣ ದೂರ ಹೋಗಿ ಕೈ ತೊಳೆದುಕೊಂಡಿದ್ದ.

" ಎಲ್ಲಾ ಮಾಡತಾನ ಗೊತ್ತ ಅದ ಬಿಡು! ಯಾರ ಮುಂದ ಮುಚ್ಚಿಡತಾನ ಇಂಥಾದ್ದ. ನಮ್ಮ ಬಾಬ್ಯಾ ಮರುಳ. ನನ್ನ ಮಾತ ಕೇಳಲಿಲ್ಲ. "

ಎಂದು ಕಣ್ಣು ಕೆಂಪಗೆ ಮಾಡಿಕೊಂಡು ಮನದಲ್ಲಿಯೇ ಅಂದುಕೊಳ್ಳುತ್ತ ತಾತೋಬಾ ಒಳಗೆ ಹೋಗಿಬಿಟ್ಟ.

ಊಟ ಉಡಿಗೆಯಾಯಿತು. ಸಾಯಂಕಾಲ ಗೋಧೂಳಿ ಮುಹೂರ್ತದಲ್ಲಿ ಮದುವೆಯೂ ಆಯಿತು. ರಾತ್ರಿ ಎತ್ತೇರಿಸುವ ಸೀರೆಯ ಸಲುವಾಗಿ ಆಪ್ತ ಆಪ್ತರಲ್ಲಿ ತುಸು ತಂಟೆಯೂ ಬಂತು. ಆದರೂ ಕಲ್ಲಪ್ಪ ಎರಡೂ ಬಣದವರಿಗೆ ಹೇಳಿ ಸುಮ್ಮನಾಗಿಸಿದ. ಆದರಿಂದ ಮೆರವಣಿಗೆಯೂ ಆದಷ್ಟು ವೈಭವದಿಂದಲೇ ಸಾಗಿತು. ನೋಡಿದವರೆಲ್ಲ ಪರದೇಶಿ ಹುಡುಗನ ಮದುವೆ ಒಳ್ಳೆಯದಾಯಿತೆಂದು ಬಾಯಿ ತುಂಬ ಹೊಗಳಿದರು. ಚಂದ್ರವ್ವ " ಇನ್ನೇಲ್ಲಿ ಕೆಲಸ ತೀರಿತು. ಮನೆಗೆ ಹೋಗುವೆ " ಎಂದು ಎರಡು ಸಲ ಅಂದಳಾದರೂ ಬಾಬಣ್ಣ ಆಗ್ರಹ ಮಾಡಿದ್ದಕ್ಕೆ ಬೆಳತನಕ ಮೆರವಣಿಗೆಯ ಬೆನ್ನು ಹತ್ತಿ ತಿರುಗಿದಳು.

ಮುಂಜಾನೆ ಆಪ್ತರನ್ನು ಬೀಳ್ಕೊಳ್ಳುವ ಸಂದರ್ಭ. ಊಟಕ್ಕೆ ಮದುವೆಯ ಮನೆಗೆ ಎಲ್ಲರೂ ಬಂದಿದ್ದಾರೆ.

ಇನ್ನೇನು ತಂಗಳ ಹುಗ್ಗಿಯನ್ನಿಷ್ಟು ಹಾಕಿ, ತಾಯಿಹೊಟ್ಟೆ ತಣ್ಣಗೆ ಮಾಡುವ ಸೀರೆಗಳನ್ನಷ್ಟು ಉಡಿಸಿ ಕಳಿಸಿದರೆ ಪಾರಾದೆನೆಂದು ಕಲ್ಲಪ್ಪ ಅತ್ತಿಂದ ಇತ್ತ ಇತ್ತಿಂದ ಅತ್ತ ಓಡಾಡುತ್ತಿದ್ದಾನೆ. ಆಪ್ತರೆಲ್ಲ ಊಟ ತೀರಿಸಿಕೊಂಡು ಬಂದು ಮಂಟಪದಲ್ಲಿ ಹಾಸಿದ ಗುಡಾರದ ಮೇಲೆ ಕುಳಿತರು.

ಕಲ್ಲಪ್ಪನು ತನ್ನ ಜನಿವಾರದೊಳಗಿನ ಬೀಗದ ಕೈಯಿಂದ ಒಂದು ಕೋಣೆಯ ಬೀಗವನ್ನು ತೆಗೆದು ಒಳಗಿನಿಂದ ಹೊಸ ಅರಿವೆಯ ಗಂಟನ್ನೂ ಮೊರದಲ್ಲಿ ಉಡಿಯಲ್ಲಿ ಹಾಕಲಿಕ್ಕೆಂದು ಸ್ವಲ್ಪ ಅಕ್ಕಿಯನ್ನೂ ತಂದಿಟ್ಟನು.

ಮೆಲ್ಲಗೆ ಬಾಬಣ್ಣನ ಅತ್ತೆ ಮಾತು ತೆಗೆದಳು,—

" ನಿನ್ನೆ ಎತ್ತ ಏರಿಸುವ ಸೀರೆಗೊಂದು ಹಾಗೆ ಮಾಡಿದಿರಿ. ಇಂದೂ ಹಾಗೇ ಆದರ ನಡಿಯುವದಿಲ್ಲ ನೋಡು...."

ಇಲ್ಲಿಯ ವರೆಗೆ ಸುಮ್ಮನೆ ಕುಳಿತ ತಾತೋಬಾ ಹೇಳಿದ,—

" ಕೂಡಿದ ಮೇಲೆ ಕಾಡುವುದರಲ್ಲೇನಿದೆ ? ಒಬ್ಬರಿಗೊಬ್ಬರು ಸಂಬಾಳಿಸಿಕೊಂಡು ಹೋಗುವುದು...."

ಅವನ ಮಾತನ್ನು ನಡುವೆಯೇ ತಡೆದು, ಸಿಡಿದು ಬಿದ್ದವರಂತೆ ನುಡಿದಳಾಕೆ,—

" ಹಾಂ ! ಹೀಗೆ ಹೇಗನ್ನುವಿರಿ ನೀವು, ಈಗ ತಗೋದಿದ್ದರೆ ನಮ್ಮ ಪೋರಿ ಕಾಣೋದ ಯಾವಾಗ ಸೀರಿ ? ಇಂಥಾ ಮದುವಿ ಅಂಥಾ ಮದುವಿ ಮಾಡತೀರಿ, ಮೂರಿಪ್ಪತ್ತ ರೂಪಾಯಿ ಸೀರೇನ ಬಹಳ ಏನ ನಿಮಗ ? ಈಗ ಊಟಕ್ಕ ಉಡಿಗೆಗೆ ಸಾವಿರ ಎರಡ ಸಾವಿರ ಖರ್ಚು ಮಾಡುವದಿಲ್ಲೇನ ? "

" ಅಲ್ಲಽ ಸಕ್ಕವ್ವ, ಏನ ಮಾಡಿದರೂ ನಿನ್ನ ಅಳಿಯನಿಗೇ ಕೊರಳಿಗೆ ಬರಲ ಅಲ್ಲ ? ನಾಳೆ ಸುಗ್ಗಿ ಆಯ್ತು, ಹೊಲಗಳ ಬೆಳದೂ ಅಂದರ, ತಗೊಂಡಾರಲ್ಲ. ತಮ್ಮ ಹೆಂಡರಿಗೇನ ತಾವ ತಗೊಳ್ಳದ ಇರತಾರು ? ಎಂಥಾ ಹುಚ್ಚ ಇದ್ದಾದೀ ಅವ್ವಾ ನೀ ? " ಚಂದ್ರವ್ವ ನಡುವೆ ಬಂದು ಬುದ್ಧಿಯನ್ನು ಹೇಳಹತ್ತಿದಳು.

ಅಲ್ಲಿಯೇ ಕಟ್ಟೆಯ ಮೇಲೆ ಒಂದು ಬದಿಗೆ ಕುಳಿತ ಬಾಬಣ್ಣ ಚಂದ್ರವ್ವನನ್ನು ಕೃತಜ್ಞತೆಯ ದೃಷ್ಟಿಯಿಂದ ನೋಡುತ್ತ ಇದ್ದ. ಆದರೂ ಅವನತ್ತೆ ಮಾತು ಮುಂದರಿಸಿದಳು,—

" ಅಲ್ಲಽ ಚಂದ್ರಾ, ನೆಗದ ನೂರಾರ ರೂಪಾಯಿ ಕೊಟ್ಟೆದೇವು. ಮೇಲೆ ಅಳಿಯ ಒಬ್ಬನೇ ಅಂತ ಲೆಕ್ಕ ಇಲ್ಲದ ಖರ್ಚ ಮಾಡಿದೇವ. ಕೊಡಾನೋ ತಂಬಿಗೆಯೋ ಒಂದೋ ಎರಡೋ ...ಮದುವಿ ಮಾಡಿ ನೋಡು ಮನೆ ಕಟ್ಟಿ ನೋಡು ಅಂತಾರ. ಖರ್ಚೇನ ಒಂದೋ ಅಂದರೆ ಹತ್ತ ಆಗ್ತದ.

ಇರಲಿ. ಎಲ್ಲಾ ಮಗಳ ಜನ್ಮಕ್ಕನೇ ಆಗ್ತದ. ಮನೆಯಲ್ಲಿ ಅತ್ತೆ ಇಲ್ಲ. ಇಡುವಾಕೆ ತೆಗೆಯುವಾಕೆ ನಮ್ಮ ಮಗಳೇ ಅಂತ ಕೊಡಲಿಕ್ಕೆ ಹೋದರೇ— ಇವರ ಹೀಗೆ ಜನರೊಳಗ ಒಪ್ಪುವಂಥಾ ನಾಲ್ಕ ಅರಿವೇ ತೆಗೋಬಾರದು ? ”

ಸಕ್ಕವ್ವ ಇನ್ನೂ ಎಷ್ಟು ಹೊತ್ತು ಮಾತಾಡುತ್ತಿದ್ದಳೋ ಆದರೆ ನಡು ವೆಯೇ ಕಲ್ಲಪ್ಪ ಬಂದು ಹೇಳಿದ,—

“ ಸಕ್ಕವ್ವ, ಇಷ್ಟೆಲ್ಲ ತಿಳಿತದ ನಿನಗ, ಮತ್ತ ವಾದ ಹಾಕುವಿ, ಏನ ಹೇಳೂಣವ್ವ ನಾವು ? ಹೋಗುವ ವೇಳೆದೊಳಗ ಸವಿಸವಿಯಿಂದ ಹೋಗಿರಿ. ಏಳ, ಸೀರಿ ಉಟ್ಟಕೊಳ್ಳ ಏಳು....”

ತಾತಪ್ಪನಿಗೆ ಅದೇನು ಸತ್ಯಸಂಗತಿ ಹೊಳೆದಿದ್ದಿತೋ ಏನೋ. ತಟ್ಟನೆ ನುಡಿದ,—

“ ಇಷ್ಟು ಬೆಣ್ಣೆ ಹಚ್ಚಲಿಕ್ಕೇನ ಇವರಿಗೆ ಬಿಡು ! ಮಾಡಿದೇವ ಮಾಡಿ ದೇವ ಅಂದರ ನಮ್ಮ ಅಳಿಯನಿಗೆ ಇವರೇನ ಮಾಡಿವಾರೂ. ಕೊಟ್ಟ, ರೂಪಾಯಿದೊಳಗ ಒಂದ ಪಟಕೆ ತರಲಿಲ್ಲ, ನಾಲ್ಕ ಜನ ಹೌದ ಅನ್ನುವ ಹಾಗೆ....”

ಆಪ್ತರೆಲ್ಲ ಬೆರಗಿನಿಂದ ಕೇಳುತ್ತಲಿದ್ದರು. ಮಿಕಿ ಮಿಕಿ ಒಬ್ಬರ ಮುಖ ವನ್ನು ಒಬ್ಬರು ನೋಡತೊಡಗಿದರು. ಅಷ್ಟರಲ್ಲಿ ಕಲ್ಲಪ್ಪನೇ ಮುಂದೆ ಬಿದ್ದು ಮಾತಾಡಿದ. ತಾತಪ್ಪನನ್ನೇ ಪ್ರತಿಭಟಿಸುವ ರೀತಿಯಲ್ಲಿತ್ತು ಮಾತು,—

“ ಸಾಕು ತಾತ್ಯಾ, ಈಗ ಹಿಂದಿನಿಂದ ಎಲ್ಲಾ ತರ್ಕ್ಯೋತ ಕೂಡೂ ಹಾಗಿಲ್ಲ. ಗೋಡೆ ತೊಳೆದಷ್ಟು ಕೆಸರೇ ಹೊರಡತದ. ಈಗ ಕೂಡಿಸು ಕೆಲಸಾ ಮಾಡೋದೋ ಮುರಿಯುವ ಕೆಲಸಾ ಮಾಡೋದೋ ?....”

ಕಕ್ಕನ ಮಾತಿಗೆ ಪುಷ್ಟಿಯನ್ನು ಕೊಡುತ್ತ ಬಾಬಣ್ಣ ಹೇಳಿದ,—

“ ನಮ್ಮ ಮಾವನ ಏನ ಮಾಡತೀರಿ ಏಳಿರಿ. ಬಿಸಿಲ ಆಗತದ. ಆಯಾರ ಮಾಡಕೊಳ್ಳರಿ. ಮತ್ತೆ ಮಳೆಮಾರ ಅಂತ ಲಗೂನ ಗಾಡಿ ಕೊಳ್ಳ ಕಟ್ಟಿದರ ಹೊತ್ತ ಇರತ ಊರ ಸೇರತೀರಿ. ”

“ಆ ಹೆಂಗಸರನ್ನ ಏನ ಮಾಡತಿ ಏಳಪ್ಪ. ನೀ ರುಂಬಾಲ ಸುತ್ತ ಏಳು.”

ಎಂದು ಕಲ್ಲಪ್ಪ, ಬಾಬಣ್ಣನಿಗೆ ಹೆಣ್ಣು ಕೊಟ್ಟ ಮಾವನನ್ನು ಕೈಹಿಡಿದು ಎಬ್ಬಿಸಿದ. ಹಾಗೆಯೇ ಪಂಡಿತರ ಕಡೆಗೆ ಹೊರಳಿ,

" ಏಳಿರಿ ಷಂಡಿತರೇ, ಏನ ನೋಡತ ಕೂತಿದೀರಿ ? ಬೀಗನಿಗೆ ರುಮಾಲ ಸುತ್ತ ಏಳರಿ ! " ಎಂದು ಆಢ್ಯತೆಯಿಂದ ಆಜ್ಞಾಪಿಸಿದ. ಹೇಗಾದರೂ ತನ್ನ ಹುಳುಕು ಹೊರಬೀಳದೆ ಕೆಲಸ ಮುಗಿದರೆ ನಾಕಾಗಿತ್ತವನಿಗೆ. ಆದರೂ ಮೇಲೆ ತೋರಿಕೆಯ ಗಾಂಭೀರ್ಯ ಇದ್ದೇ ಇತ್ತು.

ಬೀಗ ಹೆಂಡತಿಯ ಮುಖದ ಕಡೆಗೆ ನೋಡುತ್ತ ನೋಡುತ್ತ ಎದ್ದ. ಆಗಲೇ ಹೇಳಿದ,—

" ಪಂಡಿತರ, ನಮ್ಮ ಆಯಾರು ಅಷ್ಟ ಮಾಡಿಬಿಡಿರಪ್ಪ! "

" ಬಾ, ತಾತೋಬಾ, ರುಮಾಲ ಸುತ್ತಿಕೋ ಬಾ" ಎಂದು ಪಂಡಿತನು ತಾತಪ್ಪನನ್ನು ಕರೆದ. ಆಪ್ತರ ಅರಿವೆಯ ಗಂಟನ್ನು ಬಿಚ್ಚುತ್ತ,—

" ನನಗ ಯಾತಕ್ಕ ಬೇಕು ? ಅಲ್ಲೇ ಕಲ್ಲಪ್ಪ ಇದ್ದಾನ ಸುತ್ತಿಬಿಡು " ಎಂದು ತಾತಪ್ಪ ಕಲ್ಲನನ್ನು ತೋರಿಸಿದ.

" ಹಾಗೆ ಹೇಗೆ ಮಾಡಲಿಕ್ಕೆ ಬಂದೀತ ? ಬೀಗರ ಮಾನ ಅವರಿಗೇ ಇರಬೇಕೆಂದರೆ ಚಂದ. "

ಕಲ್ಲಪ್ಪ ದೇಶಾವರಿ ನಗೆ ಬೀರುತ್ತ ಹೇಳಿದ.

" ಇರಲಿ, ಮಾಮಾ ಸುತ್ತಿಕೋ ಹೋಗು. "

ಎಂದು ಬಾಬಣ್ಣನೂ ಹೇಳಿದ. ಅದರಿಂದ ತಾತಪ್ಪ ಗುಸ್ಸಿನಿಂದ ಎದ್ದು ಹೋಗಿ ರುಮಾಲು ತಲೆಗೆ ಹಚ್ಚಿಕೊಂಡು ತೆಗೆದಿಟ್ಟ. ಇದನ್ನು ಕಂಡು ಕಲ್ಲಪ್ಪ ಮುಖ ಹೊರಳಿಸಿ ಮೂಗುಮುರಿದ. ಅತ್ತ ಬಾಬಣ್ಣನ ಲಕ್ಷ್ಯ ಈಗಿರಲಿಲ್ಲ. ಆಪ್ತರು ಉಡಿಸುವ ತಾಯಿಹೊಟ್ಟೆ ತಣ್ಣಗೆಮಾಡುವ ಸೀರೆಯನ್ನು ಯಾರಿಗೆ ಉಟ್ಟುಕೊಳ್ಳಲಿಕ್ಕೆ ಹೇಳಬೇಕೆಂದು ಯೋಚಿಸುತ್ತಲಿದ್ದ. ಚಂದ್ರವ್ವ ದೂರಿನ ಆಪ್ತರಲ್ಲಿ ಒಬ್ಬಳು. ಅವಳೂ ಅವಳ ಮಗ ಮಾಸ್ತರ ಆದಪ್ಪನೂ ಮೂರು ನಾಲ್ಕು ದಿನ ಮದುವೆಯಲ್ಲಿ ಮನನ್ನುಗೊಟ್ಟು ದುಡಿದಿರುವರೇನೋ ನಿಜ. ಆದರೆ ಹತ್ತೆಂಟು ರೂಪಾಯಿಗಳ ಸೀರೆ ಉಡಿಸುವದು ಉಚಿತವಾದೀತೆ? ಚಂದ್ರವ್ವನಿಗೆ ಒಂದು ಕುಪ್ಪಸವನ್ನೇನೋ ಮಾಡಿಬಿಡಬಹುದು. ಸೀರೆಯನ್ನು ಅಕ್ಕ ಬಾಳಾಬಾಯಿಯೇ ಉಟ್ಟುಕೊಳ್ಳಲಿ, ಎಂದು ಯೋಚಿಸುತ್ತಲಿದ್ದ. ಅಷ್ಟರಲ್ಲಿ ಕಲ್ಲಪ್ಪ ಹೇಳಿದ, —

"ಹೂಂ! ಬಾಳವ್ವ ಬಾ. ತಾಯಿಹೊಟ್ಟೆ ತಣ್ಣಗ ಮಾಡುವ ಸೀರಿ ಉಟ್ಟಕೋ ಬಾ ನೀನೇ. ನಿನಗೇ ಲಾಭ ಆದೆ ತಗೋ. ಕಳಸಗಿತ್ತಿ ಸೀರೆ ಒಂದು ಇದೊಂದು, ಎರಡ ಸೀರಿ ಕೊಡದಿ ಅಲ್ಲ, ತಮ್ಮನ ಮದುವೆ ಯೊಳಗ."

"ಚಂದ್ರವ್ವ ಅಬಜಿಗೂ ಒಂದ ಛಲೋ ಕುಪ್ಪಸ ಹಾಕಿರಿ ಉಡಿ ಯೊಳಗ. ಈಗೇ ಆಗೋದರ ಕೂಡ ಆಗಿಹೋಗಲಿ. ಹಿಂದಿನಿಂದ ನಮ್ಮ ಕೈಯಿಂದ ಏನ ಆಗೋದ ಇಲ್ಲ, ಹೋಗೋದ ಇಲ್ಲ."

ಕಲ್ಲಪ್ಪನನ್ನು ಉದ್ದೇಶಿಸಿ ಬಾಬಣ್ಣ ಹೇಳಿದ.

"ನನಗೇತಕೋ ಬಾಬು, ಹುಚ್ಚಗಿಚ್ಚ ಇದ್ದೀದಿ ಏನ ನೀ. ಇಂಥಾ ಖರ್ಚಿನೊಳಗಿಂದ ನೀನೇ ಒಬ್ಬ ಪಾರಗಾಣು. ಹಿರಿಯರಿಲ್ಲದ ಮನೆ, ಹುರುಟ ಹುಡುಗರು....ನಿನ್ನ ಜನ್ಮ ಸುಧಾರಿಸಿದರೆ ಸಾಕು. ನನಗೆಲ್ಲ ಮಾಡಿದಂತೆ ಆದೆ." ನಿಜವಾಗಿಯೂ ಚಂದ್ರವ್ವನ ಹೃದಯದಿಂದ ಮಾತು ಬಂತು.

"ಇರಲಿ, ಅಬಜಿ, ಸೀರಿಯನ್ನೇ ಉಡಸೋದು ಆದರೂ ಕುಪ್ಪಸ ಮಾಡತೇವಿ. ಮಾಡಕೋ."

ಕೃತಜ್ಞತೆಯ ಸ್ವರದಿಂದ ಬಾಬಣ್ಣ ಮತ್ತೊಮ್ಮೆ ಆಗ್ರಹಮಾಡಿ ಹೇಳಿದ. ಆಗ ಚಂದ್ರವ್ವ ಸಮ್ಮನಾದಳು.

ಉಡುಗೊರೆ ಕೊಡುವದೆಲ್ಲ ಆಯಿತು. ಆಪ್ತರನ್ನು ಊರ ಅಗಸೆಯ ವರೆಗೆ ಕಳಿಸಿಯೂ ಬಂದರು. ಬಾಬಣ್ಣ ಅಳಿಯನಾದರೂ ದೂರದವರೆಗೆ ಕಳಿಸಲು ಹೋಗಿದ್ದ. ಅವನ ಹೆಂಡತಿ ಪದ್ಮಾವತಿ ಇನ್ನು ಐದೇ ದಿನಗಳಲ್ಲಿ ಮತ್ತೆ ತಿರುಗಿ ಬರುವವಳಿದ್ದಳಾದರೂ ಅವನ ಮನಸ್ಸೆಲ್ಲ ಅತ್ತ ಕಡೆಗೇ ಓಡು ತ್ತಿದ್ದಿತು. ಹೋಗುವಾಗ ಲಜ್ಜೆಯಿಂದ ಆರಕ್ತವಾದ ಮುಖವನ್ನು ಹೊರ ಳಿಸಿ ಹೊರಳಿಸಿ ತನ್ನ ಕಡೆಗೆ—ಜನರು ನೋಡಿದರೆ ಏನನ್ನುವರೋ ಎಂಬ ಹೆದರಿಕೆಯಿಂದ—ನೋಡುತ್ತಿದ್ದ ದೃಶ್ಯ ನೆನಪಾಗಿ ಎದೆ ಜುಮ್ಮೆನ್ನುವುದು. ಒಂದು ತರದ ಹೊಸ ಹುರುಪು ಮೂಡುವುದು, ಬಗೆ ಅರಳುವುದು.

ಅದೇ ಆನಂದದಲ್ಲಿ—ಆದರೂ ಭಾರವಾದ ಮನಸ್ಸಿನಿಂದ ಮನೆಗೆ ಬಂದು ಸೇರಿದ ಬಾಬಣ್ಣ. ಮಂಟಪ, ಅದಕ್ಕೆ ಕಟ್ಟಿದ ಬಾಡಿದ ತೋರಣ ಗಳೆಲ್ಲ ಈಗ ಭಣಭಣವೆನಿಸತೊಡಗಿದುವು.

ಓಣಿಯೊಳಗಿನ ಜನರೆಲ್ಲ ಅತ್ತಿತ್ತ ಹೋದನಂತರ ಕಲ್ಲಪ್ಪ ಬಾಬಣ್ಣಾ ಸಿಗೆ ಹೇಳಿದ,—

" ಇಂದ ಮಧ್ಯಾಹ್ನದೊಳಗ ಲೆಕ್ಕ ಅಷ್ಟ ನೋಡಬೇಕಪ್ಪ. ಎಷ್ಟ ಖರ್ಚ ಆಯ್ತು, ಎಷ್ಟ ಬಿಟ್ಟಿತು, ಈಗಲೇ ನೆನಪ ಇದ್ದಾಗಲೇ ಹೇಳಿ ಋಜುವಾತ ಮಾಡಿಬಿಡೋದ ನೆಟ್ಟಗ.... "

" ರುಜುವಾತ ಮಾಡಲಿಕ್ಕೇನ ಬಿಡು! ಎಲ್ಲಿ ಹೋಗ್ತದ. "

" ಅಲ್ಲಾ, ನಾಳೆ ಜನರ ಕಡೆಯಿಂದ ಹೆಸರ ಬರಬಾರದು. " ತಾತಪ್ಪ ಸನಿಹದಲ್ಲಿ ಇಲ್ಲದ್ದನ್ನು ಕಂಡು "ನಿಮ್ಮ ಮಾವನ ಸ್ವಭಾವ ಬೇರೆ....ನೀ ಸಣ್ಣ ಹುಡುಗ, ಅದಕ್ಕೇ ಅನ್ನೋದ ನಾ. " ಎಂದು ದನಿ ತಗ್ಗಿಸಿ ಹೇಳಿದ.

" ನಾನೇ ಗಟ್ಟಿ ಇದ್ದಮೇಲೆ ಯಾರ ಏನ ಅಂದ ನಮಗೆ ಏನಮಾಡ ತಾರ ಬಿಡು!"

ಹರಯದ ಹುರುಪಿನಲ್ಲಿ—ಮುಂಬರುವ ಹೆಂಡತಿಯ ಸಹವಾಸದ ಸವಿ ಕನಸಿನಲ್ಲಿ—ಬಾಬಣ್ಣಾ ನುಡಿದುಬಿಟ್ಟ!

೩

ಬಾಬಣ್ಣಾನ ಮದುವೆಯಾಗಿ ಒಂದು ತಿಂಗಳು ಕಳೆಯಿತು ಮನೆಯಲ್ಲಿ ಪದ್ಮಾವತಿಯೂ ಬಂದಳು. ಹೆಂಡತಿಯ ಸಂಗಡ ಬಂದ ಅವಳ ತಾಯಿ ನಾಲ್ಕು ದಿನ ನಿಂತು, ಮಗಳಿಗೆ ಗಂಡನ ಮನೆಯ ರೀತಿನೀತಿಗಳನ್ನು ಅರುಹಿ ಹೋದಳು. ಒಮ್ಮೆ ನಾದಿನಿ ಬಂದು ಹೋಗುವವರೆಗೆ ಮನೆಯಲ್ಲಿ ಹೆಂಗಸರಾರಾದರೂ ಬೇಕೆಂದು ಬಾಳಾಬಾಯಿ ಇನ್ನೂ ತವರು ಮನೆಯಲ್ಲಿಯೇ ಇದ್ದಳು. ಆದರೂ ದಿನಾಲು ಊರಿಗೆ ಹೊರಡುವ ಲವಲವಿಕೆಯನ್ನು ತೋರುತ್ತಿದ್ದಳು. ಬಾಬಣ್ಣಾನಿಗೂ ಅಕ್ಕನನ್ನು ಆದಷ್ಟು ಬೇಗ ಕಳಿಸಿಕೊಡಬೇಕೆಂದು ಅನ್ನಿಸುವದು. ಮದುವೆಯ ಗೊಂದಲ ಒಮ್ಮೆ ತೀರಿ, ತಾವಿಬ್ಬರೇ ಯಾವಾಗ್ಗೆ ಇರುವಂತಾಗುವದೆಂದು ಆತ ಯೋಚಿಸುತ್ತಿದ್ದ. ಆದರೆ ಅತ್ತೆಯೇ ಹೋಗುವಾಗ ಮಗಳಿಗೆ " ಬಾಳಾಬಾಯಿಯನ್ನು ನಾಲ್ಕು ದಿನ ಇಟ್ಕೊಕೋ, ನಿನ್ನ ಜೊತೆಗೆ ಇರಲಿ. ಇನ್ನೂ ಹೊಸ ಮನೆ, ಹೊಸ ಊರು. " ಎಂದು ಹೇಳಿ ಹೋಗಿದ್ದಳು. ಅದರಿಂದಲೇ ಮನಸ್ಸಿಲ್ಲದಿದ್ದರೂ ಪದ್ಮಾವತಿಯು ಅತ್ತಿಗೆಗೆ ನಿಲ್ಲಲು ಆಗ್ರಹಮಾಡುತ್ತಿದ್ದಳು.

ನಾದಿನಿ ತಮ್ಮಂದಿರ ಈ ಕಣ್ಣುಮುಚ್ಚಾಲೆಯಾಟ ಬಾಳಾಬಾಯಿಗೆ ತಿಳಿಯದೆ ಹೋಗುತ್ತಿರಲಿಲ್ಲ. ಅದಕ್ಕೆಂತಲೇ ಅವಳೂ ದಿನಕ್ಕೆ ನಾಲ್ಕು ಸಾರೆ ತಮ್ಮನಿಗೆ ಅನ್ನುತ್ತಿದ್ದಳು,—

" ಆಯಿತು. ಮದುವೆಯಾಯಿತು ಎಲ್ಲಾ ಆಯಿತು. ನಿನ್ನ ಹೆಂಡತಿ ಬಂದಳು. ಜೋಡಿ ಆದಿರಿ. ಮದುವೆ ಸಾಲದೊಳಗಿಂಬೇ ಏಳೋದ ಕಠಿಣ. ಇನ್ನೇನ ಕೂಡಿಸುವಂತಿಲ್ಲ, ಉಡಿ ತುಂಬುವಂತಿಲ್ಲ. ಮದುವೆ ಯೊಳಗೆ ಗೋದಿ ಉಡಿಯಕ್ಕಿ ಹಾಕಿ ಕೊಟ್ಟಾಗನ ಗೊತ್ತಾಗೇದ. ಇನ್ನೇತಕ್ಕೆ ಇಟ್ಟುಕೊಳ್ಳುವಿ ನನ್ನಾ ? "

ಮದುವೆಯ ಸಾಲವೆಂದೊಡನೆ ಪದ್ಮಾವತಿಯ ಮುಖ ಸಪ್ಪಗಾಗು ವುದು. ಗಂಡನ ಮನೆ ಒಳ್ಳೆಯದು, ಸಾಲವಿಲ್ಲ, ಅತ್ತೆಯ ಕಾಟವಿಲ್ಲ. ನಾಲ್ಕು ಕೂರಿಗೆ ಹೊಲವಿದೆ. ಇದ್ದ ಗಂಡನ ಸೋದರಮಾವನೊಬ್ಬ ದಿನಕ್ಕೆ ಎರಡು ಸಲ ಊಟಕ್ಕೆ ಬಂದು ಹೋದನೆಂದರೆ ತೀರಿತು. ಮನೆಗೆಲ್ಲ ತಾನೇ ಒಡತಿ, ತನ್ನ ಗಂಡನೇ ಒಡೆಯ ಎಂದು ಭಾವಿಸಿದ್ದಳು

ಅವಳ ಭಾವನೆ ಬಹಳಷ್ಟು ತಪ್ಪಾಗಿರಲಿಲ್ಲ. ತಾತಪ್ಪ ದನಕರಗಳವ್ಯಾಪಾ ರದಲ್ಲಿ ದಲಾಲಿ ಮಾಡುವ. ಸಿಕ್ಕಷ್ಟು ನಾಲ್ಕು ದುಡ್ಡು ಹೊರಗೆ ಅಲ್ಲಿ ಇಲ್ಲಿ ತಿಂದು ವೆಚ್ಚಮಾಡುವ. ಮನೆಗೆ ಖಾನಾವಳಿಗೆ ಊಟಕ್ಕೆ ಬರುವಂತೆ ಬಂದು ಹೋಗುವ. ಆಗ ಅಳಿಯ ಮನೆಯಲ್ಲಿ ಇದ್ದರೆ"ಹೊಲದೊಳಗ ಏನ ನಡದದ? ಏನು ಮಾಡುತ್ತಿರುವಿ ? " ಎಂದು ಒಂದೆರಡು ಮಾತು ಕೇಳುವ. ಇಲ್ಲ ವಾದರೆ ಇಲ್ಲ. ಊಟವಾದಮೇಲೆ ಆತ ನೀರು ಉಗುಳಲಿಕ್ಕೆಂದರೆ ಗಂಗವ್ವನ ಅಂಗಳಕ್ಕೇನೇ ಹೋಗಿರುವ.

ಏನೋ ತಾಯಿಯ ಅಣ್ಣ, ಬಹಳ ದಿನಗಳಿಂದ ಮನೆಯಲ್ಲಿದ್ದಾನೆ. ತನ್ನ ತಂದೆ ತೀರಿ ಕೊಂಡಾಗಿನಿಂದಲೂ ಮನೆತನವನ್ನು ಸಾಗಿಸುತ್ತ ಬಂದಿ ದ್ದಾನೆ. ಅವನಿಗೂ ಯಾರಿಲ್ಲ. ದಿನಕ್ಕೆರಡು ಸಲ ಉಂಡು ಹೋಗುತ್ತಾನೆ, ಹೋಗಲಿ. ಎಂದು ಕೊಂಡ ಬಾಬಣ್ಣನು ಸುಮ್ಮನಿದ್ದ.

ಗಳಿಸಿದ್ದು ಮನೆಗೆ ತರುವಂತಿಲ್ಲ. ಕೇವಲ ಉಣ್ಣಲಿಕ್ಕಷ್ಟು ಮನೆ ನನ ಪಾಗುವದೀತನಿಗೆ. ಯಾರು ಮಾಡಿ ಹಾಕಬೇಕಿವನಿಗೆ ? ಒಂದೆರಡು ಸಲ

ಪದ್ಮಾವತಿ ಮನದಲ್ಲಿಯೇ ಅಂದುಕೊಂಡಳಾದರೂ ಇನ್ನೂ ಹೊಸ ಮನೆ, ಗಂಡನ ಮನಸ್ಸು ಹೇಗೋ ಏನೋ ಎಂದು ವಿಚಾರಿಸಿ ಸುಮ್ಮನಿದ್ದಳು.

ಮನೆಯಲ್ಲಿ ಬಾಳವ್ವನನ್ನು ಕಳಿಸಿಕೊಡುವ ಸಿದ್ಧತೆ ನಡೆದಿದ್ದಿತು. ಕಡಲೆಯ ಬೇಳೆ ತಂದು ಬೀಸಿದ್ದರು. ಎಣ್ಣೆ ತರಿಸಿದ್ದರು. ಉಂಡೆಯ ಉಂಡಿಗಳನ್ನು ಕಟ್ಟಿ ಕೊಡುವದು. ಆಪ್ತರು ಉಡಿಸಿದ ಸೀರೆ ಇದೆ. ನಾಲ್ಕೈದು ರೂಪಾಯಿ ಕೊಟ್ಟು ಒಳ್ಳೆಯ ಕುಪ್ಪಸ ಒಂದನ್ನು ಶೆಟ್ಟರ ಅಂಗಡಿಯಿಂದ ಉದ್ರಿ ತಂದದ್ದಾಯಿತು. ಸದ್ಯಕ್ಕೆ ಖರ್ಚಿನ ಕೆಲಸ ತೀರಿದಂತಾಯಿತು. ಮನೆಯಲ್ಲಿ ನಾಲ್ಕು ಚೀಲ ಜೋಳ ಅವೆ. ಮುಂದೆ ಸುಗ್ಗಿಯವರೆಗೆ ಹೇಗಾದರೂ ನಾವು ಅವುಗಳ ಮೇಲೆ ಸಾಗಿಸುವೆವು, ಎಂದು ಬಾಬಣ್ಣ ವಿಚಾರಿಸಿದ್ದ.

ಒಳ್ಳೆಯ ರೀತಿಯಿಂದ ಸಲಹೆ ತೋರುವವಳೆಂದು, ಉಂಡಿ ಕಟ್ಟಿ ಕೊಡಲಿಕ್ಕೆ ದೂರಿನ ಮನೆಯವಳಾದರೂ ಚಂದ್ರನನ್ನೇ ಕರೆದು ತಂದಿದ್ದ ಬಾಬಣ್ಣ. ಕಾಳು ಕಡಿಯುವ ಕೆಲಸ ನಡೆದಿದೆ. ಪದ್ಮಾವತಿ ಹಿಟ್ಟು ಕಲಿಸಿ ಕೊಡುತ್ತಿದ್ದಾಳೆ. ಚಂದ್ರವ್ವ ಒಲೆಯ ಬದಿಗೆ ಕುಳಿತು ಕಾಳು ಕಡಿಯುತ್ತಿದ್ದಾಳೆ. ಅತ್ತಿಗೆಯ ಠೀವಿಯಿಂದ ಬಾಳಾಬಾಯಿ ಅಲ್ಲಿ ಇಲ್ಲಿ ಸುಳಿದಾಡುತ್ತಿದ್ದಾಳೆ. ಬಾಬಣ್ಣ ಹೆಂಡತಿಯನ್ನು ಬಿಟ್ಟು ಹೊರಗೆ ಇರಲಿಕ್ಕಾಗದೆ ಅಲ್ಲೇ ಒಲೆಗೆ ಉರುವಲ ಹಾಕುತ್ತ ಕುಳಿತಿದ್ದಾನೆ. ನಾಳೆ ಯಾವ ಗಾಡಿಗೆ ಹೋಗುವುದು, ಸಂಗಡ ಯಾರು ಕಳಿಸಲಿಕ್ಕೆ ಹೋಗುವುದು, ಎಂಬ ವಿಷಯಕ್ಕೆ ಮಾತುಕತೆಗಳು ನಡೆದಿವೆ.

"ತಾತ್ಯಾ ಮಾವಾ ಹೋದಾರಂತ...."

ಪದ್ಮಾವತಿ ಹೇಳಿದಳು. ಎಲ್ಲಿ ತನ್ನ ಗಂಡನೇ ಹೋಗುವನೇನೋ ಎಂಬ ಹೆದರಿಕೆ ಅವಳ ದನಿಯಲ್ಲಿ ಇತ್ತು.

"ಅವನು ಎಲ್ಲಿ ಇರತಾನೋ ಯಾವಾಗ್ಗೆ ಬರತಾನೋ. ಒಂಭತ್ತು ತಾಸ ಆಗಿ ಹೋದರೂ ಇನ್ನೂ ಊಟಕ್ಕ ಮನೆಗೆ ಬಂದಿಲ್ಲ." ಎಂದ ಬಾಬಣ್ಣ.

"ಅವರ ಇಲ್ಲ ಆದರೆ ಕಲ್ಲಾ ಕಾಕಾನ ಕಳಸರಿ."

ಖಂಡಿತ ಸ್ವರದಲ್ಲಿ ನುಡಿದಳು ಪದ್ಮಾವತಿ.

" ಮತ್ತ ಹತ್ತೆಂಟ ರೂಪಾಯಿ ಬೇರೀಜು ಮಾಡಲಿಕ್ಕೆ ಹೌದ? " ಬಾಳಾಬಾಯಿ ಕೇಳಿದಳು.

ಇವರ ಮಾತುಗಳನ್ನು ಕೇಳುತ್ತ ಇಲ್ಲಿಯವರೆಗೆ ಚಂದ್ರವ್ವ ಸುಮ್ಮ ನಿದ್ದಳು. ಈಗ ಕೇಳಿದಳು,—

" ಬಾಬುನ ಕರಕೊಂಡ ಹೋಗಬೇಕೆಂತ ಮಾಡೀದಿ ಏನು? "

ಬಾಳಾಬಾಯಿ ಸುಮ್ಮನಾದಳು. ಪದ್ಮಾವತಿ ಏನೋ ಹೇಳಬೇಕೆಂದ ಳಾದರೂ ಲಜ್ಜೆಯಿಂದ ಹೇಳಲಿಲ್ಲ. ಕೇವಲ ನಾದಿನಿಯ ಮುಖದ ಕಡೆಗೆ ನೋಡಿದಳು, ಅವಳ ಬಾಯಿಂದ ಏನು ಹೊರಡುವದೆಂದು. ಚಂದ್ರವ್ವನೇ ಮುಂದೆ ಹೇಳಹತ್ತಿದಳು,—

" ಹಸಿ ಮೈಯೊಳಗ ಈಗs ಯಾತಕ್ಕ ಬರತಾನ ಬಾಬು? ಮತ್ತ ಯಾರನ್ನಾದರೂ ಕರೆದುಕೊಂಡು ಹೋಗು. "

ಇಲ್ಲಿಯವರೆಗೆ ಬಿಗಿಹಿಡಿದ ಉಸಿರನ್ನು ಪದ್ಮಾವತಿ ಒಮ್ಮೆಲೇ ಬಿಟ್ಟಳು. ಹೃದಯ ಹಗುರಾಯಿತು.

" ಯಾರರs ಬರವಲ್ಲರೇಕೆ. " ತುಸು ತಡೆದು ಬಾಳಾಬಾಯಿ ಮಾತು ಮುಂದರಿಸಿದಳು, " ಯಾರು ಕಳಸಲಿಕ್ಕೆ ಬರುವವರು? ಯಾವ ಗಾಡಿಗೆ ಹೊರಡುವುದು, ಇದೇ ನಡಿಯಿತು. ನನಗ ಉಡಿಸುವ ಸೀರೆಯ ಬಗ್ಗೆ ಏನ ಹೇಳವಲ್ಲರಿ ಅಲ್ಲ? " ಸ್ವಲ್ಪ ಬಿಗುವಿನ ಸ್ವರದಲ್ಲಿ ಮಾತಿತ್ತು.

ಚಂದ್ರವ್ವ ಏನೋ ಕೇಳಬೇಕೆಂದಳು. ಆದರೆ ಏನೋ ವಿಚಾರ ಅಡ್ಡ ಬಂದು ಅಷ್ಟಕ್ಕೇ ತಡೆದಳು. ಪದ್ಮಾವತಿ ಮಾತ್ರ ಗಂಡನ ಮುಖದ ಕಡೆಗೆ ನೋಡಹತ್ತಿದಳು. ಆದರಿಂದ ಬಾಬಣ್ಣನೇ ಹೇಳಿದ,—

" ಎಕ್ಸಂಬಿ ಅವರು ಉಡಿಸಿದ ಸೀರೆ ಅದ ಅಲ್ಲ! "

ಚಂದ್ರವ್ವನ ಮುಖ ಏನೋ ಒಂದು ಸಮರ್ಪಕ ಉತ್ತರ ಪಡೆದವ ರಂತೆ ಸಮಾಧಾನ ಹೊಂದಿತು. ಆದರೆ ಬಾಳಾಬಾಯಿ ಸಿಡುಕಿನ ಸ್ವರದಲ್ಲಿ ನುಡಿದಳು,—

" ಹೂಂ! ಅವರ ಉಡಿಸಿದ ಸೀರೇ ಅದ. ನಿಂದೇನು ಉಡಿಸಿ ದಾಂತಾಯ್ತು ನೀ? ತಿಂಗಳ ಎರಡ ತಿಂಗಳ ನಿಂತ ತಮ್ಮನ ಮದುವಿ ಮಾಡಿ

ಒಂದೇ ಸೀರಿ ಸುತ್ತ್ಕೊಂಡ ಹೋಗಲೇನ ನಾ ? " ಚಂದ್ರವ್ವನನ್ನು ಸಲಹೆ ಕೇಳುವಂತಿತ್ತು ಈ ನುಡಿ.

" ಬಾಳಾ ! ಬಾಬಣ್ಣನಿಗೆ ಇನ್ನೂ ಮನೆ ಮಾಡಿ ಗೊತ್ತಿಲ್ಲ. ಮದುವೆಯೊಳಗ ಹನ್ನೆರಡ ಮಂದಿ ಕಾರಭಾರ ಮಾಡಿ ಹ್ಯಾಗೆ ಒಂದಕ್ಕ ಎರಡ ಖರ್ಚ ಮಾಡಿಸಿದ್ರು ನೀನೇ ಕಣ್ಮುಟ್ಟ ನೋಡಿರುವಿ. ಇದೊಂದ ಸಾರೆ ಉಟ್ಟಕೊಂಡ ಹೋಗು. ಮುಂದ ಹಬ್ಬಕ್ಕ ಬಂದಾಗ ಮತ್ತೊಂದ ಉಡಿಸ್ಯಾನ ಅಂತ. ಅಲ್ಲಿ ತನಕ ಹೊಲದೊಳಗ ಕಾಳಕಡಿ ಏನ ಬರ್ತಾವ ಅಂಬೋದು ತಿಳಿತದ. " ಎಂದು ಚಂದ್ರವ್ವ ಸಮಾಧಾನ ಹೇಳಿದಳು.

ಚಂದ್ರವ್ವನ ಮಾತಿಗೆ ಪುಷ್ಟಿ ಕೊಡಲಿಕ್ಕೆಂದು ಬಾಬಣ್ಣ ಮಾತು ಜೋಡಿಸಿದ,—

" ಈಗ ಐದಾರು ರೂಪಾಯಿ ಕುಪ್ಪಸ ಒಂದು ಕೊಂಡಕೊಡತೇನ, ಆಯ್ತಿಲ್ಲ ಅಬಚಿ ? "

" ನನಗ ಕುಪ್ಪಸ ಬೇಡ. ಇನ್ನ ಎರಡ ರೂಪಾಯಿ ಹಾಕು, ಇಳ ಕಲ್ಲ ಸೀರೆ ಬರತದ, ತಂದ ಉಡಿಸು. "

ಗಲ್ಲ ಉಬ್ಬಿಸಿಕೊಂಡು ಬಾಳಾಬಾಯಿ ಅಂದಳು. ಪದ್ಮಾವತಿ ಸುಮ್ಮನಿದ್ದಳು. ಹೊಸದಾಗಿ ಬಂದ ತನಗೆ ಈ ವಿಷಯದಲ್ಲಿ ಮಾತಾಡಲು ಅಧಿಕಾರವಿಲ್ಲವೆಂಬುದನ್ನು ಅರಿತಿದ್ದಳಾಕೆ. ಚಂದ್ರವ್ವ ಸ್ವಲ್ಪ ವಿಚಾರಿಸಿದಳು. ಅಕ್ಕ, ತಮ್ಮ ಇಬ್ಬರ ಮಾತುಗಳನ್ನು ತೂಗಿ ನೋಡಿದಳು. ಮಾತಿನ ಹಿಂದಿರುವ ಮನೋಭಾವನೆಯನ್ನರಿತಳು. ಸಾವಕಾಶವಾಗಿ ಹೇಳಿದಳು,—

" ಇಳಕಲ್ಲ ಸೀರಿ ತಗೊಂಡರೂ ಬಾಬಣ್ಣ ಮತ್ತ ಕುಪ್ಪಸ ತಗೊಳ್ಳುವದನ್ನ ತಗೊಳ್ಳಲಿಕ್ಕೇಬೇಕು. ಕುಪ್ಪಸ ಇಲ್ಲದ ಏನ ಬೇರೆ ಕಳಿಸುವಂತಿಲ್ಲ? ಮೂರು ನಾಲ್ಕು ರೂಪಾಯಿ ಕೊಟ್ಟ ಕುಪ್ಪಸ ಕೊಳ್ಳೋದೇ ಇದರೊಳಗ ನಾಲ್ಕ ರೂಪಾಯಿ ಹೆಚ್ಚಹಾಕಿ ಜರದ್ದ ತಗೋತಾನ. ತಗೊಂಡ ಹೋಗಲ್ಲ, ನಿಂದೇನ ಹೋಗ್ತದ. ಈಗ ಉಂಡಿ ಕಟ್ಟಕೊಡಲಿಕ್ಕೆ ಮಾಡಲಿಕ್ಕೆ ಹೊಂಅಂತ ಖರ್ಚ ಮಾಡಿದಾನ. ಒಂದರೊಳಗ ಒಂದ ಬಂತಂತ ತಿಳಕೋಬೇಕು. "

" ಚಂದ್ರಾ ಅಬಚೀನಾನಃ ಶೆಟ್ಟರ ಅಂಗಡಿಗೆ ಕರಕೊಂಡ ಹೋಗು ಆಕೆ ಎಂಥಾದ ಕೊಂಡ ಕೊಡತಾಳ ಅದನ್ನ ತಗೋ. ಹಿಂದಿನಿಂದ ಹೋಗಿ ನಾ ಲೆಕ್ಕಾ ತೀರಸ್ತೇನ ಆಯ್ತಿಲ್ಲೊ ? "

ಬಾಳಾಬಾಯಿ ಏನೂ ಹೇಳಲಿಲ್ಲ. ಸಿಂತಲ್ಲಿಯೋ ವಿಚಾರಮುದ್ರೆಯಿಂದ ಮೇಲಿನ ಹಂಚಿನ ಕಡೆಗೆ ನೋಡಹತ್ತಿದಳು. ಕಣ್ಣಿಗೆ ಹೊಗೆ ತಗುಲಿದ್ದರಿಂದಲೋ ಏನೋ ಅವು ಕೆಂಪಗಾಗಿದ್ದುವು. ಸೊಂಯೆಂದು ಮೂಗಿನಿಂದ ಉಸುರೊಮ್ಮೆ ಒಳಗೆಳೆದು ಕೊಂಡಳು.

" ನಾ ಕಳಿಸಲಿಕ್ಕೆ ಬಂದರೆ ಸೀರಿ ಕುಪ್ಪಸ ಯಾವುದೂ ಬೇಕಾಗಿಲ್ಲ ಅಲ್ಲಾ ?" ಅಕ್ಕನನ್ನು ನಗಿಸಲೆತ್ನಿಸಿ ಬಾಬಣ್ಣಾ ನುಡಿದ.

ಹೊರಗೆ ಯಾರೋ ಬರುವ ಹೆಜ್ಜೆಯ ಸಪ್ಪಳಾಯಿತು. ಅದನ್ನರಿತು ಚಂದ್ರವ್ವ ಹೇಳಿದಳು,—

" ತಾತೋಬಾ ಬಂದೇನೋ ಈಗ ಊಟಕ್ಕ ಹೊತ್ತಾಯ್ತು. ನೀರಡಿಸಿ ಬಂದ ಆದಾನು, ಯಾರಾದಗೂ ಊಟಕ್ಕೆ ಕೊಡ ಹೋಗರಿ! "

ಬಾಳವ್ವ ಮಿಸಿಕಾಡುವಂತೆ ತೋರಲಿಲ್ಲ. ಪದ್ಮಾವತಿಯೇ ಕೈತೊಳೆದುಕೊಂಡು ಊಟಕ್ಕೆ ಕೊಡಲಿಕ್ಕೆ ಒಳಗೆ ಹೋದಳು. ಹೋಗುವಾಗ ಗಂಡನ ಕಡೆಗೊಮ್ಮೆ ದೃಷ್ಟಿ ಬೀರಿದಳು. ಆ ದೃಷ್ಟಿಯಲ್ಲಿ ' ಸೀರೆಯನ್ನು ಕೊಂಡು ಕೊಟ್ಟರೂ ಅಡ್ಡಿಯಿಲ್ಲ. ನೀವು ಹೋಗ ಬೇಡಿ ' ಎನ್ನುವ ಅರ್ಥವಿತ್ತು. ಬಾಳವ್ವ ಏನೆಂದು ಭಾವಿಸಿದಳೋ ಏನೋ, ತಟ್ಟನ ಕೇಳಿದಳು,—

" ಮದುವೆ ಆದ ಮೇಲೆ ತಮ್ಮಂದಿರ ಯಾರವರು ? "

" ಕಣ್ಣಿಗೆ ಹೊಗೆ ಹತ್ತತದ ಏನೋ, ಕೆಳಗೆ ಕೂಡು. ಸುಟ್ಟಬರಲಿ. ಒಳಗ ಹೊಗೆ ಆಗ್ತದಂತ ಇಲ್ಲಿ ಜಳಕದ ಮನೆಯೊಳಗ ಮಾಡಲಿಕ್ಕೆ ಹತ್ತಿದರೂ ಹೊಗೆ ಆಯ್ತೋ. ಅದರೊಳಗ ಬಹಳ ಹೊತ್ತಾಯ್ತು ನಿಂತೀದಿ. ಕೂತರ ಅಷ್ಟು ಕಣ್ಣಿಗೆ ಹೊಗೆ ಹತ್ತುವದಿಲ್ಲ. "

ಎಂದು ಪ್ರಸಂಗಕ್ಕೆ ಬೇರೆ ಬಣ್ಣಕೊಡುತ್ತ ಚಂದ್ರವ್ವ ನುಡಿದಳು.

ಬಾಳವ್ವ ಕೆಳಗೆ ಕೂಡಲಿಲ್ಲ. ಸ್ವಲ್ಪ ಹೊತ್ತು ಯಾರೂ ಏನೂ ಮಾತನಾಡಲೂ ಇಲ್ಲ. ಚಂದ್ರವ್ವ ಕಾಳು ಕಡಿಯುತ್ತಿದ್ದಳು. ರ್ಝಾನಿ

ಯಿಂದ ತೆಗೆಯುತ್ತಿದ್ದಳು. ಬಾಬಣ್ಣ ಒಲೆಯಲ್ಲಿ ಉರುವಲು ಹಾಕುತ್ತಿದ್ದ ಚಂದ್ರವ್ವನ ಬಳೆಗಳ ಸದ್ದು ಮಾತ್ರ ಕೇಳಬರುತ್ತಲಿದ್ದಿತು.

ಪದ್ಮಾವತಿ ಒಳಗೆ ಊಟಕ್ಕೆ ಕೊಡುತ್ತಿದ್ದಳು. ತಾತಪ್ಪ ಕೇಳಿದ,—

" ಬಾಬಣ್ಣ ಎಲ್ಲಿ ಕಾಣಿಸುವದಿಲ್ಲ? "

" ಅಲ್ಲೇ ಜಳಕದ ಮನೆಯೊಳಗೇ ಇದ್ದಾರ. "

" ಏನು ನಡೆಯಿಸಿದ್ದಾರೆ? "

" ಅಕ್ಕಾಗ ಉಂಡಿ ಕಟ್ಟಲಿಕ್ಕೆ ಕಾಳ ಕಡಿಯಲಿಕ್ಕ ಹತ್ತಿದಾರ. "

" ಹುಡುಗರು, ನೀವೆಲ್ಲ ಕೂಡಿ ಕೆಡಿಸಿ ಇಟ್ಟೀರಿ. ಯಾರನ್ನಾದರೂ ಕರಿಯಲಿಕ್ಕೆ ಹೇಳಬೇಕಿಲ್ಲರಿ! ಯಾವಾಗ ಹೋಗ್ತಾಳ ಬಾಳಾಬಾಯಿ? "

" ಚಂದ್ರಾ ಅತ್ತಿ ಬಂದಾಳ. "

" ಆ ಮೇಲೇನ ಅಡ್ಡಿಯಿಲ್ಲ. ಇಲ್ಲಾದರ ಇಲ್ಲೆ ಗಂಗಾನ ಕರಸತಿದ್ದೇವು....." ಅಷ್ಟರಲ್ಲಿ ಜಳಕದ ಮನೆಯಿಂದ ಚಂದ್ರವ್ವ ಒದರಿ ಹೇಳಿದಳು,—

" ನಿಮ್ಮ ಮಾವನಿಗೆ ಒಂದ ಬೊಗಸಿ ಕಾಳ ಒಯ್ದು ಹಾಕಬೇ ಪದ್ಮಾವತಿ. ಬಿರಸ ಆಗಿದಾವೋ ಹೇಗೆ ಆಗಿದಾವೋ ನೋಡಲಿ. " ತುಸು ತಡೆದು ಪದ್ಮಾವತಿ ಬರದಿರಲು, ಬಾಳವ್ವನ ಕಡೆಗೆ ಹೊರಳಿ " ಹೋಗ ಬಾಳವ್ವ, ಅವಳ ಕೈ ತೆರವ ಇಲ್ಲ ಕಾಣ್ತದ. ನೀನೇ ಒಯ್ದು ಹಾಕು ಹೋಗು. ನಾಳೆ ನಿನ್ನ ಗಂಡನ ಮನೆಯವರ ಹೆಸರ ಇಟ್ಟಾರ ತಾಯಿ ನನಗ! " ಎಂದಳು.

ಬಾಳವ್ವ ಒಂದಿಷ್ಟು ಕಾಳುಗಳನ್ನು ತಕ್ಕೊಂಡು ಬೇಸರದಿಂದ ಒಳಗೆ ಹೋದಳು.

" ಹೀಗೇ ಬೇಡವರು ಹೆಣ್ಮಕ್ಕಳು. ಈಗ ಮತ್ತೊಂದ ಎಲ್ಲಿ ಸೀರಿ ತರುವಿ? ಸುಮ್ಮನ ನಾಲ್ಕು ರೂಪಾಯಿ ಕೊಟ್ಟ ಕುಪ್ಪಸ ಒಂದ ತಂದ ಬಿಡು. ಮೊನ್ನೆ ನಮ್ಮ ಮಾಸ್ತರ ಹೆಂಡತಿಗೆ ತಂದಾರ ನೋಡು. "

ಬಾಬಣ್ಣನ ಮನಸ್ಸು ಹೇಗೆಂಬುದನ್ನು ನೋಡಲು ಚಂದ್ರವ್ವ ನುಡಿದಳು. ಅವರಿಗೆ ಕೆಟ್ಟಾಗದೆ ಹಿತವನ್ನು ಬಯಸುವ ಸ್ವಭಾವ ಅವಳದು.

" ಅಷ್ಟೇ ಮಾಡಿಬಿಡುವುದು " ಎಂದ ಬಾಬಣ್ಣ.

" ಮದುವೆಯ ಖರ್ಚೆಲ್ಲ ಎಷ್ಟ ಆದಂತಾಯ್ತು ? "

" ಏನೋ ಏಳನೂರ ರೂಪಾಯಿ ಅವ ಲೆಕ್ಕಾ ಬರೆದ ಇಟ್ಟ್ಯಾನ ಕಲ್ಲಾಕಾಕಾ. "

" ಹಾಗ ಮಾಡ್ತಾರಪ್ಪ! ನಮ್ಮ ಮಾಸ್ತರ ಅನತಿದ್ರ 'ಬಾಬು ಗರೀಬ ಹುಡುಗ. ಒಂದಕ್ಕ ಎರಡ ಮಾಡಿ ಏರಿಸಿ ಇಡತಾರು. ನಾವು ನಡುವೆ ಹೇಳ ಲಿಕ್ಕೆ ಬರುವದಿಲ್ಲ. ಅವರ ಅಣ್ಣ ತಮ್ಮರ ಅಗತಾರೆ. ನಾವು ದೂರಿನವರು' ಅಂತ. " ಸ್ವಲ್ಪ ದನಿ ತಗ್ಗಿಸಿ ಕೇಳಿದಳು. "ಎಲ್ಲಿಂದ ತಂದ ಕೊಟ್ಟೆ ? "

" ಎಲ್ಲಿಂದ ತರಲಿ? ಅವನಿಗೇ ಕಾಗದ ಮಾಡಿ ಕೊಟ್ಟೀನಿ. "

" ಸ್ಟ್ಯಾಂಪಿನ ಮೇಲೆ! "

"ಅಲ್ಲ, ಸಾದಾ ಕಾಗದ, ತಿಕೀಟ ಹಚ್ಚಿ ಬರದದ. ಯಾತರ ಮೇಲೆ ಬರ ದರ ಏನು ಕೊಡೋದ ಏನ ಸುಳ್ಳಾ ? "

" ಕೊಡೋದ ಕೊಡಲಿಕ್ಕೇಬೇಕ ಬಿಡಪ್ಪ! " ಅಸಮಾಧಾನದ ಉಸಿ ರೊಂದು ಹೊರಗೆ ಹೋಗಲು ಹೇಳಿದಳು, "ಮನೆಯೊಳಗೆ ಸೋದರ ಮಾವ ಇದ್ದು ಏನು ಮಾಡುವುದು? ಎಲ್ಲಿ ಹೋಗ್ತದ, ಏನ ಆಗ್ತದ, ನೋಡು ವಂತಿಲ್ಲ ಬಿಡುವಂತಿಲ್ಲ. ನಾಳೆ ಬಾಳವ್ವನನ್ನ ಕಳಸಲಿಕ್ಕಾದರೂ ಹೋಗ್ತಾ ನೇನು ಕೇಳು ಈಗ ಉಂಡ ಹೊರಬಿದ್ದ ಹೋದ ಅಂದರ ಮತ್ತ ಯಾವಾಗ್ಗೆ ಬರತಾನ ಏನೋ. "

" ಕೇಳ್ತೀನಿ " ಎಂದು ಬಾಬಣ್ಣ ಎದ್ದು ನಡೆದ.

" ಬಾಳವ್ವನ ಕಳಿಸು ಇಲ್ಲಿ " ಚಂದ್ರವ್ವ ಹೇಳಿದಳು.

ಬಾಬಣ್ಣ ಒಳಗೆ ಹೋಗಿ ಮಾವನಿಗೆ ಮರುದಿನ ಊರಿಗೆ ಹೋಗಲಿಕ್ಕೆ ಸೂಚಿಸಿದ. ತಾತಪ್ಪ ಬಹಳ ಹೊತ್ತಿನವರೆಗೆ ಏನೂ ಮಾತನಾಡಲಿಲ್ಲ. ಸುಮ್ಮನೆ ಊಟ ಮಾಡಿದ ಮನದಲ್ಲಿ ಏನೇನೋ ವಿಚಾರಿಸಿದ. ಮೆಲ್ಲನೆ ಒಂದು ಮಾತು ಒಗೆದ,—

" ಕಲ್ಲಪ್ಪನ ಕಳಿಸಬೇಕಿಲ್ಲ! "

ಮಾವನ ಮಾತಿನ ಹೊಲಬು ಬಾಬಣ್ಣನಿಗೆ ಹೊಳೆಯಿತು. ಹೃದಯ ಅಳುಕಿತು. ಆದರೂ ಸಮಾಧಾನದಿಂದಲೇ ಹೇಳಿದ,—

" ಮನೆಯವರೇ ನಾವಿಬ್ಬರ ಇರಲಿಕ್ಕೆ ಅವನನ್ನ ಏಕೆ ಕಳಿಸೋದು? "

"ಅಷ್ಟು ತಿಳಿವಳಿಕೆ ಬಂತೇನು ?"

ಬಿಗುಹಿನಿಂದಲೇ ತಾತಪ್ಪ ಕೇಳಿದ. ಇದನ್ನು ಕೇಳಿ ಬಾಬಣ್ಣ ಸಿಡಿಮಿಡಿಗೊಂಡ. ಹೆಂಡತಿಯ ಎದುರಿಗೇ ಮಾವ ಹೀಗಂದುದಕ್ಕೆ ತುಂಬ ಸಿಟ್ಟಿಗೂ ಬಂದ. ಆದರೆ ಹಾಗೆ ಏನೂ ಮಾತಾಡುವಂತಿರಲಿಲ್ಲ. ಮತ್ತೆ ಮಾತಿಗೆ ಮಾತು ಹೊರಟು ತಾನು ಏಳು ನೂರು ರೂಪಾಯಿಗಳ ಕಾಗದವನ್ನು ಕಲ್ಲಪ್ಪನಿಗೆ ಬರೆದು ಕೊಟ್ಟ ಸಂಗತಿ ಹೊರಬಿದ್ದು ಹೆಂಡತಿಗೆ ತಿಳಿದೀತೆಂದು ಅಂಜಿ ಸುಮ್ಮನಾದ.

ಆದರೆ ಪದ್ಮಾವತಿಗೆ ಗಂಡನ ಮೇಲೆ ಬಿದ್ದ ಮಾತಿನ ಈ ಹೊಡೆತವನ್ನು ಕೇಳಿ ಸುಮ್ಮನಿರಲಾಗಲಿಲ್ಲ. ಅಂಜುತ್ತಂಜುತ್ತ ಅಂದಳು,—

"ಅವರಿಗೆ ಏನಾದರೂ ಕೆಲಸ ಇರಬೇಕು. ನೀವೇ ಹೋಗಿ ಕಳಿಸಿಬರ್ರಿ ಅಲ್ಲ ?" ತನ್ನ ಗಂಡನೇ ಹೋಗುವಂಥ ಪರಿಸ್ಥಿತಿ ಬರುವದಿಲ್ಲೆಂದರಿತೇ ಹೀಗೆ ಹೇಳಿದಳು.

"ಅವರ ಹೊಲಾ, ಅವರ ಮನಿ; ಹಾಳ ಆದರೂ ಅವರದೇ ಆಗತದ, ನನ್ನದೇನೂ ಹೋಗುವದಿಲ್ಲ. ಆದರೂ ಜೀವ ಕೇಳುವದಿಲ್ಲಂತ ಹೇಳ್ತೇನಿ ನಾ."

ಹೊರಗೆ ಹೋಗುತ್ತಿರುವ ಬಾಳವ್ವನ ಕಡೆಗೆ ನೋಡಿ ಹೇಳ ಹತ್ತಿದ ತಾತಪ್ಪ,—

"ನಾಳೆ ಹೋಗತಿದ್ದೆ. ನನಗೂ ಇಲ್ಲೇನ ಕೆಲಸ ಇಲ್ಲ. ಆದರೆ ಗಂಗಾ ಅನ್ನತಿದ್ದಳು, ನಾಳೇ ನಿಮ್ಮನ್ನೆಲ್ಲ ಊಟಕ್ಕ ಕರಿತೇನಿ ಅಂತ."

"ಈಗೇಕೆ ?" ಬಾಬಣ್ಣ ನಡುವೆಯೇ ಮಾತು ಸೇರಿಸಿ ಕೇಳಿದ

"ಅದೇನೋ ಮದುವೆಯೊಳಗೇ ಕೋರೂಟಕ್ಕ ಕರೆಯಬೇಕೆಂತ ಮಾಡಿದ್ದಳಂತ, ಆಗಲಿಲ್ಲ ಗಡಬಡಿಯೊಳಗ. ಮುಹೂರ್ತ ಹೋಗ್ತದಂತ ಕಲ್ಯಾನೂ ಅವಸರ ಮಾಡಿ ಬಿಟ್ಟಂತ. ಈಗ ಬಾಳಾನೂ ಇದ್ದಾಳ ಇನ್ನಾ ಅಷ್ಟರೊಳಗ ಮಾಡಿ ಬಿಡತೇನಿ ಅನ್ನತಿದ್ದಳು"

"ಹಾಗಾದರೆ ನಾಡದು ಹೋದಾಳು ಬಾಳವ್ವಕ್ಕ—ಅದಕೇನು?"

"ನೀವೇ ಹೇಗೆ ಮಾಡ್ತೀರಿ ನೋಡರಿ ?"

ಎಂದು ತಾತಪ್ಪ ಊಟ ಮುಗಿಸಿ ಹೊರಗೆ ಹೋಗಿಬಿಟ್ಟ. ಅವನ ಹಿಂದಿನಿಂದಲೇ ಹೋಗುತ್ತ ಬಾಬಣ್ಣ ಕೇಳಿದ.—

"ನಾಡದು ಬಾಳಕ್ಕನ ಕಳಸಲಿಕ್ಕೆ ನಿನಗೆ ಹೋಗಲಿಕ್ಕಾದೀತು ?"

"ನೋಡೋಣ. ಹೋದೇನಂತ...."

ತಾತಪ್ಪ ಹೋದ ಮೇಲೆ ಎಲ್ಲರೂ ಜಳಕದ ಮನೆಯಲ್ಲಿ ಉಂಡಿ ಕಟ್ಟಲು ನೆರೆದರು. ಬಾಳವ್ವ ಊರಿಗೆ ಹೋಗುವುದು ಒಂದು ದಿನ ಮುಂದೆ ಬಿದ್ದ ಸಂಗತಿ ಚಂದ್ರವ್ವನಿಗೆ ತಿಳಿಯಿತು. ಅದರೊಡನೆಯೇ ಗಂಗವ್ವನ ಮನೆಯಲ್ಲಿ ಮರುದಿನ ಮೂವರಿಗೂ ಊಟದ ಔತಣವಿದ್ದುದೂ ಗೊತ್ತಾಯಿತು. ಎಲ್ಲವನ್ನೂ ಕೇಳಿಕೊಂಡು ಚಂದ್ರವ್ವ ಮನದಲ್ಲಿಯೇ ಅಂದುಕೊಂಡಳು,—

"ತಾತೋಬಾ ಅಲ್ಲೇ ದುಡಿತಾನ, ಏನ ತಂದರೂ ಅಲ್ಲೇ ಒಗಿತಾನ, ಉಡತಾನ ತಗೋತಾನ. ಹೇಳಿದ್ದರೆ ಹೇಳಿರಬೇಕು. ಅಂಥವರದು ಏನು ಲೆಕ್ಕದಲ್ಲಿ ಹಿಡಿಯುವುದು !"

ಗಂಗವ್ವ ಸಂಬಂಧಿಕಳಲ್ಲ, ಊಟಕ್ಕೆ ಮಾಡಿದಳು ತಾನು ಸಂಬಂಧಿಕಳಾಗಿಯೂ ಬಾಬಣ್ಣನಿಗೆ ಊಟಕ್ಕೆ ಕರೆಯಲಿಲ್ಲೆಂದು ಜನರು ಆಡಿಕೊಂಡಾರಲ್ಲ ಎಂಬ ಭಾವನೆಯಿಂದಲೇ ಚಂದ್ರವ್ವನಲ್ಲಿ ಮೇಲಿನ ವಿಚಾರ ಮೂಡಿದುದು.

ತಾತಪ್ಪ ಹೋಗಿ ಗಂಗವ್ವನ ಮನೆಯಲ್ಲಿ ವಿಚಾರ ಮಾಡಿದ. ಮರುದಿನ ಮೂವರನ್ನೂ ಊಟಕ್ಕೆ ಕರೆಯುವದೆಂದು ನಿಶ್ಚಯಿಸಿದರು. ಅಪ್ಪಣ್ಣ ಸಂತೂ ಮನೆಯಲ್ಲಿ ಇರಲಿಲ್ಲ. ಅವನನ್ನು ಕೇಳುವ ಅಗತ್ಯವೂ ಇರಲಿಲ್ಲ. ಗಂಗವ್ವ ಮಾಡಿದ್ದೇ ಪೂರ್ವ ಎನ್ನುವಂತೆ ಆ ಮನೆಯ ಪರಿಸ್ಥಿತಿ. ಗಂಗವ್ವ ಮನೆಯ ಒಡತಿ, ಸಾಮ್ರಾಜ್ಞಿ. ತಾತಪ್ಪ ಕಾರ್ಯಕುಶಲ ಮಂತ್ರಿ. ಅಪ್ಪಣ್ಣ ಮನೆಯ ಒಡೆಯ, ದುಡಿದು ಸಂಪಾದಿಸಲು ಸಮರ್ಥ. ಹೋದುದು ಬಂದುದರ ಗೊಡವೆ ಅವನಿಗಿಲ್ಲ.

ಸಂಜೆಗೆ ಊಟಕ್ಕ ಬಂದಾಗ ಗಂಗವ್ವನ ಮನೆಗೆ ಮರುದಿನದ ಊಟದ ಆಮಂತ್ರಣವನ್ನು ಕೊಟ್ಟಂತೆ ಹೇಳಿಹೋದ. ಅಷ್ಟರ ಮೇಲೆಯೇ ನಿಲ್ಲಿಸದೆ ಮರುದಿನ ಮುಂಜಾನೆ ಅಪ್ಪಣ್ಣನನ್ನೂ ಹೇಳಲು ಕಳಿಸಿದರು. ಆಗ ಪದ್ಧತಿಯಂತೆ ಬಾಳವ್ವನಿಂದ ಒಂದು ಉಂಡಿ, ಒಂದು ಕಪ್ಪು ಚಹ ಅಪ್ಪಣ್ಣನಿಗೆ

ಲಂಚವೆಂದು ಸಿಕ್ಕಿತು ಹಾಗೆಯೇ ಹುಡುಗರಿಗೆಂದು ತಾಟಿನಲ್ಲಿ ನಾಲ್ಕೆಂಟು ಉಂಡಿಗಳನ್ನು ಇಟ್ಟು ಅರಿವೆ ಮುಚ್ಚಿ ಕೊಡುತ್ತ ಬಾಳವ್ವ ಕೇಳಿದಳು,—

" ಊಟಕ್ಕ ಏನೇನ ಮಾಡಿಸಿದಿ ಕಾಕಾ ? "

" ಆ ಒಣಾ ಕಾರಭಾರ ನನ್ನ ಕಡೆಗೆ ಇಲ್ಲ್ನೋಡ ಬಾಳವ್ವ. ಹೋಗಿ ಹೇಳಿ ಬಾ ಅಂದಳು, ಬಂದಿನಿ. ನೀ ಇವನ್ನ ಕೊಡತಿ, ಒಯ್ದು ಆಕೆ ಮುಂದ ಇಡತೇನೆ. ಏನಾದರ ಮಾಡಕೊಳ್ಳಲಿ. ಅವರೇ, ನಿಮ್ಮ ಮಾವ ಆಕೆ ಕೂಡಿ ಏನೇನ ಮಾಡಿದಾರ. ಈಗ ಊಟಕ್ಕೆ ಹೇಳಿ ಬಾ, ಅನ್ನೋಣಾ ನನಗ ಗೊತ್ತ. ಅಲ್ಲಿತನಕ ನನಗ ಕನಸು ಮನಸಿನೊಳಗ ಸಹಿತ ಇಲ್ಲ " ಎಂದು ನಗುತ್ತ ಹೇಳಿ ಅಪ್ಪಣ್ಣ ತಾಟು ತಕ್ಕೊಂಡು ಹೋಗಿಬಿಟ್ಟ. ಅವನು ಹೋದ ಮೇಲೆ ಮೆಲ್ಲನೆ ಪದ್ಮಾವತಿ ಅತ್ತಿಗೆಗೆ ಕುತೂಹಲದಿಂದ ಕೇಳಿದಳು,—

" ಇವರ್ಯಾರ ಬಾಳಕ್ಕ ? "

" ಅಯ್ಯ ನಿನಗ ಗೊತ್ತಿಲ್ಲೇನ ? ಮದುವಿಯೊಳಗ ನಿನ್ನಾ ಕುದುರಿ ಮೇಲಿಂದ ಇಳಸಕೊಂಡ ಬಂದಾನ ಪ್ರಾಣಿ. ಇಷ್ಟ ಲಗೂನೆ ಗುರತ ಮರ ತೇನ ? "

ಎಂದು ಮುಸಿ ಮುಸಿ ನಕ್ಕಳು ಬಾಳವ್ವ. ಅದರರ್ಥ ಪದ್ಮಾವತಿಗೆ ಏನಾಯಿತೋ ಏನೋ ತುಸು ತಡೆದು ನಸುನಗೆಯೊಡನೆ ಮತ್ತೆ ಅಂದಳು,—

" ಅದಕ್ಕ ಕೇಳ್ನಿ ತಾಯಿ ! ಎಲ್ಲಿ ತಗೊಂಡ ಬೀಳತಾವನೋ ಅಂತ ಗಾಬರಿ ಆಗಿದ್ವೆ. "

ಪದ್ಮಾವತಿಯು ಮಾತನ್ನು ನಡುವೆಯೇ ತಡೆದು ಬಾಳವ್ವ ಹೇಳಿದಳು,—

" ನಿನ್ನಾ ಕೆಡವಿ ಎಲ್ಲಿ ಇರತಾನ ತಾಯಿ ಅಪ್ಪಣ್ಣ ? "

" ಅದ್ಯಾಕೋ ? "

ಪದ್ಮಾವತಿಯು ಮಾತಿಗೆ ಬಾಳವ್ವ ಉತ್ತರ ಹೇಳಲಿಲ್ಲ. ಸುಮ್ಮನೆ ನಕ್ಕು ಬಿಟ್ಟಳು ಮಾತ್ರ.

ಮಧ್ಯಾಹ್ನ ಎಲ್ಲರೂ ಗಂಗವ್ವನ ಮನೆಗೆ ಊಟಕ್ಕೆ ಹೋದರು. ಪದ್ಮಾವತಿಗೂ ಬಾಬಣ್ಣನಿಗೂ ಜೊತೆ ಜೊತೆಯಾಗಿ ಕೂಡಿಸಿ ಊಟಕ್ಕೆ ಬಡಿಸಿದಳು ಗಂಗವ್ವ. ಅದೇ ಪಂಕ್ತಿಗೆ ಬಾಳವ್ವ ಹಾಗೂ ಗಂಗವ್ವನ ಮಗಳು—

ಅವಳೂ ಪದ್ಮಾವತಿಯ ಓರಿಗೆಯವಳು—ಕುಳಿತಿದ್ದರಾದರೂ ಪದ್ಮಾವತಿ ತುಂಬ ಸಂಕೋಚಪಟ್ಟುಕೊಂಡಳು. ಆದರೂ ಗಂಗವ್ವನ ಅಕ್ಕರೆಯ ಮಾತುಗಳು, ತಾತಪ್ಪನ ಮೇಲ್ವಿಚಾರಣೆ, ಹೊಸ ಜನರಲ್ಲಿ ಸಿಡಿದು ಬೇರೆ ನಿಲ್ಲಲಾಗದ ಸ್ವಭಾವ ಇವು ಮೂರೂ ಸೇರಿ ಪದ್ಮಾವತಿಯನ್ನು ಸುಮ್ಮನಿರಿಸಿದುವು. ಕೂಡಿ ಉಂಡಳು. ಸಂತೋಷವನ್ನು ಹೊಂದಿದಳು ಊಟವಾದ ಮೇಲೆ ಎಲೆ ಅಡಕೆಯ ತಾಟು ಬಂತು ಬಾಬಣ್ಣ ತಿಂದ ಸುಂದರಾ—ಗಂಗವ್ವನ ಮಗಳು—ಪದ್ಮಾವತಿಗೂ ಬಾಳವ್ವನಿಗೂ ಎಲೆ ಅಡಿಕೆ ಕೊಟ್ಟಳು. ತಾನೂ ಹಾಕಿಕೊಂಡಳು. ಆದರೆ ಪದ್ಮಾವತಿಗೆ ವೀಳ್ಯೆಯನ್ನು ಮೆಲ್ಲುವ ಸಾಹಸವಾಗಲಿಲ್ಲ. ಹಾಗೆಯೇ ಕೈಯಲ್ಲಿ ಇಟ್ಟುಕೊಂಡಳು. ಅದೇಕೋ ಲಗೂ ಮನೆಗೆ ಹೋಗಬೇಕೆಂದು ಅವಳಿಗೆ ಅನ್ನಿಸಹತ್ತಿತು. ಬಾಳವ್ವ ಗಂಗವ್ವನ ಕೂಡ ಆ ಮಾತು ಈ ಮಾತು ಆಡುತ್ತ ಸ್ವಲ್ಪ ಹೊತ್ತು ಕಳದಳು. ಉಳಿದವರ ಊಟವೂ ಆಯಿತು. ಕೊನೆಗೆ ಬೇಡ ಬೇಡವೆಂದರೂ ಬಾಬಣ್ಣನಿಗೆ ಐದು ರೂಪಾಯಿ, ಬಾಳವ್ವ ಪದ್ಮಾವತಿಯರಿಗೆ ಒಂದೊಂದು ಕುಪ್ಪಸ, ಗಂಗವ್ವ ಉಡುಗೊರೆಯಾಗಿ ಕೊಟ್ಟಳು ಅಕ್ಕನಿಗೆ ಕೊಳ್ಳುವ ಕುಪ್ಪಸಕ್ಕೆ ಸದ್ಯಕ್ಕೆ ರೊಕ್ಕ ಸಿಕ್ಕಿತು ಸಾಕೆಂದು ಬಾಬಣ್ಣ ಸಂತಸಪಟ್ಟ. ಪದ್ಮಾವತಿ ಏನೂ ತಿಳಿಯದವರಂತೆ ಸುಮ್ಮನಿದ್ದಳು. ಗಂಗವ್ವನೇ ಇವರನ್ನು ಬೀಳ್ಕೊಳ್ಳುವಾಗ ಒಂದು ಮಾತು ಹೇಳಿದಳು,—

"ಮದುವೆಯೊಳಗೇ ಮಾಡಿಬಿಡತಕ್ಕದ್ದು. ಆಗ ಸಂತೆಗೂ ಯಾರೂ ಹೋಗಲಿಲ್ಲ. ನನ್ನ ಮನಸ್ಸಿಗೆ ಬರುವಂಥ ಖಣಾನು ಸಿಕ್ಕಿರಲಿಲ್ಲ. ಅಲ್ಲದ ನಾಲ್ಕ ಜನರೊಳಗ ಅದೆಲ್ಲ ಯಾತಕ್ಕ ಬೇಕಂತ ಸುಮ್ಮನಿದ್ದೆ. ಆದರೆ ಅಂತಃಕರಣ ಎಲ್ಲಿ ಹೋಗ್ತದ?"

"ನಮ್ಮದ ಇದ್ದದ್ದ ನಮ್ಮ ಮನೆಗೆ ಬರತದಲ್ಲ?"

ಮೆಲ್ಲಗೆ ಬಾಳವ್ವ ಮಾತು ಒಗೆದಳು. ಗಂಗವ್ವ ಅದನ್ನು ಲಕ್ಷ್ಯಕ್ಕೆ ತಕ್ಕೊಳ್ಳದೇನೇ ಕೇಳಿದಳು,—

"ನಾಳೆಗೆ ಹೋಗುವಿ ಬಾಳಕ್ಕಾ?" ತುಸು ತಡೆದು "ಹೂಂ! ಹೋಗಲಿಕ್ಕ ಬೇಕಲ್ಲವ್ವ ಇನ್ನು. ಇಲ್ಲೇ ನಿಂತೇನ ಸಾಲುವಂತೆ ಅದ? ಅಗ್ತಿಲ್ಲ. ತಮ್ಮನ ಮದುವೆಯಂತ ಅವರೂ ಎರಡ ತಿಂಗಳ ಬಿಟ್ಟರು."

ಎಂದು ಕಣ್ಣೀರು ತಂದಳು.

ತಿರುಗಿ ನಿಂತು ಬಾಳವ್ವ ಹೇಳಿದಳು ತನ್ನಿಂದ ಹೊರಡಬೇಕಾದ ವಿಷಯ ಗಂಗವ್ವನಿಂದಲೇ ಬಂತಲ್ಲ! ಎಂಬ ಪಶ್ಚಾತ್ತಾಪ ಅವಳ ದನಿಯಲ್ಲಿ ತುಂಬ ಇಡುಗಿತ್ತು.

" ಹೌದ ಕಾಕೀ! ಹೇಳಲಿಕ್ಕೇ ಮರೆತಿದ್ದೆ. ನಾಳಿಗೆ ಗಾಡಿಗೆ ಹೋಗುವ ಗಡಬಡಿಯಲ್ಲಿ ಇತ್ತೀನ ಬರಲಿಕ್ಕೆ ಆಗುವದಿಲ್ಲ ಏನಿಲ್ಲ." ತುಸು ತಡೆದು ದನಿ ಸರಿಪಡಿಸಿಕೊಂಡು "ಹೋಗಿ ಬರತೇನ ಕಾಕೀ, ಮನೆ ಕಡೆಗೆ ಸ್ವಲ್ಪ ಲಕ್ಷ್ಯ ಇರಲಿ ಇನ್ನೂ ಪದ್ಮಾವತಿನೂ ಸಣ್ಣಾಕಿ. ಬಾಬು ಆದರೂ ಏನು?" ಎಂದಳು.

" ಅದರ ಚಿಂತಿ ಬಿಡು ಬಾಳಾ, ದಿನಕ್ಕ ಎರಡ ಸಾರೆ ನಿಮ್ಮ ಮಾವ ವರದಿ ತಂದೇ ತರುವ...."

" ಸುಂದರಾ ಎಂದ ಹೋಗ್ತಾಳ ಗಂಡನ ಮನೆಗೆ?"

ಬಾಳವ್ವ ಸಹಜ ಕೇಳಿದಳು. ಗಂಗವ್ವ ಮುಖ ಕಿವುಚುತ್ತ ಹೇಳಿದಳು,–

" ಅಲ್ಲಿ ಏನ ಅದನಃ ಬಾಳವ್ವ? ಗಂಡ ಒಂದ ಎಲ್ಲೀರ ತಿರಗತ ಇರತದ. ಅತ್ತೆ ನೋಡಿದರ ಅಂಥಾಕೆ. ಮತ್ತ ಅವ್ವನ ಮಾತ ಅಂದರ ಅವನಿಗೆ––ಹೇ! ಆಕಿ ಹಾಕಿದ ಉಗಳ ದಾಟುವದಿಲ್ಲ ಅವ. ಅಲ್ಲೇನ ಕಳಸಲೇ ನನ್ನ ಮಗಳ್ನ. ಒಯ್ದು ಕಟಗರ ಕೈಯೊಳಗ ಕೊಟ್ಟಂಗ ಆಗೇದವ್ವ. ಹಗಲಿ ರಾತ್ರಿ ಆಕೆಯ ಚಿಂತೆಯೇ ಚಿಂತೆ ನನಗ....ಏನ ಮಾಡೋದು ಹೇಳು?"

ಹೀಗೆ ಮಾತಾಡುತ್ತ ಸ್ವಲ್ಪ ದೂರದವರೆಗೆ ಬಂದು ಗಂಗವ್ವ ಕಳಿಸಿ ಹಿಂದಿರುಗಿದಳು. ಬಾಬಣ್ಣ ಇನ್ನೂ ಅವರ ಮನೆಯಲ್ಲಿಯೇ ಇದ್ದ. ಪದ್ಮಾವತಿ ಮಾತ್ರ ತಿರುತಿರುಗಿ ತನ್ನ ಗಂಡನ ದಾರೀ ನೋಡುತ್ತ ಮನೆಯ ಕಡೆಗೆ ಬಂದಳು.

೪

ಇನ್ನೊಂದು ತಿಂಗಳು ಉರುಳಿತು. ಬೇಸಿಗೆ ಮಳೆಗಾಲಕ್ಕೆ ತಿರುಗುವ ಲಕ್ಷಣಗಳು ತೋರಹತ್ತಿದವು. ಆದರೆ ಇನ್ನೂ ಅಡವಿಯ ಕೆಲಸ ಏನೂ ಆಗಿರಲಿಲ್ಲ. ಈ ಸಂಗತಿ ಈಗ ಬಾಬಣ್ಣನಿಗೆ ನೆನಪಾಗತೊಡಗಿತು. ಒಂದು

ತಿಂಗಳೆಂದರೆ ಒಂದು ವಾರದಂತೆನಿಸಿದ್ದಿತವನಿಗೆ. ಹೊಸ ದಾಂಪತ್ಯ, ಮನೆಯಲ್ಲಿ ಇಬ್ಬರೇ. ಒಂದೆರಡು ಚೀಲ ಜೋಳವಿದ್ದುವು. ಆಮೇಲೆ ಕೇಳುವದೇನು ?

ಕೈಯಲ್ಲಿ ಒಂದು ದುಡ್ಡೂ ಇಲ್ಲ. ಅವುಗಳ ಅಗತ್ಯವೂ ಅವರಿಗಿಲ್ಲ. ಏನು ಬೇಕಾದರೂ ಅಂಗಡಿಗೆ ಜೋಳ ಹಾಕುವುದು, ಹತ್ತಿದ ಸಾಮಾನು ತರುವುದು, ಅಂದ ಮೇಲೆ ಜೋಳದ ಚೀಲ ಎಷ್ಟು ದಿನ ತಡೆದೀತು ? ತಿಂಗಳಲ್ಲಿಯೇ ನೆಲಕ್ಕಿಳಿಯಿತು. ಅದರ ಕಡೆಗೆ ಒಮ್ಮೊಮ್ಮೆ ಪದ್ಮಾವತಿಯ ಲಕ್ಷ್ಯ ಹೋಗುವುದು. ತನ್ನ ತವರುಮನೆಯಲ್ಲಿಯ ಕಾಳುಕಡಿಯ ಸಮೃದ್ಧಿ ನೆನಪಾಗುವದು. "ಇನ್ನೂ ಸುಗ್ಗಿ ಎಂಟು ತಿಂಗಳು ! " ಎಂದು ಅಂದುಕೊಳ್ಳುವಳು. ಆ ದಿನ ಬೀಸುವಾಗ ಒಂದು ಹಿಡಿ ಜೋಳ ಕಡಿಮೆ ತಕ್ಕೊಳ್ಳುವಳು. ಮತ್ತೆ ಗಂಡ ಎದುರಿಗೆ ಬಂದಾಗ " ನನಗೇಕೆ ಚಿಂತೆ ? " ಎಂದು ನಕ್ಕು ನಗಿಸುವಳು. ಮೂರು ತಾಸಿನ ಚಿಂತೆ ಮೂರು ನಿಮಿಷದಲ್ಲಿ ಮಾಯವಾಗಿಬಿಡುವುದು.

ಮನೆಯಲ್ಲಿ ಹೆಚ್ಚಿನ ಅಡಿಗೆ ಏನಿಲ್ಲ, ನುಚ್ಚು ರೊಟ್ಟಿ. ಕಲ್ಲಪ್ಪ ಕಕ್ಕ ತನ್ನ ಹುಡುಗರ ಕೈಯಿಂದ ಒಂದು ತಂಬಿಗೆ ಮಜ್ಜಿಗೆ ಕಳಿಸುವನು. ಆಗಾಗ ಮನೆಗೂ ಬರುವನು. ಅನುವು ಆಪತ್ತುಗಳನ್ನು ಕೇಳಿಕೊಳ್ಳುವನು. ಇವರು ಆವನ ಹತ್ತರ ಏನನ್ನೂ ಬೇಡುವದಿಲ್ಲ; ಆವನೂ ಕೊಡುವದಿಲ್ಲ. ಆದರೂ ಸಲಿಗೆಯಿಂದ ಮೇಲ್ವಿಚಾರಣೆ ಮಾಡುವ. ಇವರಿಗೆ ಇದ್ದ ರೊಟ್ಟಿ ನುಚ್ಚೇ ಅಮೃತವೆನಿಸುವದು.

ನವದಂಪತಿಗಳಿಗೆ ಹೆಚ್ಚಿನ ಲಾಲಸೆಗಳೇನೂ ಇಲ್ಲ. ಇದ್ದುದೊಂದೇ ಬಯಕೆ—ಅದಕ್ಕೆ ಯಾವ ತಡೆಯೂ ಇಲ್ಲ. ಅವರ ಮಟ್ಟಿಗೆ ಸುಖಸಮೃದ್ಧಿಯಾಗಿದ್ದಿತು. ಮುಂಜಾನೆ ಎದ್ದು ಪದ್ಮಾವತಿ ಸ್ನಾನ ತೀರಿಸಿ ತಾಸೆರಡು ತಾಸಿನಲ್ಲಿ ಅಡಿಗೆ ಮಾಡುವಳು. ಬಾಬಣ್ಣ ಎರಡು ಸಾರಿಗೆ ನೀರು ತರುವನು. ಆಗಸ ಬಂದು ಮೈಲಿಗೆ ಅರಿವೆ ಒಯ್ಯುವ. ಇಬ್ಬರೂ ಕುಳಿತು ಊಟ ಮಾಡುವರು. ತಾತಪ್ಪನೊಬ್ಬ ಊಟಕ್ಕೆ ಬಂದು ಹೋದನೆಂದರೆ ತೀರಿತು. ಎರಡನೆಯವರಾರೂ ಬರುವಂತಿಲ್ಲ. ಮನೆಯಲ್ಲಿ ರಾಜನಿಗೆ ರಾಣಿ, ರಾಣಿಗೆ ರಾಜ.

ಹೀಗೆ ಇರುತ್ತಿರಲು ಒಂದು ದಿನ ಎಕ್ಸ್‌ಂಬಿಯಿಂದ ಕಾಗದವೊಂದು ಬಂತು. ನಾಲ್ಕು ದಿನ ಪದ್ಮಾವತಿಯನ್ನು ತವರುಮನೆಗೆ ಕರೆದೊಯ್ಯಲು ಬರುವೆವೆಂದು ಬಾಬಣ್ಣನ ಮಾವ ಕಾಗದ ಬರೆಯಿಸಿದ್ದರು. ನೋಡಿ ಹಣೆಗೆ ಗಂಟುಹಾಕಿ ಬಾಬಣ್ಣ ಹೆಂಡತಿಗೆ ಅಂದ,—

" ಹಬ್ಬ ಹುಣ್ಣಿವಿ ಇಲ್ಲ. ಈಗೇಕೆ ಕರೆಯಲಿಕ್ಕೆ ಬರುವರೊ? "

" ಮದುವೆ ಆದ ಮೇಲೆ ಒಮ್ಮೆ ಕಳಿಸಿ ಹೋದವರು ತಿರುಗಿ ಬಂದಿಲ್ಲ...." ಹೆಂಡತಿಯ ಮಾತನ್ನು ನಡುವೆಯೇ ತಡೆದು ಬಾಬಣ್ಣ ಬೇಸರದ ದನಿಯಲ್ಲಿ ಕೇಳಿದ,—

" ಹಾದಿ ನೋಡತಿದ್ದಿ ಏನ ನೀ? "

" ಇಲ್ಲ! ಆದರೆ.... "

" ಆದರೇನು? ಈಗ ಏನ ಜರೂರ ಅದ ಹೋಗೋದು? "

" ಜರೂರೇನ ಇರತದ? ಜನರೇನ ಅಂದಾರು ನಮ್ಮ ತಾಯಿ ತಂದೆಗೆ? ಮದುವೆ ಮಾಡಿ ಕೊಟ್ಟವರು ತಿರುಗಿ ಮನೆಗೆ ಮತ್ತೊಮ್ಮೆ ಕರೆದ ತರಲಿಲ್ಲ! ಅನಲಿಕ್ಕಿಲ್ಲ? "

" ಹೋಗೋದ ಆಯ್ತೇನ ಇನರ ಮೇಲೆ? "

" ಹಾಗಲ್ಲs, ದವಳವರೇ! ಏನ ಹೇಳಬೇಕ ನಿಮ್ಮ ಮುಂದ? "

" ಹೇಳ್ಕೇನ ಗೊತ್ತದ ಬಿಡು!

" ಏನ ಗೊತ್ತದ? "

" ನೀನs ಹೋಗಬೇಕಂತ ಮಾಡಿರುವಿ ಮತ್ತ! " ನಸುನಕ್ಕು ನುಡಿದಳು ಪದ್ಮಾವತಿ. ದನಿಯಲ್ಲಿ ಸಲಿಗೆಯು ಚಲ್ಲಾಟವೂ ಇತ್ತು,—

" ಮದುವೆ ಆಗದಿದ್ದಾಗ ಏನ ಮಾಡತಿದ್ದಿರಿ? "

" ಒಳ್ಳೇ ಕೇಳುವಾಕಿ ಅದಿಯಲ್ಲ ನೀ? "

ಸ್ವಲ್ಪ ಸಿಡುಕಿನ ಸ್ವರದಲ್ಲಿ ಬಾಬಣ್ಣ ಕೇಳಿದ.

" ನೋಡೋಣ. ಈಗ ಕಾಗದ ಬಂದದ. ಇನ್ನೂ ಅಪ್ಪಾ ಬರಲಿಕ್ಕೆಂದರೆ ಐದಾರ ದಿನಾ ಆದ. "

" ಐದಾರು ದಿನ ಹೋಗೋದು ಎಷ್ಟೊತ್ತು? "

" ದಿನಾ ಹೋಗೋದ ಹೇಳಲಿಲ್ಲ ನಾ.... "

" ಅಂತೂ ಹೋಗುಹಾಕೇ ಅನ್ನಲಾ? "

" ಅಪ್ಪಾ ಆದರೂ ಬರಲಿ ಅಲ್ಲಾ? "

" ಬಂದ ಮೇಲೆ? "

" ಬಂದ ಮೇಲೆ ನೋಡೋಣಂತ.... "

" ನೋಡೋದೇನ? ಈಗೇನ ಹೋಗೋದಿಲ್ಲ, ಬಿಡುವದಿಲ್ಲ. "

ಎಂದು ಬಾಬಣ್ಣಾ ಎದ್ದು ಹೊರಗೆ ನಡೆದ.

" ಎಲ್ಲಿ ನಡೆದಿರಿ? " ಪದ್ಮಾವತಿ ಕೇಳಿದಳು.

" ಹೊರಗೆ; ಕಲ್ಲಪ್ಪ ಕಾಕಾನ ಮನೆತನಕ ಹೋಗಿ ಬರತೇನ.... "

" ನೀವು ಹೊರಹೊರಗ ಹೀಗ ತಿರಗವರ ಮತ್ತ.... "

ಗಲ್ಲ ಉಬ್ಬಿಸಿಕೊಂಡು ಬಾಗಿಲವರೆಗೆ ಬಂದು ನುಡಿದಳು ಪದ್ಮಾವತಿ.

" ಮತ್ತೇನ? " ತಿರುಗಿ ನಿಂತು ಬಾಬಣ್ಣಾ ಕೇಳಿದ.

" ನಾ ಒಬ್ಬಾಕೇ ಮನೆಯೊಳಗೆ.... "

" ನಾಳೆ ನೀ ಊರಿಗೆ ಹೋದರೆ ನಾ ಹೇಗೆ....? "

" ಹಾಗಾದರೆ ಹೋಗಿ ಬರಲಿ ಇಲ್ಲೇನ ನಾಲ್ಕು ದಿನಾ? "

" ನಾ ಬೇಡ ಅಂದರ ನಿಲ್ಲುವಿ ಅಲ್ಲೇನ ನೀ? "

ತಿರುಗಿ ಬಾಬಣ್ಣಾ ಮನೆಯೊಳಗೆ ಬಂದ. ಪದ್ಮಾವತಿಯ ಮುಖದಲ್ಲಿ ಮಂದಹಾಸವೊಂದು ಮೂಡಿತು.

" ಯಾಕ ತಿರಗಿದಿರಿ? " ಎಂದಳು.

" ಇರುವಿಯುಲ್ಲಾ ನೀ! "

ಎಂದು ಬಾಬಣ್ಣಾ ಪದ್ಮಾವತಿಯ ಗಲ್ಲದ ಮೇಲೆ ಮೆಲ್ಲಗೆ ಒಂದು ಏಟುಕೊಟ್ಟ.

" ಹೋಗರಿ ಅತ್ತ; ಒಂದೇ ಗಲ್ಲಾ ಮುಟ್ಟಬೇಡಿರಿ ನನ್ನದು! "

ಹುಸಿಮುನಿಸಿನಿಂದ ನುಡಿದಳಾಕೆ.

" ಅದೂ ಒಂದ ಗಲ್ಲಾ ಮುಟ್ಟಂತ ಹೇಳಲ್ಲ? "

ಎಂದು ಸಲಿಗೆಯಿಂದ ಹತ್ತರ ಹೋದ ಬಾಬಣ್ಣಾ.

" ಇರಲಿ, ಸಾಕು ನಡೆಯಿರಿ ಒಳಗ.... "

ಇಬ್ಬರೂ ಒಳಗೆ ಹೋದರು. ಇದೀಗ ಸೂರ್ಯಾಸ್ತವಾಗುತ್ತಲಿದ್ದಿತು. ಸಾಜೆಯ ಅನ್ನಕ್ಕೆ ಪದ್ಮಾವತಿ ಒಲೆಯ ಮೇಲಿಟ್ಟಿದ್ದಳು. ಅನ್ನ ತಕಪಕ ಕುದ್ದು, ಉಕ್ಕಿ ಹೊರಗೆ ಬರುತ್ತಿದ್ದಿತು. ಒಲೆಯೊಳಗೆ ಉರಿ ಸರಿಸಿ ಬಂದು ಪದ್ಮಾವತಿ ಅಂದಳು,—

"ಎಲ್ಲಿ ಹೋಗತಿದ್ದಿರಿ ಹೋಗರಿ ಅಲ್ಲ!"

"ಅಡ್ಡ ಮಾತ ಹಾಕಿದಿಯಲ್ಲ ನೀ?"

"ಯಾಕ ಕರಿಯಲಿಕ್ಕೆ ಕಳಿಸಿದ್ದ ಕಲ್ಲಪ್ಪ ಕಾಕಾ ಈಗ?"

"ಏನೋ ನೋಂದಣಿ ಕಾರಕೂನ ಬರುವವನಿದ್ದಾನಂತ. ಮುಂದಿನ ವಾರದೊಳಗ. ಅದಕ್ಕೇ ಏನಾದರೂ ಇದ್ದಿರಬೇಕು."

"ಏನು?"

ಬಾಬಣ್ಣ ತೂಗಾಟದಲ್ಲಿ ಬಿದ್ದ. ಹೆಂಡತಿಯ ಮುಂದೆ ಸಾಲದ ವಿಷಯ ಹೇಳಬೇಕೋ ಬೇಡವೋ ಎಂದು ಯೋಚಿಸತೊಡಗಿದ. ಅವನ್ನರಿತೇ ಮತ್ತೆ ಪದ್ಮಾವತಿ ಮುಂದೆ ಕೇಳಿದಳು,—

"ಏನ ಕೊಡೋದ ಅದ ಅವರದು?"

"ಹೌದು ಕೊಡಬೇಕಲ್ಲ." ಸ್ವಲ್ಪ ಗಂಟಲು ಸಡಿಲು ಬಿಟ್ಟು ನುಡಿದ ಬಾಬಣ್ಣ. ಅವನ ಮುಖದಿಂದ ನಿಟ್ಟುಸಿರೊಂದು ಹೋಯಿತು. ಇನ್ನು ಮನೆತನದ ಸುಖದಲ್ಲಿ ಪದ್ಮಾವತಿ ಸಮಪಾಲುಗಾರ್ತಿಯೆಂದು ಯೋಚಿಸಿ ಮುಂದೆ ಹೇಳಿದ. "ಹಿಂದಿನ ಸಾಲ ಏನೂ ಇರಲಿಲ್ಲ. ಮದುವಿ ಸಲುವಾಗೇ ಏಳುನೂರು ರೂಪಾಯಿ ಆಗೇದ."

"ಏಳುನೂರು ರೂಪಾಯೀ?" ಬೆರಗು ಬೇಸರದಿಂದ ಪದ್ಮಾವತಿ ಮಾತೆಳೆದಳು.

"ನಿನ್ನಂಥಾಕಿ ಬರಬೇಕಾದರ ಏಳನೂರೇನ ಏಳಸಾವಿರೇನ?" ಹೆಮ್ಮೆಯಿಂದ ನುಡಿದು, ಹೆಂಡತಿಯ ಬೇಸರ ಮರೆಯಿಸಲು ಯತ್ನಿಸಿದ, ಬಾಬಣ್ಣ.

ಈಗ ಸದ್ಯಕ್ಕೆ ಬಾಬಣ್ಣನಿಗೆ ಹತ್ತಿದ ಚಿಂತೆ ಸಾಲದ ಬಗ್ಗೆಯಲ್ಲ, ಹೊಲಗಳ ಕೆಲಸ ಹೇಗೆ ಮಾಡಬೇಕೆಂಬುದು. ಮನೆಯಲ್ಲಿ ಎತ್ತುಗಳಿಲ್ಲ. ಬಾಡಿಗೆಯಿಂದ ಮಾಡಿಸಬೇಕಾದರೆ ಕೈಯಲ್ಲಿ ಕಾಸಿಲ್ಲ. ಅಡ್ಡಮಳೆಗಳಾಗಿ

ಹೊಲ ರಂಟೆ ಕುಂಟೆ ಹೊಡೆಯಲು ಸಜ್ಜಾಗಿದ್ದಿತು: ಒಂದೆರಡು ಸಲ ಹೆಂಡತಿಗೆ ಅಂದ. "ನಾನು ಹೊಲದ ಕಡೆಗೆ ಹೋಗಿ ಕೊನೆ ಗಿನೆ ಕಡಿದು ಬರುವೆ" ಎಂದು. ಮದುವೆಯಾದ ಎರಡು ತಿಂಗಳಲ್ಲಿ ಹೆಂಡತಿಯನ್ನು ಹೊಲದ ಕಡೆಗೆ ಒಯ್ಯುವದು ಬೇಡವೆಂದು ತಾನೂ ಹೋಗದೆ ಸುಮ್ಮನೆ ನಿಂತ. ಗಂಡನು ಹೊಲಕ್ಕೆ ಹೋಗದ ಕಾರಣವನ್ನು ಬಲ್ಲ ಪದ್ಮಾವತಿಯೇ ಆಗ್ರಹಮಾಡಿ ಹೇಳಿದಳು,—

"ನಾನೇನು ಹಾರೋರ ಬಣಜಿಗರ ಮಗಳಲ್ಲ, ಮನೆಯಲ್ಲಿ ಕೂಡ ಲಿಕ್ಕೆ. ಹೋಗೋಣ ನಡೆಯಿರಿ. ತೋಟಪಟ್ಟಿಗೆ ಹೋಗಿ ಗೊತ್ತದ ನನಗೂ. ತವರಮನೆಯೊಳಗ ಬುತ್ತಿ ಹೊತ್ತ ಗೋಣ ಕೂತಹೋಗೇದ. ನೀವು ಕೊನೆ ಕಡಿಯಿರಿ, ನಾನು ಕಾಶಿಗೆ ಕಟ್ಟಿಗೆ ಇದ್ದರ ಆರಸತೇನಿ. ಹಾಗೇ ಅತ್ತ ಬಾವಿ ಇದ್ದರ ಅರಿವೆಗಳನ್ನು ಒಕ್ಕೊಳ್ಳತೇನಿ. ದಿನಾ ಅಗಸರಿಗೆ ಕೊಟ್ಟರ ಅರವಿ ಸ್ವಚ್ಛ ಇರುದಿಲ್ಲ. ನಾವು ಮನೆಯೊಳಗ ಕುಳಿತ ಅವನಿಗೆ ಒಂದು ರೊಟ್ಟಿ, ಹಾಕಿ ಏನ ಮಾಡೋದದ? ಬರತ ಉರುವಲ ತಂದರ ಒಲಿಗೂ ಆಗುವವು."

ಆದರೂ ಹೆಂಡತಿ ಒಮ್ಮೆ ತವರುಮನೆಗೆ ಹೋಗಿ ಬರುವವರೆಗೆ ಹೊಲಕ್ಕೆ ಕಳಿಸುವುದು ಬೇಡ ಎಂದು ಯೋಚಿಸಿ ಬಾಬಣ್ಣಾ ಸುಮ್ಮನಾದ. ತಂದೆ ಬಂದಾಗ ನಾಲ್ಕೆಂಟು ದಿನ ಬಂದು ಹೊಲಗಳ ಕೆಲಸ ಮಾಡಿಕೊಟ್ಟು ಹೋಗಲು ಹೇಳೋಣ ಎಂಬ ಹೆಂಡತಿಯ ಸಲಹೆಗೂ ಆತ ಕಿವಿಗೊಡಲಿಲ್ಲ. ಆಪ್ತರ ಎತ್ತುಗಳು ಮನೆಯಲ್ಲಿ ಕೆಲಸವಿಲ್ಲದೆ ಇದ್ದರೇನು? ಈಗ ಹೊಸದ ರಲ್ಲಿ ನಮ್ಮ ಮನೆಯ ಕೆಲಸಕ್ಕೆ ಕರೆಯಿಸುವುದೆ? ಎಂದುಕೊಂಡು ಸುಮ್ಮ ನಿದ್ದ. ಮಾವನು ಹೆಂಡತಿಯನ್ನು ಕರೆಯಲು ಬಂದಾಗ ಒಂದು ದಿನ ಕಳೆದರೂ ಯಾವ ಮಾತನ್ನೂ ಎತ್ತಲಿಲ್ಲ. ಮಗಳ ಮನೆಯ ಪರಿಸ್ಥಿ ತಿಯನ್ನು ಕಂಡು ಮುದುಕ ತಾನೇ ಹೇಳಿದ,—

"ಮನೆಯಲ್ಲಿ ತಿನಲಿಕ್ಕೆ ಹಯನು ಇಲ್ಲ, ಏನಿಲ್ಲ. ಮುಂದಿನ ವರ್ಷ ದೊಳಗ ಅಂದರ ನಮ್ಮ ಎಮ್ಮೆಯ ಕರಾ ದೊಡ್ಡದ ಆಗ್ತದ,ಕ್ಕತರುವಿರಂತೆ."

ಅದಕ್ಕೆ ಉತ್ತರವೆಂದು ಗಂಡನ ಮುಖದ ಕಡೆಗೆ ನೋಡುತ್ತ ಪದ್ಮಾ ವತಿ ಹೇಳಿದಳು. "ಎಮ್ಮೆ ಮಣಕಾ ಯಾವಾಗ್ಗೆ ಕೊಟ್ಟಾಗ ಕೊಡಿರಂತ.

ಈಗ ನಾಲ್ಕು ದಿನಾ ಅಣ್ಣಾನ ಎತ್ತುಗಳನ್ನ ಕೊಟ್ಟು ಕಳಸರಿ. ಹೊಲಾ ಕೂಟಿ ಹೊಡೆದ ಹೋದಾರಂತ."

ಬಾಬಣ್ಣನ ಮಾವ ಅದೇಕೋ ಸುಮ್ಮನಾದ. ಎತ್ತುಗಳನ್ನು ಕಳಿಸಲು ಸಮಯ ಸಿಕ್ಕುವುದು ಸಾಧ್ಯವೋ ಎಂಬ ಲೆಕ್ಕ ಹಾಕುತ್ತಿರಬೇಕು. ಹೊಲದಲ್ಲಿ ನೇಗಿಲು ಆರಂಭವಾಗಿದೆ. ಮುಂದಿನ ವಾರದಲ್ಲಿ ಮುಗಿದೀತು ಆ ಮೇಲೆ ತೋಟದಲ್ಲಿ ಬಾಳೆಯ ಗಿಡಕ್ಕೆ ನೀರು ಹಾಯಿಸುವುದು. ಬರುವುದು. ಆಗ ಮೂರು ದಿನ ಯಾತ ಹೊಡಿಯಲಿಕ್ಕೇ ಬೇಕು. ಆ ಮೇಲೆ ಎತ್ತುಗಳು ತೆರವಾಗುವ ಸಮಯ ಯಾವಾಗ? ಎಂದು ದಿನಗಳನ್ನು ಲೆಕ್ಕ ಹಾಕುತ್ತಿದ್ದ. ಅಷ್ಟರಲ್ಲಿ ಬಾಬಣ್ಣನೇ ಮಾತನಾಡಿದ,—

"ಮುಂದಿನ ವಾರಂದರ ಎತ್ತಾನಃ ಒಂದ ತರತೇವಿ. ಮಾವಾನ ಮುಂದ ಹೇಳೇನಿ...."

ಬಾಬಣ್ಣ ಸೋದರ ಮಾವನ ಮುಂದೆ ಎತ್ತಿನ ಮಾತನ್ನು ಇನ್ನೂ ಎತ್ತಿರದಿದ್ದರೂ ಹೆಣ್ಣು ಕೊಟ್ಟ ಮಾವನ ಮುಂದೆ ದೊಡ್ಡಸ್ತನಕ್ಕಾಗಿ ಹೀಗೆ ನುಡಿದುಬಿಟ್ಟ.

ತಾತೋಬಾ ಹೇಗಾದರೂ ದನಗಳ ವ್ಯಾಪಾರದಲ್ಲಿ ದಲಾಲಿ ಮಾಡುವ. ಹೇಳಿದ್ದರೂ ಹೇಳಿರಬಹುದು, ಒಳ್ಳೆಯ ಎತ್ತನ್ನೂ ತಂದು ಕೊಡಬಹುದಾತ, ಎಂದು ವಿಚಾರಿಸಿ ಮಾವನೂ ಹೇಳಿದ,—

"ಏನಾದರೂ ಎತ್ತ ಇಲ್ಲದ ಒಕ್ಕಲತನವೇ ಅಲ್ಲ. ಒಂದೇ ಯಾಕಾಗ ವಲ್ಲದು ಎತ್ತು ಬೇಕು."

ತಂದೆಯ ಮಾತು ಮುಗಿಯುವಷ್ಟರಲ್ಲಿ ಪದ್ಮಾವತಿಯು ಸಿಡುಕಿನ ಸ್ವರದಲ್ಲಿ ತಟ್ಟನೆ ನುಡಿದಳು

"ಅದೆಲ್ಲ ನಿಮ್ಮ ಮನೆಯೊಳಗಿನ ಮಾತಾಯ್ತು. ತಗೊಂಡಾರಲ್ಲ ತಗೊಳ್ಳು ವೇಳೆದೊಳಗ. ಒಂದೇಕೆ? ಎರಡು ಎತ್ತಾನೂ ಕಟ್ಟತಾರ. ಈಗ ನಾಲ್ಕ ದಿನಾ ಎತ್ತುಗಳನ್ನು ಕಳಸರಿ ಅಂದರ ಇಲ್ಲದ್ದೊಂದ ಹೇಳ್ತ ಕೂತಿದಾನ."

"ಅದನ್ನ ಹೇಳಲಿಲ್ಲ ನಾ. ಲೋಕದ ರೂಢಿ ಹೇಳಿನ ಬಾಳಾ! ನಾಲ್ಕ ದಿವಸ ಯಾಕ? ಎಂಟು ದಿವಸ ಕಳಸತೇನ ತಗೋ. ಎತ್ತುಗಳಿಗೇನು? ಎಲ್ಲಿಯಾದರೂ ದುಡಿಯುವಷೇ ಅಲ್ಲ!"

" ಇರಲಿ ಏಳು. ಇನ್ನೆದಕ ಬೇಕು ? ಇಷ್ಟ ಹೇಳಿದ ಮೇಲೆ ! "

ಬಿಗುಹಿನಿಂದಲೇ ಪದ್ಮಾವತಿ ಹೇಳಿದಳು. ಮುಂದೆ ಎತ್ತುಗಳನ್ನು ಕಳಿಸುವ ಸಲುವಾಗಿ ಮತ್ತೇನೂ ಮಾತುಗಳು ಹೊರಡಲಿಲ್ಲ. ಪದ್ಮಾವತಿಯು ... ವಾರದ ಮಟ್ಟಿಗೆ ತವರುಮನೆಗೆ ಹೋದಳು. ಹೋಗುವಾಗ ಹುಳು ...ಳು ಗಂಡನ ಮುಖದ ಕಡೆಗೆ ನೋಡತೊಡಗಿದಳು. ಅದನ್ನು ನೋಡಿ ಅವಳ ತಂದೆ " ಮಗಳು ಇಷ್ಟ ಲಗೂನೆ ನಮ್ಮನ್ನು ಮರೆಯುವಂತಾಯ್ತಲ್ಲ !" ಎಂದು ಮನದಲ್ಲಿಯೇ ಅಂದುಕೊಂಡು ಹಿರಿ ಹಿರಿ ಹಿಗ್ಗಿದ. ಹಾಗೆಯೇ ಅಳಿಯನಿಗೆ ಆಶ್ವಾಸನವಿತ್ತ,—

" ಇಲ್ಲಿ ನಿಮ್ಮ ಹೊಟ್ಟೆಗೆ ತಾಪತ್ರಯ ಮಾಡಿ ಅಲ್ಲಿ ಯಾತಕ್ಕ ಇಟ್ಟ ಕೊಳ್ಳೋಣು. ನಾಲ್ಕ ದಿನದೊಳಗ ಕಳಿಸಿ ಕೊಡತೇವೆ."

ಅಳಿಯ ಬಾಬಣ್ಣ ಅದಕ್ಕೆ ಉತ್ತರವನ್ನೇನೂ ಕೊಡಲಿಲ್ಲ. ನಾಲ್ಕಾರು ದಿನಗಳೆಂದರೂ ಹದಿನೈದು ದಿನಗಳಾದರೂ ಕಳೆಯುವವೆಂಬುದು ಅವನಿಗೆ ಗೊತ್ತು. ಅದಕ್ಕಾಗಿ ಅವನು ಮನೆಯಲ್ಲಿ ಕೈಯಿಂದಲೇ ಅಡಿಗೆ ಮಾಡಿ ಕೊಳ್ಳುವದನ್ನು ನಿಶ್ಚಯಿಸಿದ. ಹೀಗಾದಾಗ ತಾತಪ್ಪನೇನೂ ಮನೆಗೆ ಊಟಕ್ಕೆ ಬರುತ್ತಿರಲಿಲ್ಲ. ಅಳಿಯ ಊಟಕ್ಕೆ ಏನು ಮಾಡಿಕೊಳ್ಳುವನೆಂಬುವ ಗೊಡವೆಗೂ ಆತ ಹೋಗುತ್ತಿರಲಿಲ್ಲ.

ಕಲ್ಲಪ್ಪ ಕಕ್ಕ ಮಾತ್ರ ಎರಡು ಮೂರು ಸಲ ಮನೆಗೆ ಎಡತಾಕಿ ಆಗ್ರಹ ಪೂರ್ವಕವಾಗಿ ಬಾಬಣ್ಣನನ್ನು ಊಟಕ್ಕೆ ಕರೆದ. ಕಕ್ಕ ತನ್ನ ವಿಷಯಕ್ಕೆ ಇಷ್ಟು ಆದರವನ್ನು ತೋರಿಸುವ ಕಾರಣವೇನೆಂಬುದು ಬಾಬಣ್ಣನಿಗೆ ಗೊತ್ತಿತ್ತು. ಆದರೂ ಊಟಕ್ಕೆ ಹೋಗದೆ ನಿಲ್ಲಲಿಲ್ಲ. ಕಾಗದ ನೋಂದಣಿ ಮಾಡುವದನ್ನು ಮಾಡಿಕೊಡಲಿಕ್ಕೆ ಬೇಕೇ ಬೇಕು. ಊಟಕ್ಕೆ ಏಕೆ ಅನುಮಾನ? ಎಂದವನ ಭಾವನೆ. ಮೊದಲೇ ಬಾಬಣ್ಣ ಸವಿಬಾಯಿಯವ. ಇದನ್ನರಿತ ಕಲ್ಲಪ್ಪ ನಾಲ್ಕು ದಿನ ಸವಿ ಸವಿ ಅಡಿಗೆ ಮಾಡಿಸಿ ಬಾಬಣ್ಣನಿಗೆ ಊಟಕ್ಕೆ ಹಾಕಿದ. ಅದಕ್ಕೆ ಪ್ರತಿಫಲವಾಗಿ ಬಡ್ಡಿ ಸಹಿತ ಏಳುನೂರಾ ಐವತ್ತು ರೂಪಾಯಿಗಳ ಕಾಗದ ಬರೆಯಿಸಿಕೊಂಡ. ಅದಕ್ಕೆ ತೋರವತ್ತಿಯೆಂದು ಬಾಬಣ್ಣನ ಹೊಲವನ್ನು ಹಚ್ಚಿಕೊಂಡ. ಊರೊಳಗೆ ನೋಂದಣಿ ಕಾರಕೂನ ಬಂದನೆಂದು ತಿಳಿದೊಡನೆಯೇ ಹೋಗಿ ನೋಂದನ್ನೂ ಮಾಡಸಿದ.

ಇಷ್ಟಾಗುವವರೆಗೆ ಕಲ್ಲಪ್ಪನ ಜೀವದಲ್ಲಿ ಜೀವವಿರಲಿಲ್ಲ. ತನ್ನ ಹೊಲದ ಹತ್ತರದ ಹೊಲ ತೋರವತ್ತಿಯಲ್ಲಿ ಸಿಗಬೇಕೆಂದರೆ! ಹಾವಿನ ದವಡೆ ಯೊಳಗಿಂದ ಕೈ ತಕ್ಕೊಂಡಂತೆ ಇತ್ತದು. ಇನ್ನೆಲ್ಲಿ ಹೊಲ ಹೋಗುವುದು ? ತಾತಪ್ಪ ಬೇಕಾದಷ್ಟು ಹಾರಾಡಲಿ. ಅವನದೇನೂ ಆಟ ಸಾಗದು ಎಂದು ಸಮಾಧಾನ ಹೊಂದಿದ.

ಊರಲ್ಲಿ ನೋಂದಣಿ ಕಾರಕೂನ ಬಂದ ಸಂಗತಿ ತಾತಪ್ಪನಿಗೆ ಗೊತ್ತಾಯಿತು. ಕಲ್ಲಪ್ಪನ ಚಳವಳಿಯ ಸುಳುವೂ ಸ್ವಲ್ಪ ಹತ್ತಿತು. ಕೂಡಲೆ ಸುಂದರಿಯನ್ನು ಕಳುಹಿದ, ಬಾಬಣ್ಣನನ್ನು ಊಟಕ್ಕೆ ಕರೆಯಲಿಕ್ಕೆಂದು. ಬಾಬಣ್ಣ ಇದೀಗ ಉಂಡು ಅಡ್ಡಾಗಿದ್ದ. ಬೇಸಿಗೆಯ ರಣರಣ ಬಿಸಿಲು ಹೊರಗೆ. ಕಣ್ಣಿಗೆ ನಸು ಜಂಪು ಬಂದಂತಾಗಿತ್ತು. ಕನಸಿನಲ್ಲಿಯೇ ಪದ್ಮಾವತಿ ತವರುಮನೆಯಿಂದ ಬರುವ ದಿವಸಗಳ ಲೆಕ್ಕ ಹಾಕುತ್ತಿದ್ದ. ಹೊರಗೆ ಕಾಲುಂಗುರದ ಸದ್ದಾಯಿತು. ಬೆದರಿದ ಗಂಡೆರಳೆಯಂತೆ ಬಾಬಣ್ಣ ಕಣ್ತೆರೆದು ನೋಡಿದ. ಎದುರಿಗೆ ಸುಂದರಿ !

ಒಳಕುವ ಮೈಯನ್ನು ಬಾಗಿಲ ತೋಳಿಗೆ ಆನಿಸಿ ನಿಂತಳು. ಒಂದು ಕೈ ಇನ್ನೊಂದು ತೋಳಿಗೆ ಹಚ್ಚಿದ್ದಳು. ಸಣ್ಣ ನಡು. ತುಂಬಿದ ಎದೆಗಳು. ನವಪ್ರಾಯ ಅವಳ ಅಂಗಾಂಗಗಳಲ್ಲೆಲ್ಲ ತುಂಬಿ ತುಳುಕುತ್ತಿದೆ. ಹುಣಸೆ ಬಣ್ಣದ ಬಾಲೆ. ಸತೇಜ ಮುಖ. ವಿಶಾಲವಾದ ಕಣ್ಣುಗಳು. ಒಂದು ಕ್ಷಣ ಸುಮ್ಮನೆ ನಿಂತಳು. ಊಟ ಮಾಡಿ ಮಲಗಿರುವ ಊಟಕ್ಕೆ ಈಗ ಕರೆಯ ಲಿಕ್ಕೆ ಬಂದಿರುವೆ ನಾ. ಎಂಬ ಶಂತೆ ಅವಳ ಮನಸ್ಸಿನಲ್ಲಿ ಸುಳಿದಿರಬೇಕು ಅದಕ್ಕಾಗಿಯೇ ಅನುಮಾನ, ಮೌನ.

"ಎಲ್ಲಿ ಓಡಿ ಹೊರಟಿಲ್ಲ ನಾ !"

ಬಾಬಣ್ಣ ನಗೆಯೊಡನೆ ಮಾತಿಗೆ ಮೊದಲು ಮಾಡಿದ.

"ಓಡಿ ಹೊರಟಿದಿ ಅಂತ ಯಾರ ಅನ್ನತಾರೆ?"

"ಬಾಗಿಲಿಗೆ ನಾಗೇಕೆ ಅಡ್ಡ ನಿಂತೀದಿ ಆಮೇಲೆ?"

"ಇದಕ್ಕ ಅಂದೆ ಹೌದ?"

ಬಾಗಿಲಿಗೆ ಅಡ್ಡವಾಗಿ ಸಹಜ ಇಟ್ಟ ಕೈಯನ್ನು ತೆಗೆದು ಕೇಳಿದಳು.

"ಊಟ ಆಯ್ತು?"

“ ಆಯ್ತಲ್ಲ; ನೀವೇನ ಕರಿಯುವಿರಿ? ” ಕೆಣಕು ಸ್ವರದಲ್ಲಿ ನುಡಿದ ಬಾಬಣ್ಣ.

“ ಅದಕ್ಕೇ ಬಂದೇನಿ. ”

“ ಸುಳ್ಳ ಹೇಳಬೇಡ ನನ್ನ ಮುಂದ? ”

“ ಆಮೇಲೆ ಇಲ್ಲಿ ಬರಲಿಕ್ಕೆ ನನ್ನದೇನ ಕೆಲಸ ಇತ್ತೇನೋ! ”

ಗೋಣು ತೂಗಿ ಬಿಂಕದಿಂದ ಸುಂದರಾ ನುಡಿದಳು.

“ ಮಾವ ಕಳಿಸಿರಬೇಕು, ನನ್ನ ಕರೆಯಲಿಕ್ಕೆ. ”

ಅನುಮಾನ ಕಟ್ಟಿದ ಬಾಬಣ್ಣ,

“ ಮೊನ್ನೆ ಬಂದಿದ್ದರಲ್ಲ, ಹೋಗಲಿಲ್ಲೇಕೆ? ”

“ ಯಾರು ಬಂದಿದ್ದರು? ”

ಸುಂದರಿಯ ಮಾತಿನ ಹೊಲಬು ತಿಳಿಯದೆ ಬಾಬಣ್ಣ ಕೇಳಿದ

“ ನಿಮ್ಮ ಮಾವ !”

“ ಹೀಗ ಹೋಗ್ತಾರೇನ ಮಾವನ ಮನೆಗೆ ?”

“ ಅದಕ್ಕೇ ಮೊನ್ನೆ ಊಟಕ್ಕ ಬಂದಾಗ ಐದ ರೂಪಾಯಿ ತಗೊಂಡಿ ಏನೋ ? ”

“ ಅಷ್ಟರ ಮೇಲೆ ಮುಗಿಯಿತಂತ ತಿಳದಿ ಹೌದ ? ”

“ ಇನ್ನೆಷ್ಟ ಕೊಡತಾರ ನಿನಗ ? ”

“ ಇನ್ನೆಷ್ಟ ಕೊಡತಾರೆ ? ಐನೂರು ರೂಪಾಯಿ ! ”

“ ಇದೇ ಏನ ಐನೂರು ರೂಪಾಯಿ ತಗೊಳ್ಳುವ ಚಲುವನ ಮುಖ.”

ಎಂದು ಬಿಂಕದಿಂದ ನುಡಿದು ಸುಂದರಿ ತಿರುಗಿ ನಡೆದಳು. ಬಾಬಣ್ಣ ಮಿಕಿಮಿಕಿ ನೋಡುತ್ತ ಸ್ವಲ್ಪ ಹೊತ್ತು ಕುಳಿತ. ನಾಲ್ಕು ಹೆಜ್ಜೆ ಹೋದ ಮೇಲೆ ಹೊರಳಿ ನೋಡಿ, ಮುಂದೆ ನಡೆದಳಾಕೆ. ಆಗ ಬಾಬಣ್ಣನೇ ಕೇಳಿದ,—

“ ಯಾಕೆ ಬಂದಿದ್ದಿ, ಯಾಕೆ ಹೊರಟಿ ತಿಳಿಯಲಿಲ್ಲಲ್ಲ ? ”

“ ಐನೂರು ರೂಪಾಯಿ ಎಲ್ಲಿಂದ ತರೋಣ ನಾವು ? ”

ಹೀಗೆ ತಿರುಗಿ ನಿಂತು, ತಿಳಿನಗೆಯೊಂದನ್ನು ತೂರಿ ನುಡಿದು ಸುಂದರಾ ಮಾಯವಾಗಿಬಿಟ್ಟಳು.

ಬಾಬಣ್ಣ ತುಸು ಹೊತ್ತು ಸುಮ್ಮನೆ ಕುಳಿತು ವಿಚಾರಿಸಿದ. ಆ ಮೇಲೆ ಎದ್ದು ಮುಖ ತೊಳೆದುಕೊಂಡ. ಸುಂದರಿ ಊಟಕ್ಕೇನು ಕರೆಯಲಿಕ್ಕೆ ಬಂದಿಲ್ಲ. ತಾತಪ್ಪ ಮಾವ ಕರೆಯಲಿಕ್ಕೆ ಕಳಿಸಿರಬೇಕು. ಅದಕ್ಕೇ ಬಂದಿರ ಬೇಕು. ಎಂದೂ ನಿಶ್ಚಯಿಸಿದ—ಅಲ್ಲ—ಅವಳ ಮಾತಿಗೆ ಅರ್ಥ ಹಚ್ಚಿದ. ಹಾಗೆಯೇ ಮನದಲ್ಲಿ ವಿಚಾರವೊಂದು ಬಂತು. ಬೇಸಿಗೆ ಕಳೆಯುತ್ತ ಬಂತು. ಇನ್ನೂ ಹೊಲದ ಕೆಲಸ ಆಗಿಲ್ಲ. ಎತ್ತು ಕೊಳ್ಳುವ ವಿಚಾರವನ್ನಾದರೂ ಅವನ ಮುಂದೆ ಇಡಬೇಕು. ಅದರಂತೆಯೇ ಕಲ್ಲಪ್ಪನಿಗೆ ಕಾಗದ ಬರೆಸು ಕೊಟ್ಟ ವಿಷಯವನ್ನೂ ತಿಳಿಸಬೇಕು. ಈ ಎಲ್ಲ ಕಾರ್ಯಗಳನ್ನು ಮುಂದೆ ಇಟ್ಟುಕೊಂಡು ಬಾಬಣ್ಣ ಗಂಗವ್ವನ ಮನೆಯ ಕಟ್ಟೆಯನ್ನು ಹತ್ತಿದ. ಇವೆಲ್ಲವುಗಳಿಗಿಂತಲೂ ಹೆಚ್ಚಾಗಿ ಸುಂದರಿಯ ಕರೆಯು ಅವನ ಅಂತರಂಗ ವನ್ನು ಸೆಳೆದಿದ್ದಿತು.

" ಮೂರ ನಾಲ್ಕು ದಿವಸ ಆಯ್ತು, ನಿಮ್ಮ ಮಾವನಿಗೆ ಊಟಕ್ಕ ಕರೆ ಅಂತ ಹೇಳಲಿಕ್ಕೆ ಹತ್ತಿ. ಅವನೇ ಕರೆಯೆವಲ್ಲ. ನಾ ಏನ ಮಾಡಲಿಯಪ್ಪ ಬಾಬಣ್ಣ ? " ಸಲಿಗೆಯ ಸ್ವರದಲ್ಲಿ ಸ್ವಾಗತಿಸುತ್ತ ಗಂಗವ್ವ ಹೇಳಿದಳು.

" ಇರಲಿ ಏಳು. "

ಎಂದು ಬಾಬಣ್ಣ ಹಾಸಿದ ಜಮಖಾನೆಯ ಮೇಲೆ ಕುಳಿತ.

" ಕೂಡ್ರಬೇಡ ಇನ್ನ. ಕೈಕಾಲ ತೊಳಕೋ ಏಳು. "

ಬಾಬಣ್ಣ ಊಟ ತೀರಿಸಿರುವ ಎಂಬ ಸಂಗತಿಯನ್ನು ಮಗಳಿಂದ ಕೇಳಿ ತಿಳಿದಿದ್ದರೂ ಕೂಡ ಗಂಗವ್ವ ಹೀಗೆ ಹೇಳಿದಳು.

" ಇಲ್ಲ; ಈಗ ನನ್ನ ಊಟ ಆಗೇದ. "

" ಇಲ್ಲಾದರ ನೋಡು, ನಾಚಬೇಡ. "

" ನಾಚಲಿಕ್ಕೇನ ಹೊರಗಿನ ಮನೆ ಏನು ? "

ಎಂದು ಕೇಳುತ್ತ ಸುಂದರಿ ಒಳಗಿನಿಂದ ಎರಡು ಚಹದ ಕಪ್ಪುಗಳನ್ನು ಕೈಯಲ್ಲಿ ಹಿಡಿದುಕೊಂಡು ಹೊರಗೆ ಬಂದಳು. ಒಂದು ಕಪ್ಪನ್ನು ಬಾಬಣ್ಣನ ಕೈಗೆ ಕೊಟ್ಟು ಇನ್ನೊಂದನ್ನು ತಾತಪ್ಪನ ಕೈಯಲ್ಲಿ ಕೊಡಲು ನಡೆದಳು.

" ಇಲ್ಲಿ ಯಾತಕ್ಕ ತರುವಿ ? ನಾನೇ ಅಲ್ಲಿ ಬರತೇನ. "

ಎಂದು ಹೇಳುತ್ತ ತಾತಪ್ಪನು ಜೋಳದ ಚೀಲಗಳ ನಿಟ್ಟಿನಾಚೆಯಿಂದ ಪಡಸಾಲೆಗೆ ಬಂದ.

" ನಿದ್ದೆ ಆಗಲಿಲ್ಲ ಏನೊ ? " ಬಾಬಣ್ಣ ಮಾವನಿಗೆ ಕೇಳಿದ.

" ಆಯ್ತು. ಎರಡ ದಿನಾ ಆ ಊರ ಈ ಊರ ಅಂತ ತಿರಗಿದೆವ್ರು. ಗೌಡರಿಗೆ ಎರಡ ಜೋಡ ಹೋರಿಗಳು ಬೇಕಾಗಿದ್ದುವು. ಎರಡ ಸಂತೆ ತಿರಗಿದ ಮೇಲೆ ನಿದ್ದೆ ಎಲ್ಲೀದು ? "

" ಅದಕ್ಕೇ ನೋಡು ಕಣ್ಣು ಹೇಗೆ ಕೆಂಪಗ ಮಾಡಿಕೊಂಡಾನ...." ಗಂಗವ್ವ ಅಂದಳು.

" ನಿದ್ದೆ ಇಲ್ಲದಕ್ಕ ಆಗಿಲ್ಲ. ನಿನ್ನಾ ನೋಡಿ ಆಗಿದಾವ ನನ್ನ ಕಣ್ಣ ಕೆಂಪಗ." ತಾತಪ್ಪ ಉತ್ತರ ಕೊಟ್ಟ.

" ಐ ! ದವಳವನಃ ನನ್ನ ನೋಡಿ ಯಾಕ ? ಇದ್ನೋಡು. ಎದ್ದೇಸ ಗೌಡ ಅಂತ ಕೇಳಿದರ ಮನೆಗೆ ಎರಡ ಸಾರಿಗೆ ನೀರ ತರಲಿಕ್ಕೆ ಬಾ ಅಂತ ಹೇಳಿದಂತೆ. ಒಳ್ಳೇ ನ್ಯಾಯಲ್ಲ ನಿಂದು ? "

ಒಳಗೆ ಹೊರಟ ಮಗಳ ಕಡೆಗೆ ಹೊರಳಿ, ಅದೇ ಓಘದಲ್ಲಿ ಗಂಗವ್ವ ಹೇಳಿದಳು,—

" ಬರೇ ಚಹಾನಃ ತಂದ ಕೊಟ್ಟ್ಯಲ್ಲ ಬಾಬಣ್ಣನಿಗೆ? ಅಲ್ಲಿ ಫಳಿ ಮೇಲಿ ಡಬ್ಬಿಯೊಳಗೆ ಉಂಡಿ, ಚುನಮುರಿ ಚಿವುಡಾ ಅದಾವ ತಂದ ಕೊಡು."

ತನಗೊಂದು ಎತ್ತು ಕೊಳ್ಳಲು ಮಾವನಿಗೆ ಹೇಳಲಿಕ್ಕೆಂದು ಮಾತೆತ್ತಲು ಇದೇ ತಕ್ಕ ಸಮಯವೆಂದು ಯೋಚಿಸಿ,—

" ಇಷ್ಟು ಸಂತೆ ತಿರಗತಿದಿ, ನಮಗೂ ಒಂದ ಎತ್ತ ನೋಡಲ್ಲ ? " ಎಂದ ಬಾಬಣ್ಣ.

" ಮೊನ್ನೆ ಹೇಳಬಾರದಿತ್ತೇನು ? ಎಂಥಾ ಭಂಗಾರದಂಥಾ ಎತ್ತೊಂದು ಮೊನ್ನೇ ಕೈಯೊಳಗಿಂದ ಹೋಯ್ತು. " ತುಸು ತಡೆದು " ಯಾವುದಾದರೂ ನಾನೇ ಕೇಳಿದ ಮೇಲೆ ಹೇಳುವಿ. ಅದಕ್ಕೇ ಈಸಲ ನಿನ್ನ ಪಂಜೇತಿ ಬಿಟ್ಟ ಬಿಟ್ಟಿ. ಈಗ ನೋಡಲ್ಲ ಹೊಲಾ ಹಾಗೇ ಬಿದ್ದುವು."ನುಡಿದ. ಮುಂದಿನ ಮಾತಿನ ಪ್ರಸ್ತಾವನೆಯನ್ನು ಮಾಡುತ್ತ " ಈಗ ಎತ್ತಾ ತಗೋಲಿಕ್ಕೆ ದುಡ್ಡು ಆದರೂ ಎಲ್ಲಿ ಅವ ನಿನ್ನ ಹತ್ತರ ?" ಎಂದು ಕೇಳಿದ

“ಅವನಿಗೆ ಇಲ್ಲಾದರ ನಾ ಕೊಡತೇನ. ಎಷ್ಟು ಬೇಕು ಎತ್ತಿಗೆ ರೂಪಾಯಿ ?”

ಗಂಗವ್ವ ಮುಂಘೋರಣೆಯಿಂದ ಆಶ್ವಾಸನವಿತ್ತಳು.

“ನೀ ಕೊಡುವಿ ?” ಬೇಕೆಂತ ಬೆರಗಿನ ದನಿ ತೆಗೆದು ತಾತಪ್ಪ ಕೇಳಿದ.

“ಯಾಕ ನಾ ಕೊಡಬಾರದೇನು ?”

“ಕೊಡಲ್ಲ ಹಾಗಾದರ. ಅವನ ಮದುವಿಯ ಸಾಲಾನು ಅಷ್ಟ ತೀರಿಸು.”

ವಿಷಯಕ್ಕೆ ಮಾತನ್ನು ತಂದು ಜೋಡಿಸಿದ ತಾತಪ್ಪ. ಅಷ್ಟರಲ್ಲಿ ಉಂಡಿ ಚಿವುಡಾಗಳು ಬಾಬಣ್ಣನ ಮುಂದೆ ಬಂದುವು. ಅದರೊಡನೆ ಇನ್ನೊಂದು ಕಪ್ಪು ಚಹವೂ ಬಂತು. ತಾತಪ್ಪ ಮಾತ್ರ ಚಹ ಕುಡಿದು ಕಪ್ಪನ್ನು ಕೆಳಗೆ ಇಟ್ಟ.

“ಅಷ್ಟ ದುಡ್ಡು ಎಲ್ಲಿಂದ ತರಲಿ ನಾ ?”

ದುಡ್ಡಿದ್ದೂ ಕೇಳಿದಳು ಗಂಗವ್ವ.

“ಕೊರಳೊಳಗಿನ ಗೆಜ್ಜಿಟಿಕ್ಕಿ ಮಾರಲ್ಲ ?”

“ಅವನ್ನ ಮಾರಿ ಯಾಗನ್ನ ಕೇಳಲಿ ? ಆ ಧಾರಣಿಯೊಳಗಂತ ಆಗೇದ ಅದು. ಈಗ್ಯಾರ ಮಾಡಿಸಿ ಕೊಡತಾರ ನನಗ?”

“ಕೊಟ್ಟಾರಲ್ಲ. ಒಂದು ಸುಗ್ಗಿ ನೆಟ್ಟಗ ಆಯ್ತಂದರ ಬೇಕಾದಾಂತ ಆಗ್ತದ, ಗೆಜ್ಜಿಟಿಕ್ಕಿ ಅನಲಿಕ್ಕೇನ ?”

ಬಾಬಣ್ಣ ಸಹಜ ನುಡಿದ. ಆದರೂ ಗಂಗವ್ವನ ಮುಖ ಅರಳಿತು. ತಾತಪ್ಪನೂ ಒಳ್ಳೆಯದಾಯಿತೆಂದು ಭಾವಿಸಿದ. ಅದಕ್ಕೆಂದೇ ಹೀಗೆ ನುಡಿದ,—

“ಅಂತೂ ಗಂಗಾನ ಕಡೆಯಿಂದ ರೂಪಾಯಿ ಉಚ್ಚುವಿಯಪ್ಪ ನೀ.”

“ಎತ್ತಾ ಒಂದ ಕೊಳ್ಳುವ ಪೂರ್ತಿ ಕೊಡಲಿ ಅಂದರೆ ಸಾಕು.”

“ನಮ್ಮ ಕೂಡ ಪೈರೆ ಮಾಡ್ತೇನ ಅಂದರ ಕೊಡತೇನಿ.”

ಒಂದು ಕರಾರು ಹಾಕಿದಳು ಗಂಗವ್ವ.

“ಅವಶ್ಯ ಮಾಡ್ತೇನಿ. ನನ್ನ ನಾಲ್ಕು ಕೂರಿಗೆ ಅಡವಿ, ನಿಮ್ಮದ ಆರು ಕೂರಿಗೆ ಅಡವಿ, ಗಳೆ ಮಾಡ್ತೇನಿ ಅಲ್ಲ. ನಮ್ಮದೊಂದ ಎತ್ತ ನಿಮ್ಮದೊಂದ

ಎತ್ತು ನನ್ನ ಕೈಯೊಳಗ ಕೊಟ್ಟ ಬಿಡರಿ ಅಂದರೆ ಆಯ್ತು. ಸುಗ್ಗಿ ಆದಮೇಲೆ ನಿಮ್ಮ ರೂಪಾಯಿ ಕೊಡತೇನ, ಬಡ್ಡಿ ಗಂಟ ಸಹಿತ. ಆಯ್ತಿಲ್ಲೋ?"

ತನ್ನ ಮನಸ್ಸಿನಲ್ಲಿ ಇದ್ದದ್ದನ್ನು ಸ್ಪಷ್ಟವಾಗಿ ಹೇಳಿದ ಬಾಬಣ್ಣಾ.

"ಬೇಕಾದಾಗ ಕೊಡು. ನಮ್ಮವನ ಕಡೆಯಿಂದ ಕೆಲಸ ಆಗುವದಿಲ್ಲ ಇನ್ನ. ಸುಮ್ಮ ನಿನ್ನ ಬೆನ್ನ ಹತ್ತಿ ಬರ್‍ತಾನ."

"ದವಳಕ್ಕ ಅಪ್ಪಣ್ಣಾ ತಿಂದ ತಿರಗಾಡಲಿ ಅಲ್ಲ. ಅದಕ್ಕೇನು?" ಉಬ್ಬಿ ಬಾಬಣ್ಣಾ ಹೇಳಿದ.

"ಎತ್ತಿಗೆ ಬೇರೆ ಸಾಲ ತೆಗೆಯುವಿ. ಮದುವೆ ಸಾಲಕ್ಕ ಏನ ಮಾಡುವಿ?" ನೇರವಾಗಿ ತಾತಪ್ಪ ಕೇಳಿದ.

"ಕಲ್ಲಪ್ಪ ಕಾಕಾಗ ಹೊಲಾ ಪಚ್ಚಿ ಕಾಗದ ಮಾಡಿಕೊಟ್ಟೆನು." ಅನುಮಾನಿಸುತ್ತ ಬಾಬಣ್ಣಾ ಹೇಳಿದ.

"ಹಾಕಿದ ಅಲ್ಲೇನ ನಿನ್ನಾ ಮುಂಡಾ? ಮದುವೆಯೊಳಗೊಂದ ಇಬ್ಬರ ಕಡೆಯಿಂದ ನೂರಿನ್ನೂರ ರೂಪಾಯಿ ಎತ್ತಿ ಬಡದಿದ್ದ. ಆಗ ನೀ ಹೆಣ್ಣ ಕಾಣದವನಂತೆ ಮಾಡಿದಿ. ಈಗ ಹೊಲಾನೂ ಅಷ್ಟ ಹಾಕಿ ಇಟ್ಟ. ಆಯ್ತಲ್ಲ. ಇನ್ನೇನ ಅವನ ಕೈಯೊಳಗಿಂದ ಹೊಲ ತಿರುಗಿ ಬರ್‍ತದ?"

ಹರಿಹಾಯ್ದು ತಾತಪ್ಪ ಕೇಳಿದ.

"ರೂಪಾಯಿ ಕೊಟ್ಟಮೇಲೆ ಬರದ ಏನ ಮಾಡ್ತದ?" ಬಾಬಣ್ಣಾ ಅಂದ.

"ರೊಪಾಯಿ ಕೊಡಸತೇನ. ಕಾಗದ ಹರಸಕೊಂಡ ಬರೋಗ ಹೋಗು."

"ಓಹೋ!"

"ಹೀಗೆ ಕೊಟ್ಟರೆ ಬಿನಾ ಕೊಟ್ಟಾನ ಹೋಗು! ಎಂದಿನಿಂದೂ ಆ ಹೊಲದ ಮೇಲೆ ಕಣ್ಣಿತ್ತ ಅವನದು. ಅವನಿಗೆ ನಿನ್ನ ಹೊಲಾ ಇಲ್ಲದಕ್ಕ ಅಡಚಣಿ ಹೊರಟದ. ಅಲ್ಲಿ ಬಾವಿಗೆ ನೀರ ಅವ. ಅಡವಿ ಇಲ್ಲಾಗೇದ ಅವನಿಗೆ."

ಮಾವನು ಗಂಗವ್ವನಿಂದ ರೂಪಾಯಿ ಕೊಡಿಸಬೇಕೆಂದು ಯೋಚಿಸಿದುದರಿಂದ ಹೀಗೆಲ್ಲ ಹೇಳುವನೆಂದು ಬಾಬಣ್ಣಾ ತಿಳಿದ. ಯಾರಿಗಾದರೂ

ಬಡ್ಡಿ ಕೊಡತಕ್ಕುದೇ. ಕಲ್ಲಪ್ಪನಿಗಲ್ಲ ಗಂಗವ್ವನಿಗೆ ಕೊಡತಿದ್ದೆ ನನಗೇನು ?
ಆದರೆ ಆಗ ತಾವೇ ಹಿಂಜರಿದರು. ಮದುವೆಯ ಕಾಲಕ್ಕೆ ಯಾವದಕ್ಕೂ
ಮುಂಡೆ ಬರಲಿಲ್ಲ. ಈಗ ಮದುವೆಯಲ್ಲಿ ಆವನು ದುಡ್ಡ ತಿಂದ ಇವನು
ದುಡ್ಡ ತಿಂದ ಅಂದರೆ ಯಾರ ನಂಬಬೇಕು? ಆಗೇನು ಇವರು ಕಣ್ಣ
ಮುಚ್ಚಿಕೊಂಡಿದ್ದರೇನು? ಈಗ ಹೆಸರು ಇಡಲಿಕ್ಕೆ ಎಲ್ಲಾರಿಗೂ ಬರ್ತದ.
ನನ್ನ ಮದುವೆಯೊಳಗ ಅವನು ಯಾತಕ್ಕ ದುಡ್ಡ ತಿಂದಾನು? ಹೇಗೆ
ಸಾಧಿಸೀತು? ಬಹಳ ಆದರೆ ಸಾಮಾನದೊಳಗ ಹತ್ತಿಪ್ಪತ್ತ ರೂಪಾಯಿ
ಸುಳ್ಳು ಹೇಳಿ ಏರಿಸಿರಬೇಕು ಇಷ್ಟೇ. ಎಂದು ವಿಚಾರಿಸಿ ಬಾಬಣ್ಣ ಆ ವಿಷಯ
ಬಿಟ್ಟುಬಿಟ್ಟ. ಆದರೆ ಅದೇ ದಿವಸ ಸಂಜೆಗೆ ಚಂದ್ರವ್ವ ಅಬಚಿಯ ಮನೆಗೆ
ಹೋಗಿ ಹೀಗೆ ಸಲಹೆ ಕೇಳದೆ ಇರಲಿಲ್ಲ.

"ಎತ್ತಾ ತಗೊಲಿಕ್ಕೆ ಗಂಗವ್ವ ರೂಪಾಯಿ ಕೊಡತಾಳ. ಅವರೊಳಗೆ
ಸೈರೆಕೂಡಿ ಒಕ್ಕಲತನ ನಡಸಲಿ ಏನು ?"

"ಮೊನ್ನೆ ಮದುವೆ ಸಾಲಕ್ಕ ಹೊಲಾ ಒಂದ ಬರದ ಕೊಡತೇನ ಅಂದಿ.
ನಿರ್ವಾಹವಿಲ್ಲದ ಆಗಲಿ ಅಂದೆವು. ದನಾ ದ್ರವ್ಯ ಅಲ್ಲ, ಕಂಚು ವಸ್ತು ಅಲ್ಲ,
ಅಂತಾರ. ಸಾಲ ಮಾಡಿ ಈಗೇತಕ್ಕೆ ಎತ್ತ ಬೇಕು ? ನಿಂದೇನ ನಾಲ್ಕ
ಕೂರಿಗಿ ಅಡವಿ. ನಮ್ಮ ಎತ್ತ ಒಂದೆರಡ ದಿವಸ ಒಯ್ದು ಹೊಡಕೋ ಬೇಕಾ
ದರೆ ಗಳೆ. ಸುಗ್ಗಿ ಆದ ಮೇಲೆ ಕೈಯಾಗ ದುಡ್ಡ ಆದವೆಂದರೆ ಕೊಂಡೀಯಂತ.
ಒಮ್ಮೆ ಪ್ರಪಂಚದೊಳಗ ಕಾಲ ಜಾರಿತು ಅಂದರೆ ಸುಧಾರಿಸುವುದು ಬಹಳ
ಕಠಿಣ ಅದೆ. ಇದೇ ಮದುವಿ ಸಾಲದೊಳಗಿಂದ ಏಳ ಮೊದಲ."

ಚಂದ್ರವ್ವ ಈರೀತಿ ಬೋಧಿಸಿದಳು. ಅವಳ ಮಗನಾದ ಆದಪ್ಪ
ಮಾಸ್ತರರ ಮತವೂ ಹೀಗೆಯೇ ಆಯಿತು. ತಾಯಿಯ ಮಾತಿಗೆ ಅವನಿಷ್ಟು
ಜೋಡಿಸಿದ,—

"ಅದರೊಳಗೆ ಗಂಗಾ ಏನ ಶುದ್ಧ ?"

೫

ಚಂದ್ರವ್ವನ ಸಲಹೆ ಕೇಳಿ, ಅವಳು ಹೇಳಿದಂತೆ ನಡೆಯಬೇಕೆಂದು
ಬಾಬಣ್ಣ ಬಂದದ್ದೇನೋ ನಿಜ. ಆದರೂ ಅಲ್ಲಿಂದ ಹೊರಡುವಾಗ ಅವನ
ಮನಸ್ಸು ಖಿನ್ನವಾಯಿತು. ಮನುಷ್ಯನು ತನಗೆ ಬೇಕಾದಂತೆ-ಅನ್ಯರು ಸಲಹೆ

ಕೊಟ್ಟರೆ ಸ್ವೀಕರಿಸುವನು. ತನ್ನ ಬಯಕೆಗೆ ವಿರುದ್ಧವಾಗಿ ಯಾರಾದರೂ ಹೇಳಿದರೂ ಕೂಡ ಅದನ್ನು ಸಂಪೂರ್ಣ ವಿಚಾರಿಸಿ ಬಿಟ್ಟುಬಿಡುವದು ಇಲ್ಲವೆ ಸ್ವೀಕರಿಸುವದು ಎಲ್ಲರಿಗೂ ಸಾಧ್ಯವಿಲ್ಲ. ಅಂತಲೇ ಬಾಬಣ್ಣನು ಮುಂದೆ ನಾಲ್ಕಾರು ದಿನಗಳಲ್ಲಿ ಗಂಗವ್ವನಿಂದ ಒಂದು ನೂರಾ ಐವತ್ತು ರೂಪಾಯಿ ಗಳನ್ನು ತಂದು ಎತ್ತನ್ನೊಂದು ಕೊಂಡು ತಂದ.

ಬಾಬಣ್ಣ ಎತ್ತನ್ನು ಕೊಂಡ ಅಂದರೆ ಅವನೇ ಪೇಟೆಗೆ ಹೋಗಿ ತಂದ ನೆಂದರ್ಥವಲ್ಲ. ಆ ಕೆಲಸವನ್ನೆಲ್ಲ ತಾತಪ್ಪ ಮಾಡಿದ. ಎತ್ತು ಕೊಳ್ಳು ವಲ್ಲಿ ಗಂಗವ್ವನ ಮನೆಯಲ್ಲಿರುವ ಎತ್ತಿನ ಹೆಗಲಿಗೆ ಸಮವಾಗುವಂತೆ ದೃಷ್ಟಿ ಯನ್ನಂತೂ ಆತ ಇಟ್ಟಿದ್ದ. ಅಲ್ಲದೆ ಗಂಗವ್ವ, ಬಾಬಣ್ಣನ ಹೊಲದ ಮೇಲೆ ಸಾಲಾ ಕೊಡಬೇಕೆಂದಿದ್ದ ಯುಕ್ತಿ ಸಾಧಿಸದಿದ್ದರೂ ಕೂಡ ಎತ್ತು ಕೊಳ್ಳ ಲಿಕ್ಕೆ ಹಣ ಕೊಡುತ್ತಿದ್ದಾಳೆ. ಇದಕ್ಕೆ ಕಾರಣ ತಮ್ಮ ಎತ್ತಿಗೆ ಜೊತೆ ಇಲ್ಲದೆ ಇರುವುದರಿಂದ ಎಂಬುದು ಅವನಿಗೆ ಗೊತ್ತು. ತಾವೇ ಎತ್ತು ಕೊಳ್ಳುವದಕಿಂತ ಬಾಬಣ್ಣನನ್ನು ಅದಕ್ಕೆ ಒಡೆಂ‌ಯನೆಂದು ಮಾಡಿದರೆ, ಆ ಹಣಕ್ಕೆ ಬಡ್ಡಿಯೂ ಬಂದಂತಾಯಿತು, ಇತ್ತ ಕೆಲಸಕ್ಕೆ ಎತ್ತೂ ಆಯಿತು, ತರುಣ ಆಳೂ ಕೈಯಲ್ಲಿ ಸಿಕ್ಕ, ಇವೆಲ್ಲ ವಿಚಾರಗಳು ಗಂಗವ್ವನ ಉದಾರ ದೃಷ್ಟಿಗೆ ತಳಹದಿಯಾಗಿ ದ್ದುವು. ಅದಕ್ಕೆ ತಾತಪ್ಪನ ಅನುಮತಿಯೂ ಇತ್ತು.

ಬಾಬಣ್ಣ ಸೋದರಳಿಯನಾದರೂ ಗಂಗವ್ವನ ಮನೆತನದ ವಿಷ ಯಕ್ಕೆ ತಾತಪ್ಪನಲ್ಲಿ ಆತ್ಮೀಯತೆ ಹೆಚ್ಚು. ಇದಕ್ಕೆ ಕಾರಣವು ಇಲ್ಲದಿಲ್ಲ. ತಾತಪ್ಪ ಈ ಊರಿಗೆ ಬಂದು ಹಂತ್ತೆಂಟು ವರ್ಷಗಳಾದುವು. ಬರುವಾಗ ನಾನೂರು ರೂಪಾಯಿಗಳನ್ನು ಸಂಗಡ ತಂದಿದ್ದ. ಅವನ ಆಸ್ತಿಯೆಂದರೆ ಅಷ್ಟೇ. ಹೊಲಮನೆಗಳನ್ನು ಈ ಮೊದಲೇ ಕಳೆದುಕೊಂಡಿದ್ದ. ಬರುವ ಮುಂಚೆ ಹೆಂಡತಿಯನ್ನು ಕಳೆದುಕೊಂಡು ಅಕ್ಕನ ಮನೆ ಸೇರಿದ್ದ. ಅದೇ ಕಾಲಕ್ಕೆ ಬಾಬಣ್ಣನ ತಂದೆಯೂ ತೀರಿಕೊಂಡಿದ್ದ. ಅನಾಥವಾದ ಮನೆಯನ್ನು ಒಳ್ಳೇ ಆಸ್ಥೆಯಿಂದ ನಾಲ್ಕು ವರ್ಷ ನಡೆಯಿಸಿದ. ಅದಕ್ಕೆ ಕೃತಜ್ಞಳಾಗಿ ತನ್ನಕ್ಕ—ಬಾಬಣ್ಣನ ತಾಯಿ,—ಬಾಳವ್ವನನ್ನು ತನಗೆ ಧಾರೆಯೆರೆದು ಕೊಡ ಬಹುದೆಂದು ಆಶಿಸಿದ್ದ. ಅದರಂತೆ ಒಂದೆರಡು ಸಲ ಆಡಿಯೂ ತೋರಿಸಿದ್ದ. ಆದರೆ ಈತ ಬಿರುಸು ವರವೆಂದು ಬಾಳವ್ವನ ಮದುವೆಯ ವಿಚಾರಬೇರೆ ಕಡೆಗೆ

ನಡೆಯಲು ಈತನೂ ಬಿರುಸಾದ, ಅಕ್ಕನ ಕೂಡ. ಅಂದಿನಿಂದ ಆ ಮನೆತನದ ವಿಷಯಕ್ಕೂ ಆತನಲ್ಲಿ ಆಸ್ಥೆ ಕಡಿಮೆಯಾಯಿತು. ಆದರೂ ಬಾಬಣ್ಣನ ತಾಯಿಯು ಸಾಯುವಾಗ ತಮ್ಮನ ಉಡಿಯಲ್ಲಿಯೇ ಮಗನನ್ನು ಹಾಕಿ ಜೀವ ಬಿಟ್ಟಿದ್ದಳು.

ಮಹಾನವಮಿ ಕಳೆಯಿತು. ಹೊಲಗಳೆಲ್ಲ ಬೆಳೆಗಳಿಂದ ತುಂಬಿ ತುಳು ಕುತ್ತಿವೆ. ಜೋಳದ ಹೊಡೆಗಳು ಗಂಟಲಲ್ಲಿ ಬಂದು ನಿಂತಿವೆ. ಹೊಲದ ತುಂಬೆಲ್ಲ ಗಿಳಿಗಳ ಹಿಂಡು ಕುಳಿತಂತೆ ಚಂದ ಕಾಣುತ್ತಿದೆ. ಇನ್ನು ನಾಲ್ಕೆಂಟು ದಿನಗಳಲ್ಲಿ ಭೂಪೂಜೆ. ಆದಕ್ಕಾಗಿ ಬಾಬಣ್ಣನ ಮನೆಯಲ್ಲಿ ಚನ್ನಾಗಿಯೇ ಸಿದ್ಧತೆ ನಡೆದಿದೆ. ಹೊಲದಲ್ಲಿಯ ಊಟ. ಅದರಲ್ಲಿ ಪದ್ಮಾವತಿಗೆ ಮೂರು ತಿಂಗಳು ಬಸಿರು ಬೇರೆ. ಅವಳ ಬಯಕೆಯೂಟವೂ ಆಯಿತು, ಭೂಮಿ ಪೂಜೆಯೂ ಆಯಿತು, ಎಂದು ಬಾಬಣ್ಣ ಲೆಕ್ಕ ಹಾಕಿದ್ದಾನೆ. ತನ್ನ ಲೆಕ್ಕಕ್ಕೆ ಸರಿಹೋಗುವಂತೆ ಅಂಗಡಿಯಿಂದ ಸಾಮಾನುಗಳನ್ನೂ ತಂದುಕೊಟ್ಟಿದ್ದಾನೆ. ಈಗ ಅವನು ಅಂಗಡಿಯಿಂದ ಸಾಮಾನುಗಳನ್ನು ಉದ್ದರಿ ತರಲು ಹಿಂದೆ ಮುಂದೆ ನೋಡುತ್ತಿರಲಿಲ್ಲ. ಹೊಲಗಳು ಚನ್ನಾಗಿ ಬೆಳದಿವೆ, ಕಾಳು ಕಡಿಗಳು ಬರುವವು, ಮಾರಿ ಕೊಟ್ಟರಾದೀತು, ಎಂದು ಹಂಚಿಕೆ ಹಾಕುವನು. ನಾಲ್ಕು ಕೂರಿಗೆ ಹೊಲವಿದೆ. ಹತ್ತೆಂಟು ಚೀಲ ಜೋಳ, ನೂರಾರು ರೂಪಾಯಿ ಬೆಲೆಬಾಳುವ ಹತ್ತಿಯಂತೂ ಬಂದೇ ಬರುವದು. ಈಗ ಬಿತ್ತಲಿರುವ ಕಡಲೆ ಚನ್ನಾಗಿ ಬಂದರೆ ಕಲ್ಲಪ್ಪ ಕಕ್ಕನ ಅರ್ಧ ಸಾಲವು ಕಳೆದೀತು ಎಂದು ಯೋಚಿಸುವ ಬಾಬಣ್ಣ. ಅದರೊಡನೆಯೇ ಈ ಎಲ್ಲ ಯೋಚನೆ ಕೈಗೂಡಬೇಕಾದರೆ ಇನ್ನೊಂದು ಮಳೆ ಮಾತ್ರ ಬೇಕು. ಅದು ದೇವರ ಕೈಯಲ್ಲಿ. ನಾನು ಮಾಡುವೆನೆಂದರೆ ಏನಾದೀತು? ಪರಮೇಶ್ವರ ಮಾಡಿಸಬೇಕು ಎಂದು ಆಕಾಶದ ಕಡೆಗೂ ನೋಡುವನು. ಎತ್ತನ್ನು ಕೈಯಲ್ಲಿ ಹಿಡಿದುಕೊಂಡು ಹೊಲಗಳ ಕಡೆಗೆ ನಡೆದನೆಂದರೆ ಒಮ್ಮೊಮ್ಮೆ ಇದೇ ವಿಚಾರ ಬಂದು ಮುಗಿಲ ಕಡೆಗೆ ನೋಡುತ್ತ ನಿಲ್ಲುವನು. ಅಲ್ಲಿ ಒಂದು ತುಂಡು ಮೋಡ ಕಂಡರೂ ಅವನಿಗೆ ಸಮಾಧಾನ. ಅಂಗೈಯಗಲ ಮೋಡವೇ ಮುಗಿಲ ತುಂಬ ಆಗಿ ಮಳೆ ಸುರಿದೀತು. ನಿನ್ನೆ ಚಿಂಚಲಿಯ ಮೂಲೆಗೆ ಮಿಂಚುತ್ತಿದ್ದಿತು. ಹೋದವರ್ಷ ಅಲ್ಲ---ಅದರ ಹಿಂದಿನ ವರ್ಷ ಭೂಮಿ

ಪೂಜಿಸಲಿಕ್ಕೆ ಹೋದಾಗ ಮಳೆ ಊಟವನ್ನೂ ಮಾಡಗೊಡಲಿಲ್ಲ. ತೋಯಿಸಿ ಕೊಂಡು ಮನೆಗೆ ಬರಲಿಲ್ಲವೇ ? ಆಗ ತಾಯಿಯಿದ್ದಳು. ಅವಳೇ ಅಡಿಗೆ ಮಾಡಿದ್ದಳು. ಈ ವಿಚಾರ ಬಂದಾಗ ಬಾಬಣ್ಣನ ಕಣ್ಣುಗಳು ಹಸಿ ಗೊಡುವವು. ಹಾಗೆಯೇ ವಿಚಾರ ಮುಂವರಿಯುವುದು. ಹೆಂಡತಿ ಹೆಣ್ಣು ಹಡೆದರೆ ತಾಯಿಯ ಹೆಸರನ್ನೇ ಇಡುವೆ. ತಿರುಗಿ ನನ್ನ ಮನೆಯಲ್ಲಿ ಹುಟ್ಟಿ ದಂತಾಯಿತಲ್ಲ, ಎಂದು ಸಮಾಧಾನವನ್ನು ಹೊಂದುವನು.

ಗಂಡನು ಮುಂದೆ ಹೊಲಕ್ಕೆ ಹೋದನೆಂದರೆ ಪದ್ಮಾವತಿಯು ಬುತ್ತಿ ತುಂಬಿಕೊಂಡು ಹಿಂದಿನಿಂದ ಹೊಲಕ್ಕೆ ಹೋಗುವಳು. ಬಾಬಣ್ಣ ಮುಂಜಾನೆ ಹೊಲಕ್ಕೆ ಹೋದೊಡನೆಯೇ ಎತ್ತಿಗೆ ಒಂದಿಷ್ಟು ಮೇವುಮಾಡಿ ಹಾಕುವನು. ಆ ಮೇಲೆ ಕಸ ತೆಗೆಯಲು ಕೂಡುವ. ಹೊಲಗಳು ಬಿರುಕು ಬಿಡುತ್ತಿವೆ. ಈಗ ಜೋಳದ ದಂಟಿನ ಕೆಳಗಿನ ಒಣ ತಪ್ಪಲ ತೆಗೆದು, ಹೊಡೆಹಾಕದ ಚಿಕ್ಕ ಪುಟ್ಟ ದಂಟುಗಳನ್ನು ತೆಗೆದರೆ ಜೋಳ ಸರಾಗವಾಗಿ ಬರುವದು. ಹಾಗೆಯೇ ಭೂಮಿಗೆ ಕೈಯಾಡಿಸಿದರೆ ಜೋಳದ ಸಿಲುವಿಗೆ ತಣಿವು. ಬಿರುಕು ಮುಚ್ಚು ವವು. ಅದಕ್ಕಾಗಿ ಊಟದ ಹೊತ್ತಿನೊಳಗಾಗಿ ಬಾಬಣ್ಣ ಎರಡು ಆಕ್ಕಡಿ ಗಳನ್ನಾದರೂ ಕಸ ತೆಗೆದು ಕೈಯಾಡಿಸಿ ಮುಗಿಸುವನು. ಆ ಮೇಲೆ ಮಣ್ಣಿನ ಕೊಡ ತಕ್ಕೊಂಡು ಸಮೀಪದ ಹೊಲದಲ್ಲಿರುವ ಕಕ್ಕನ ಬಾವಿಗೆ ಜಳಕಕ್ಕೆ ಹೋಗುವನು. ಜಳಕಮಾಡಿ ಬಂದು ದೋತರ ಒಣಗಲಿಕ್ಕೆ ಹಾಕಿ ಹೆಂಡ ತಿಯ ಹಾದೀ ನೋಡುತ್ತ ನಿಲ್ಲುವನು.

ಗಂಡನ ಊಟಕ್ಕೆ ಹೊತ್ತಾಯಿತೋ ಏನೋ ಎಂದುಕೊಂಡು, ಗಡ ಬಡಿಯಿಂದ ಅಡಿಗೆ ಮಾಡಿಕೊಂಡು, ಬುತ್ತಿ ತುಂಬಿಕೊಂಡು ಹೊಲಕ್ಕೆ ಹೊರಡುವಳು ಪದ್ಮಾವತಿ. ಆದರೂ ದೇಹದಲ್ಲಿ ಆಲಸ್ಯ. ಎಷ್ಟು ಉತ್ಸಾಹ ತೋರಬೇಕೆಂದರೂ ಪ್ರಕೃತಿ ಧರ್ಮ ಮೀರಲಿಕ್ಕಾಗದು. ಮೆಲ್ಲನೆ ಹೆಜ್ಜೆ ಇಡುತ್ತಲೇ ಬರುವಳು. ಹೊಲವೇನು ಬಹಳ ದೂರಿಲ್ಲ. ಊರುಬಿಟ್ಟು ಎರಡೇ ಮೈಲಿದೆ. ಆದರೆ ಈಗ ಅಷ್ಟು ನಡೆಯುವದೆಂದರೆ ಅವಳಿಗೆ ಬೇಜಾರು ಸುಮ್ಮನೆ ಹೋದಷ್ಟು ತಿಂದು ಮಲಗಬೇಕೆಂದವಳ ಬಯಕೆ. ಅದನ್ನರಿತು ಕೊಂಡು ನಡೆಯುವ ಹಿಂಗರುಳು ಮನೆಯಲ್ಲಿ ಇಲ್ಲ. ಹೆಣ್ಣು ಜೀವದ

ಬಯಕೆಯನ್ನು ಬಾಬಣ್ಣ ಅರಿಯಲಿಕ್ಕೆ ಅಸಮರ್ಥ. ಅದನ್ನು ಗಂಡನ ಮುಂದೆ ಹೇಳುವದಕ್ಕೆ ಪದ್ಮಾವತಿ—ಅದೇಕೆ ಯಾವ ಹೆಣ್ಣಾದರೂ—ಅಸಮರ್ಥಳೇ ಸರಿ.

ದೂರದಲ್ಲಿ ಪದ್ಮಾವತಿ ಬರುವದು ಕಂಡಿತೆಂದರೆ ಬಾಬಣ್ಣ ಹಿರಿ ಹಿರಿ ಹಿಗ್ಗುವನು. ತುಂಬುಮೈಯ ತರುಣಿ. ಅದರಲ್ಲಿ ಚೊಚ್ಚಲ ಬಸುರಿ. ಹಸು ಬಿಳುಪೊಡೆದ ಮುಖ. ಕಪ್ಪಾಗಿ ಒಳನಟ್ಟ ಕಣ್ಣುಗಳು. ಚೆಲ್ಲಾಟ ಅಳಿದ ಚಲನವಲನ. ಪ್ರಕೃತಿದೇವಿಯೇ ಹೆಣ್ಣಾಗಿ ಬರುತ್ತಿರುವಳೇನೋ ಎಂದು ಭಾವಿಸುವ ಒಂದು ಕ್ಷಣ. ಸುತ್ತಲೂ ನೋಡುವ. ಹೊಡೆತುಂಬಿದ ಬೆಳೆಯ ಹೊಲ ಗಿಳಿಯ ಹೊಟ್ಟೆಯಂತೆ ಬಿಸಿಲಿಗೆ ಹೊಳೆಯುವದು. ತಿರುಗಿ ಹೆಂಡತಿಯ ಕಡೆಗೆ ದೃಷ್ಟಿ ಚೆಲ್ಲುವ. ಹಸರು ಸೀರೆಯುಟ್ಟ ಅವಳೂ ಹಾಗೆಯೇ ತೋರುವಳವನಿಗೆ. ಒಂದು ಕ್ಷಣ ಭಕ್ತಿಯೋ ಪ್ರೇಮವೋ ಯಾವದೋ ಏನೋ ಅವನರಿಯದ ಭಾವ ಅವನ ಹೃದಯದಲ್ಲಿ ಉದ್ಭವಿಸುವದು. ಹಾಗೆಯೇ ಹೊಲದಂಚಿಗೆ ಬಿತ್ತಿದ ಹುಚ್ಚೆಳ್ಳಿನ ಸಾಲಿನ ಗುಂಟ ಅವಳು ಬರುವ ಕಡೆಗೆ ಸಾಗುವ. ಹುಚ್ಚೆಳ್ಳು, ಎಳ್ಳುಗಳು ಅವನ ನಡುವಿನವರೆಗೆ ಬೆಳೆದು, ಹೂಬಿಟ್ಟು ಒಪ್ಪುತ್ತಿವೆ. ಹೂಹೊಳೆಯಮೇಲೆ ಈಸಿ ಬರುವಂತೆ ಬಾಬಣ್ಣ ತೋರುವನು. ಹಳದಿ ಹೂಗಳ ನೆರಗು ಸಮುದ್ರದಂತ ಅಲ್ಲಿ—ಜರದ ಅಂಚಿನ ಹಸಿರು ಶಾಲಿನಂತೆ ಹೊಲ ತೋರುವುದು. ಆ ಹಳದಿ ಹೂಗಳ ಅಂಚಿನಲ್ಲಿಯೂ ಒಂದೊಂದು ಚಾಂಬಳ ಬಣ್ಣದ ಹೂಗಳನ್ನು ಮುದ್ರಿಸಿದಂತೆ ಎಳ್ಳಿನ ಹೂಗಳು ಅಲ್ಲಲ್ಲಿ ತೋರುವವು. ಅದರಲ್ಲಿ ಹಾಯ್ದು ಬರುವ—ಹೆಂಡತಿಯ ಎದುರಿಗೆ ಬರುವ—ಬಾಬಣ್ಣ ಅದೇಕೋ ಕೈಗಳಿಂದ ಸುಮ್ಮಸುಮ್ಮನೆ ಹೂಗಳನ್ನು ಹರಿಯುವ, ಬೆರಳುಗಳಿಂದ ಮೆಲ್ಲನೆ ತಿಕ್ಕುವ. ಅದು ಮುದ್ದೆಯಾಗಲು, ಕೈಗೆ ಹಸಿ ತಗಲಲು ಕೈಯಿಂದ ಸಲಕ್ಕ ಒಗೆಯುವ, ಮತ್ತೆ ಅರಿದೇಸೇ ಇನ್ನೊಂದು ಹೂವನ್ನು ಹರಿಯುವ, ಮುದ್ದೆ ಮಾಡುವ, ಒಗೆಯುವ. ಇನ್ನೇನೋ ಮನಸ್ಸಿನಲ್ಲಿ ಬಂದು ಒಂದೊಂದೇ ಹೂಗಳನ್ನು ಹರಿಯುತ್ತ ಮುಂದೆ ಸಾಗುವ. ಹತ್ತು ಹೆಜ್ಜೆ ಹೋಗುವಷ್ಟರಲ್ಲಿ ಕೈತುಂಬ ಹೂಗಳು!

ತಮ್ಮ ಹೊಲದ ಸೀಮೆ ಸಮೀಪಿಸುತ್ತಲೇ ಪದ್ಮಾವತಿ ದಾರಿಯನ್ನು ಬಿಟ್ಟು ಬದಿಗಾಗುವಳು. ಹುಲ್ಲಿನ ಮೇಲೆ ಕಾಲಿಡುವಳು. ಬರಿಗಾಲಿನ ಬಿಳಿ ಬಾಲೆಯ ಅಡಿಗಳು ಹಸಿರು ಹುಲ್ಲಿನಲ್ಲಿ ಸುಂದರವಾಗಿ ಕಾಣುವವು. ಸರೋವರ ದೊಳಗಿನ ಕಮಲಗಳಂತೆ ಎಂದು ಹೇಳಬಹುದು. ಹುಲ್ಲಿನ ಮೇಲೆ ಕಾಲಿಡುವಾಗಲೇ ಅವಳ ಮನಸ್ಸಿನಲ್ಲಿ ಬರುವದು—ಎಷ್ಟು ಚನ್ನಾಗಿ ಬೆಳೆದಿದೆ ಹುಲ್ಲು! ಎಮ್ಮೆಯೊಂದಿದ್ದರೆ ಹೊಟ್ಟೆ ತುಂಬ ಮೇಯಿಸಿಕೊಂಡು ಹೋಗಬಹುದಿತ್ತು ಎನ್ನುವಳು. ಈಗಿಲ್ಲ ಮುಂದಿನ ಸುಗ್ಗಿಗಾದರೂ ತಂದೇನಲ್ಲ ಎಂದೂ ಅಂದುಕೊಳ್ಳುವಳು. ಗಂಡನ ಮುಖದ ಕಡೆಗೆ ನೋಡಿ ಮುಗುಳುನಗೆಯೊಂದನ್ನು ಬೀರುವಳು.

"ಕೆಳಗೆ ನೋಡಿ ಕಾಲಿಡು. ಮುಳ್ಳುಗಿಳ್ಳು ಇದ್ದಾವು."

ಎಂದು ಬಾಬಣ್ಣ ಹೇಳುವನು. ಅಂಥ ಹುಲ್ಲಿನಲ್ಲಿ ಮುಳ್ಳು ಇರುವುದು ಅಸಂಭವವೆಂದು ಗೊತ್ತಿದ್ದರೂ, ತಾನು ಹತ್ತಾರು ಸಲ ಅಲ್ಲಿ ಬರಿಗಾಲಿಸಿಂದ ಅಡ್ಡಾಡಿದ್ದರೂ ಬಾಬಣ್ಣನಿಗೆ ಹಾಗೆ ಹೇಳದೆ ಇರಲು ಆಗುತ್ತಿರಲಿಲ್ಲ. ಗಂಡನ ಮಾತಿಗೆ ಪದ್ಮಾವತಿ ಉತ್ತರ ಕೊಡುವಳು,—

"ಹೂಂ! ಕಾಲೊಳಗ ಚಪ್ಪಲಿ ಮಾಡಿಸಿ ಕೊಟ್ಟೇರಿ. ಮತ್ತ ಕಾಳಜಿ ತಕ್ಕೊಳ್ಳವರಲ್ಲ!"

ಸಹಜ ಹೆಂಡತಿ ಅಂದ ಮಾತೂ ಬಾಬಣ್ಣನ ಮನಸ್ಸಿಗೆ ಹತ್ತುವದು. ತನ್ನಿಂದ ಇಂದಿನವರೆಗೆ ಒಂದು ಜೋಡವೂ ಮಾಡಿಸಿ ಕೊಡಲಾಗಲಿಲ್ಲವಲ್ಲ, ಎಂದು ಕೊರಗುವ. ಆದರೂ ನಗೆಯಲ್ಲಿ ತೇಲಿಸಿಯೇ ಹೇಳುವನು,—

"ಮೊನ್ನೆ ತವರುಮನೆಗೆ ಹೋಗಿದ್ದಿ, ತರಬೇಕಾಗಿತ್ತು ಒಂದು ಜೋಡ ಚಪ್ಪಲಿ?"

"ಮೊದಲನೆ ಸಲ ತವರಮನೆಯಿಂದ ಕೆರವ ತರಬಾರದಂತ ಬಿಟ್ಟೇನಿ ಬಾ...."

ಹೆಂಡತಿಯ ಮಾತನ್ನು ನಡುವೆಯೇ ತಡೆದು ಬಾಬಣ್ಣ ಅಂದ,—

"ಎಲ್ಲಾ ಶಾಸ್ತ್ರದ ನಿಮಿತ್ತ ಹೇಳಲಿಕ್ಕೆ ಬರತದ...."

"ಒಳ್ಳೇ ನೂರ ರೂಪಾಯಿ ಮದುವೆಯೊಳಗ ತಗೊಂಡೀರಿ. ಮತ್ತೇಕೆ ಅವರ ಕಡೆಯಿಂದ ತರುವ ಆಶಾ ನಿಮಗ?"

" ಯಾರ ತಗೊಂಡಾರ ನೂರ ರೂಪಾಯಿ ? "

" ನೀವು ! "

ಎಂದು ಗೋಣು ಕೊಂಕಿಸಿ ಮುಂದೆ ಬಂದಳು ಪದ್ಮಾವತಿ. ಅವಳನ್ನು ಕಂಡು ಬಾಬಣ್ಣನಿಗೆ ಏನೆನಿಸಿತೋ ಏನೋ--ಕೈಯೊಳಗಿನ ಹೂಗಳನ್ನು ಅವಳ ಮೇಲೆ ತೂರಿದ.

" ಇಶ್ ! "

ಎಂದು ಗೋಣು ಝಾಡಿಸಿದಳು ಪದ್ಮಾವತಿ. ಹೂವಿನ ಹುಡಿ ಮುಖಕ್ಕೆ ಹತ್ತಿ ಅರಸಿನ ತೊಡೆದಂತೆ ತೋರಹತ್ತಿತು. ಆ ಮುಖ ಇನ್ನಷ್ಟು ಚೆಲುವಾಗಿ ಕಂಡಿರಬೇಕು ಬಾಬಣ್ಣನಿಗೆ. ನಗೆಯಿಂದ ಅಂದ,--

" ಬುಟ್ಟಿಯೊಳಗಿನ ಮೊಸರ ಮಜ್ಜಿಗೆ ತುಳಕ್ಯಾವು ! "

" ಮನೆಯೊಳಗ ಎಮ್ಮಿಯನ್ನೇ ಕಟ್ಟಿರುವಿರಿ. ತುಳುಕಿ ಚಲ್ಲಿದರೆ ಏನ ಮಾಡೀರಿ ಮತ್ತ ! "

" ಎಮ್ಮಿ ಕಟ್ಟಿದರೆ ನೀನೇ ಬಿಸಲೊಳಗ ಮೇಯಿಸತ ತಿರಗಬೇಕಲ್ಲ."

" ಅಯ್ಯ ! ದವಳವರೇ. ಎಂಥಾ ಚಂದ ಹುಲ್ಲ ಅದ. ಮೇಯಿಸಿದರೇ ನಾತು ? "

" ಇರತದ ಹಾಗೇ ಹುಲ್ಲ ಬಾ. "

" ಇರತದ ಅಂದರ ಏನು ? ಭೂಮಿತಾಯಿ ಉಡಿ ತುಂಬಿಕೊಂಡು ಕೊಡಲಿಕ್ಕೆ ನಿಂತಿದಾಳು. ನಾವು ತಗೋಲಿಕ್ಕೆ ಸಿದ್ಧರಿಲ್ಲ. ಏನ ಮಾಡತೀರಿ. ಹಾದಿಗೆ ಬಂದ ಸುಮ್ಮನೆ ನಿಂತಿದೀರಿ. ಕೈಯೊಳಗ ಎತ್ತಾ ಹಿಡಕೊಂಡ ನಿಂತಿದ್ದರೆ ಮೇಯುತಿರಲಿಲ್ಲ, ತನ್ನಿಂದ ತಾನೇ? ಅದಕ್ಕೂ ಏನ ನೀವು ದಡಿಯಲಿಕ್ಕೆ ಬೇಕಾಗೇದ? ಸುಮ್ಮನೆ ಮುಂದ ನಿಂತರ ಆಯ್ತು. "

" ಈಗ ಮೇವು ಮಾಡಿ ಹಾಕಿದೇನಲ್ಲ ? "

" ನಾವು ಮಾಡಿ ಹಾಕಿದರೆ ಹೇಗೆ, ಅದೇ ತನ್ನಿಂದ ಬಾಯಿಂದ ಮೇದರೆ ಹೇಗೆ? ಎಷ್ಟ ನಾವು ಹಾಕಿದರೂ ಅಳತೀ ಮೇವದು. ತಾನೇ ಮೇಯ್ದರೆ ಅಳತೆಯಿಲ್ಲದ ಮೇವು. ಅವುಗಳಿಗೆ ಸಮಾಧಾನ ಆಗ್ತದ. "

" ಇರಲಿ, ಬಾ ! "

ಎಂದು ಬಾಬಣ್ಣಾ ಮುಂದೆ ಬಂದು ಹೆಂಡತಿಯ ತಲೆಯ ಮೇಲಿನ ಬುತ್ತಿ ಇಳಿಸಿಕೊಳ್ಳುವನು.

ಇನ್ನೂ ಅಲ್ಲಿ ಜೋಪಡಿ ಅದ. ಈಗ ಏಕೆ?”

“ಇರಲಿ. ತಾ....”

ಎಂದು ತಕ್ಕೊಂಡು ಮುಂದೆ ನಡೆಯುವನು, ಜೋಳದ ಹೊಲದಲ್ಲಿ.

“ಖಾರಬೇಳಿ ಅದ ತುಳಕೀತು” ಅನ್ನುವಳು ಪದ್ಮಾವತಿ.

“ಕಣ್ಣಿಗೆ ದಂಟು ಒತದಾವು. ಸಾವಕಾಶ ಬಾ” ಎಂದು ಹೇಳುವ ಬಾಬಣ್ಣಾ.

ತಲೆಯ ಮೇಲಿನ ಸಿಂಬೆಯನ್ನು ಕೈಯಲ್ಲಿ ಹಿಡಿದುಕೊಂಡು ಸೆರಗು ಮುರಿದುಕೊಳ್ಳುತ್ತ ಗಂಡನ ಹಿಂದಿನಿಂದಲೇ ಬರುತ್ತ ಅನ್ನುವಳು ಪದ್ಮಾವತಿ.

“ಇನ್ನೊಂದ ಮಳಿ ಆಗಿದ್ದರ ನೆಟ್ಟಗಿತ್ತು. ಎಷ್ಟ ಚಂದ ಬೆಳೆದಾದ ಜೋಳ.”

“ಹೆಸರ ಬಳ್ಳಿಯೊಳಗ ಕಾಲಿಡಬೇಡ ಹುಳ ಹೊಕ್ಕು!”

ಎಂದು ಸೂಚಿಸುವ ಬಾಬಣ್ಣಾ.

“ನಾ ಒಂದ ಅನ್ನತೇನಿ, ತಾವೊಂದ ಹೇಳ್ತಾರ”

“ಅದೇ ಅಂದೆ ನಾನೂ. ಹೆಸರ ಬಳ್ಳಿ ಬೆಳೆ ಅದ ಅಂತ ಹೇಳಿದೆನಲ್ಲ?

“ನೀವು ಹೇಳಿದ್ದ ತಿಳೀಲಿಲ್ಲ ನನಗ. ಇನ್ನೊಂದ ಮಳಿ ಬೇಕು ಅಂದೆ ನಾ.”

“ಅದೇನ ನಮ್ಮ ಕೈಯೊಳಗಿಂದ ಅದ?”

“ನಮ್ಮ ಕೈಯೊಳಗ ಇದ್ದದ್ದನ್ನಾದರೂ ಮಾಡೋದಿಲ್ಲ.”

“ಮಾಡಲಿಕ್ಕೇ ಹತ್ತಿದ್ದೇವಲ್ಲ. ಹರಿಹೊತ್ತ ಎರಡ ಅಕ್ಕಡಿ ಕಸ ತೆಗೆದೇನಿ. ಈಗ ನೀ ಬರುವಿ ಅಂತ ಜಳಕ ಮಾಡಿ ಬಂದ ಹಾದಿಗೆ ಸಹಜ ಬಂದಿದ್ದೆ.”

ಗಂಡನ ಒರಿ ತಲೆಯ ಕಡೆಗೆ ದೃಷ್ಟಿ ಬೀರಿ ಪದ್ಮಾವತಿ ಕೇಳಿದಳು,—

“ಇಂದೂ ತಣ್ಣೀರೊಳಗ ತಲೆ ಮುಳುಗಿಸಿದಿರಿ ಕಾಣ್ತದ?”

“ಇಲ್ಲ!” ನಸು ಬೆದರಿಕೆ ಬಾಬಣ್ಣನ ಸ್ವರದಲ್ಲಿತ್ತು.

" ಇಲ್ಲೇನ ಮತ್ತ ? ತಿಳಿಯೂದಿಲ್ಲೇನ ನನಗ ? ನೆಗಡಿ ಆಗಿ ಜಾಸಿಗೆ ಹಾಕರಿ ಅಂದರೆ ಹೇಳ್ತೀನ. ಮೊದಲೇ ಮನೆಯೊಳಗ ಜಳಕಾಮಾಡಿ ಹೋಗರಿ ಅಂದರೆ ಕೇಳೋದ ಇಲ್ಲ. ದಿನಾ ನೀರೊಳಗ ಮುಳಗಿ ಏಳೋದ. "

" ಸಹಜ ಬಾವಿಗೆ ಹೋಗ್ತೇನೆ. ಜಳಕ ಆಗ್ತದ. ನೀರಿಗೆ ಆದರೂ ಹೋಗಲಿಕ್ಕೆ ಬೇಡ? ನಸುಕಿನೊಳಗ ಎದ್ದ ಹೊಲಕ ಬರತೇನೆ. ಜಳಕವಾಗಿ ಬಂದರ ಅಲ್ಲಿ ನೀರು ಯಾರು ತರುವರು? "

" ಈಗ ತರುವದಿಲ್ಲೇನೋ ನಾ? "

" ತರತಿದ್ದ ಆದಿ ಒಂದ ಸಾರಿಗೆ. "

" ಒಂದೇನೋ ಎರಡೇನೋ ತರತೇನಲ್ಲ. ಅದಕ್ಕಾಗಿ ತಣ್ಣೀರ ಜಳಕ ಮಾಡಬೇಡಿರಿ ನೀವು. "

" ಅದಕ್ಕಾಗಿ ಯಾತಕ್ಕ ಮಾಡಲಿ? ಮೈಗೆ ಹಿತಾಹಿತ ಮಾಡತೇನಿ. "

ಮಾತು ಹೊರಳಿಸಿದ ಬಾಬಣ್ಣ. ಹೆಂಡತಿಯ ಮನಸ್ಸೂ ಮೈ ಕೈ ಗಳೂ ನೋಯಬಾರದೆಂದೇ ಅವನ ಬಯಕೆ. ಒಬ್ಬರನ್ನರಿತು ಇನ್ನೊಬ್ಬರು ಬಾಳುವರು. ಒಬ್ಬರ ಸುಖವನ್ನು ಇನ್ನೊಬ್ಬರು ಬಯಸುವರು. ಅದ ರಲ್ಲಿಯೇ ತಮ್ಮ ತಮ್ಮ ಸುಖವನ್ನು ಅನುಭವಿಸುವರು.

ಸಹಜ ಮಾತಿಗೆ ಮಾತು ಕೊಡುವಾಗ ಪದ್ಮಾವತಿಯು ತನ್ನ ತಂದೆಯ ಮನೆಯವರು ನೂರು ರೂಪಾಯಿ ವರದಕ್ಷಿಣೆ ಕೊಟ್ಟದ್ದನ್ನು ಹೇಳಿದಳು. ಬಾಬಣ್ಣ ಸ್ವತಃ ಹೆಣ್ಣಿನವರಿಗೆ ಕೊಡಲಿಕ್ಕೆಂದು ಕಲ್ಲಪ್ಪನ ಕೈಯಲ್ಲಿ ನೂರು ರೂಪಾಯಿ ಕೊಟ್ಟಿದ್ದ. ಈಗೀಗ ತನ್ನ ಸೋದರ ಮಾವನು ಅನ್ನುತ್ತಿದ್ದ ಮಾತಿನ ಮೇಲೆ ಬಾಬಣ್ಣನಿಗೆ ಭರವಸೆ ಹುಟ್ಟಹತ್ತಿತು. ಆದರೂ ಮಾಡುವ ನೇನು? ಮಿಂಚಿಹೋದ ಮಾತು. ಕಲ್ಲಪ್ಪನ ವಿರೋಧ ಕಟ್ಟಿಕೊಂಡರೂ ಲಾಭವಿಲ್ಲ. ತನ್ನ ಚಂಡಿಕೆಯೇ ಅವನ ಕೈಯಲ್ಲಿ ಸಿಕ್ಕಿವೆ. ಸಾವಕಾಶ ಬಿಡಿಸಿಕೊಂಡು ಅವನ ಸಂಗತಿಯನ್ನು ಬಿಟ್ಟರಾಯಿತು ಎಂದುಕೊಂಡು ಸುಮ್ಮನಿದ್ದ.

ಬಯಸುತ್ತಿದ್ದ ಮಳೆ ಬರಲಿಲ್ಲ. ಸುಗ್ಗಿಯೇನೋ ಆಯಿತು. ಮೂರು ತಿಂಗಳು ಒಂದೇ ಸವನೆ ಸಾಗುತ್ತಿದ್ದ ಸುಗ್ಗಿ ಒಂದೇ ತಿಂಗಳಲ್ಲಿ ತೀರಿ

ಹೋಯಿತು. ಕಡಲೆ ಬಿತ್ತಲಿಕ್ಕೆಂದು ಕಾಯ್ದು ಹೊಲ ಕರಿಯದೇ ಉಳಿಯಿತು. ಜೋಳ ಬಿತ್ತಿದ ಎರಡು ಕೂರಿಗೆಯಲ್ಲಿ ಹೊಟ್ಟೆಗೆ ಸಾಲುವಷ್ಟು ಕೂಡ ಜೋಳ ಬರಲಿಲ್ಲ. ಹತ್ತಿಯು ಬೆಳೆ ಬಿತ್ತಿದ್ದಷ್ಟೇ ಗುರುತು. ಉದ್ದರಿ ತಂದ ಬೀಜದ ಲೆಕ್ಕವನ್ನು ಜೋಳ ಮಾರಿ ತೀರಿಸಬೇಕಾಯಿತು.

ಆ ವರ್ಷದ ಸುಗ್ಗಿಯೇನೋ ಸುಖ ತರಲಿಲ್ಲ. ಆದರೆ ಪದ್ಮಾವತಿಯ ಬಸಿರು ಮಾತ್ರ ಸುಖ ತರದೆ ಬಿಡುವಂತಿರಲಿಲ್ಲ. ಚೊಚ್ಚಿಲು ಬಸಿರು. ನೆರೆಯವರು ಆಪ್ತರು ಎಲ್ಲರೂ ಕುಪ್ಪಸ ಮಾಡುವವರೇ. ಚಂದ್ರವ್ವ ಹಿರಿಹಿರಿ ಹಿಗ್ಗಿ ಪದ್ಮಾವತಿಯನ್ನು ಕರೆದು ಉಣ್ಣಿಸಿ ಹಸಿರು ಕುಪ್ಪಸ ಮಾಡಿದಳು. ಆಗ ಬಾಬಣ್ಣನನ್ನೂ ಊಟಕ್ಕೆ ಕರೆದಿದ್ದಳು.

“ ನಿನ್ನ ಐಸಿರಿ ನೋಡಲಿಕ್ಕೆ ನಿಮ್ಮ ಅವ್ವ ಇಲ್ಲ ಆದಳಪ್ಪ! ”

ಎಂದು ಕಣ್ಣೀರು ಮಿಡಿದಳು.

“ ಆಕೆ ಇದ್ದರೆ ಈಗೆಷ್ಟು ಸಂತೋಷ ಪಡತಿದ್ದಳು! ”

ಎಂದು ಕಣ್ಣೀರು ಒರಸಿಕೊಂಡ ಬಾಬಣ್ಣ.

“ ಇದ್ದವರ ನೀವೇ ಇನ್ನ ತಾಯಿತಂದೆ ಅಲ್ಲ! ”

ಎಂದು ಪದ್ಮಾವತಿ ಚಂದ್ರವ್ವನ ಮೇಲೆಯೇ ಎಲ್ಲ ಭಾರಹೊರಿಸಿದಳು. ಆವಳ ಮಾತಿಗೆ ಏನರ್ಥ ಕಲ್ಪಿಸುವಳೋ ಏನೋ ಚಂದ್ರವ್ವ ನುಡಿಯುವಳು,—

“ ಯಾಕ ಪದ್ಮವ್ವ, ಒಯ್ಯಲಿಕ್ಕಿಲ್ಲ ನಿನ್ನ ತವರುಮನೆಯವರು ಹಡಿಯಲಿಕ್ಕೆ ಅತ್ತ? ”

“ ಅದ್ಯಾಕ ಅತ್ತಾ್ಯ, ಹೋಗತೇನಲ್ಲ. ”

“ ಅದನ್ನ ಅಂದೆ ತಾಯಿ ನಾ. ಈ ವರ್ಷದ ಸುಗ್ಗಿ ಬೇರೆ ಹಿಂಗಾಯ್ತು. ಇಲ್ಲೇ ಹಡೆಯುವಿ ಅಂದರ ಬಾಬಣ್ಣನ ಎದೆ ಹಾರತದ. ”

ಬಾಬಣ್ಣನು ಚಂದ್ರವ್ವ ಅಬಚಿಯ ಮಾತಿಗೆ ಹೆಂಡತಿ ಏನೆಂದು ಭಾವಿಸುವಳೋ ಏನೋ ಎಂದು ತಿಳಿದು ಅನ್ನುವ,—

“ ನಮ್ಮದ ನಮಗ ಭಾರೇನ ಬಿಡು ಅಬಚಿ. ಅವರ ಒಯ್ಯಲಿ ಇಲ್ಲಾದರ ಬಿಡಲಿ. ನೀನಾದರೂ ಇದ್ದೀಯಲ್ಲ ಮಾಡಲಿಕ್ಕೆ? ”

ಗಂಡನ ಮಾತಿನಲ್ಲಿರುವ ಭಾವವನ್ನೂ, ಚಂದ್ರವ್ವನಿಗೆ ತಮ್ಮ ಮನೆತನದ ಆರ್ಥಿಕ ಭವಿತವ್ಯದ ಬಗ್ಗೆ ಇದ್ದ ವಿಚಾರವನ್ನೂ ತಿಳಿದುಕೊಂಡೇ ಪದ್ಮಾವತಿ ನುಡಿಯುವಳು,—

" ಏಳರೊಳಗ ಬುತ್ತಿರೊಟ್ಟಿ ಬೀರಿ, ಹಾಗೇ ಕರಕೊಂಡ ಹೋಗಲಿಕ್ಕೆ ಬರತಾರ. ಆವರೇನ ಇಲ್ಲ. ಇವರಿಗೇ ಐದಾರ ತಿಂಗಳ ಬಿಟ್ಟು ಇರಲಿಕ್ಕೆ ಆಗದ್ದಕ್ಕ ಹೀಗೆ ಹುಳುಹುಳು ಮಾಡ್ತಾರ. "

ಪತಿಯ ಮುಖದ ಕಡೆಗೆ ನೋಡಿ ನುಡಿದಳು ಪದ್ಮಾವತಿ.

" ನನಗೇನ ಅಬಚಿ, ನಾ ಬಿಟ್ಟು ಇರತೇನ. ಆಕೆಗೇ ಆಗೋದಿಲ್ಲ. "

ಎಂದು ಸಲಿಗೆಯಿಂದ ನಕ್ಕು ಹೇಳಿದ ಬಾಬಣ್ಣ. ಈ ಸುಖದ ದಾಂಪತ್ಯವನ್ನು ಕಂಡು ಸಂತಸಪಡುವಳು ಚಂದ್ರವ್ವ. ಆದರೂ ಅವಳ ಮನಸ್ಸು ಒಳಗೊಳಗೇ ಲೆಕ್ಕ ಹಾಕುವದು. ಇವಳು ಐದಾರು ತಿಂಗಳು ಅತ್ತ ಹೋದಳೆಂದರೆ ಬಾಬಣ್ಣ ಒಬ್ಬನೇ ಇರುವನು. ಖರ್ಚೂ ಕಡಿಮೆ ಆಗುವದು. ತಾತಪ್ಪನ ಊಟವೂ ಇಲ್ಲದಂತಾಗುವದು. ಜಪ್ಪಿಸಿ ತಿಂದರೆ ಮುಂದಿನ ಸುಗ್ಗಿ ಕಾಣತಾನ ಬಾಬಣ್ಣ. ಸಾಲ ಅಂತೂ ಕುಳಿತಲ್ಲಿಯೇ ಕೂಡತದ. ಇರಲಿ ಅದಕ್ಕೇನ ಮಾಡೋದ ಅದ?

ಚಂದ್ರವ್ವನ ವಿಚಾರಕ್ಕೆ ತಕ್ಕಂತೆಯೇ ಪದ್ಮಾವತಿಯೂ ಹೇಳಿದಳು,—

" ನಾಲ್ಕಾರು ತಿಂಗಳು ನಿಮ್ಮ ಮೇಲೇ ಅವರ ಹೊಟ್ಟೀದ ಭಾರ ಬೀಳ್ತದ ಆಯ್ತು. "

" ಬೀಳಲಿ ಅಲ್ಲಾ, ಮಾಡಿ ಹಾಕತೇನು. ಬಂದ ಎರಡ ಹೊತ್ತ ಉಂಡ ಹೋಗಲಿ ಅಂದರ ಆಯ್ತು. "

" ಈಗ ಹೊರಟ ನಿಂತವರಂತೆ ಹೇಳ್ತಿಯಲ್ಲ? " ಬಾಬಣ್ಣ ನಡುವೆ ಕೇಳಿದ.

" ಅಯ್ಯ! ಇನ್ನೆಷ್ಟ ದಿನಾ ಅದನವ್ವ ಅತ್ಯಾ? ಮುಂದಿನ ವಾರದೊಳಗ ಬಂದಾರವ್ವ ಕರೆಯಲಿಕ್ಕೆ. ಒಂದ ವಾರ ಅಂದರೆ ಏನು? ಈಗ ನೋಡ ನೋಡ್ತ ಹೋಗತದ. ಈಗಿನಿಂದೂ ನಾ ಸಾಮಾನದ ವ್ಯವಸ್ಥೆ ಹಚ್ಚಲಿಕ್ಕೆ ಬೇಕು.... "

ಬಸಿರು ಹೆಂಗಸು ಪದ್ಮಾವತಿ ಉಸಿರು ಬಿಟ್ಟು ನುಡಿದಳು.

"ಬೇಕಲ್ಲವ್ವ!" ಎಂದು ಚಂದ್ರವ್ವನೂ ಅನುಮೋದಿಸಿದಳು.

ಮುಂದೆ ಸ್ವಲ್ಪ ದಿನಗಳಲ್ಲಿಯೇ ಪದ್ಮಾವತಿಯ ತವರುಮನೆಯವರು ಕರೆಯಲಿಕ್ಕೆ ಬಂದರು. ಅಲ್ಲಿಯವರೆಗೆ ದಾರೀ ಕಾಯ್ದರೂ ಗಂಗವ್ವ ಮಾತ್ರ ಪದ್ಮಾವತಿಗೆ ಕುಪ್ಪಸ ಮಾಡಲಿಲ್ಲ. ಬಾಬಣ್ಣ ಪೇಟೆಯಿಂದ ಮೇಲಿ ಅವರ ಮನೆಗೆ ಹೋಗಿ ಬರುತ್ತಿದ್ದ. ಎತ್ತುಗಳ ಕೆಲಸ ಕೂಡಿಯೇ ಸಾಗುತ್ತಿದ್ದಿತು. ಎಲ್ಲ ಕೆಲಸಕ್ಕೂ ತಾತಪ್ಪನ ಸಲಹೆಯಂತೂ ಇದ್ದೇ ಇದ್ದಿತು. ಹೋದಾಗ ಸುಂದರವ್ವ ಒಂದು ಕಪ್ಪು ಚಹನನ್ನೂ ತಂದು ಕೊಡುತ್ತಿದ್ದಳು. ಆಗಾಗ ಸವಿಸವಿ ತಿನಿಸೂ ಸಿಗುತ್ತಿದ್ದಿತು. ಒಂದೆರಡು ಸಲ ಗಂಗವ್ವನೂ ಅಂದಳು,—

"ಇನ್ನೇನು ನಿನ್ನ ಹೆಂಡತಿ ಹಡೆಯಲಿಕ್ಕೆ ಹೋಗುವಾಕೆ. ಕೂಸಾ ತಾನೂ ಅಂತ ಬರಲಿಕ್ಕೆ ಅಂದರೆ ಒಂದು ವರ್ಷ, ಹೋಯಿತು. ಅಲ್ಲಿಯ ವರೆಗೆ ಇಲ್ಲೇ ಉಣ್ಣು ಬೇಕಾದರೆ. ನಿನ್ನದಾದರೂ ಮನೆಯೊಳಗೇನಿದೆ?"

ಬಾಬಣ್ಣ ಸುಮ್ಮನಿದ್ದ. ಚಂದ್ರವ್ವನ ಮನೆಯ ಅಡಿಗೆಗಿಂತ ಗಂಗವ್ವನ ಮನೆಯ ಅಡಿಗೆ ಅವನಿಗೆ ಹೆಚ್ಚು ಸೇರುತ್ತಿದ್ದಿತು. ಚಂದ್ರವ್ವನಲ್ಲಿ ಮಾಸ್ತರರು ಕರಿದ ಪದಾರ್ಥ ತಿನ್ನುವುದು ಕಡಿಮೆ. ಅವರದು ಸಾದಾ ಅಡಿಗೆ. ಬಾಬಣ್ಣನಿಗೆ ಎಣ್ಣೆಯಲ್ಲಿ ಕರಿದ ಜಿನಸಂದರೆ ತುಂಬ ಪ್ರೀತಿ. ಅದು ಗಂಗವ್ವನ ಮನೆಯಲ್ಲಿ ವಿಪುಲ. ಅದರ ಜೊತೆಗೆ ಸುಂದರಿಯ ನಗೆಮಾತುಗಳು. ಹೀಗಾಗಿ ಅವನ ಮನಸ್ಸು ಗಂಗವ್ವನ ಮನೆಯ ಕಡೆಗೇ ಒಲಿಯುತ್ತಿದ್ದಿತು. ಅವರೂ ಊರಿಗೆ ಹೋಗುವವರೆಗೂ ಪದ್ಮಾವತಿ ಚಂದ್ರವ್ವನ ಮನೆಯಲ್ಲಿಯೇ ಉಣ್ಣಲು ಹೇಳಿದ್ದಾಳೆ. ಏನು ಹತ್ತಿದ ಕಾಳುಕಡಿಗಳನ್ನು ಕೊಟ್ಟರೂ ಅಡ್ಡಿಯಿಲ್ಲ, ಅಲ್ಲಿಯೇ ಊಟ ಮಾಡು ಎಂದು ಆಗ್ರಹ ಮಾಡಿ ಹೇಳಿರುವಳು. ನಾಲ್ಕೆಂಟು ದಿನ ಸಾಲುವಷ್ಟು ಜೋಳವನ್ನು ಬೀಸಿ ಹಿಟ್ಟನ್ನೂ ಒಯ್ದು ಕೊಟ್ಟಿದ್ದಾಳೆ. ಆದರಿಂದ ಬಾಬಣ್ಣ ಅಲ್ಲಿಯೇ ಊಟಕ್ಕೆ ಹೋಗುತ್ತಿದ್ದ. ಬಾಬಣ್ಣನಿಗೆ ತಮ್ಮ ಮನೆಯ ರೂಢಿಯಾಗುವ ವರೆಗೆಂದು ಮಾಸ್ತರರೂ ಅವರ ಜೊತೆಗೇನೇ ಊಟಕ್ಕೆ ಕೂಡುವರು. ಪ್ರಪಂಚದ ಸ್ಥಿತಿಗತಿಗಳನ್ನು ಕೇಳಿಕೊಳ್ಳುವರು. ಕಾಲದ ವಿಷಯ ಮಾತಾಡುವರು. ಹಾಗೆ ಮಾತಾ ಡುತ್ತ ಮಾತಾಡುತ್ತ ಒಮ್ಮೆ ಕೇಳಿದರು,

" ಈ ಸಲ ನಮ್ಮದೂ ಒಂದೇ ಎತ್ತು ಉಳಿಯುವದು. ಒಂದೆತ್ತನ್ನು ಮಾರಬೇಕೆಂದಿದ್ದೇವೆ. ನಮ್ಮ ಹಿರಿಯರ ಕೈಯಿಂದಲೂ ಆಡನಿಯು ಕೆಲಸ ಆಗದು. ನೀನೇ ಬೇಕಾದರೆ ನಮ್ಮ ಎತ್ತಿನ ಜೊತೆ ನಿನ್ನ ಎತ್ತ ಕೊಡು."

ಬಾಬಣ್ಣ ಸುಮ್ಮನಾದ. ಮಾಸ್ತರರೂ ಅಷ್ಟಕ್ಕೆ ಬಿಟ್ಟರು. ಅವನಿಗೆ ತಿಳಿದಂತೆ ಮಾಡಲಿ. ಅವನ ಸಂಬಂಧ ಗಂಗವ್ವನಲ್ಲಿ ಹೆಚ್ಚಿಗಿದೆ. ಎತ್ತು ಕೊಳ್ಳಲಿಕ್ಕೆ ಹಣ ಕೊಟ್ಟವಳು ಆವಳು. ಅಂಥ ಸಹಾಯ ನಮ್ಮಿಂದ ಆಗದು. ನನ್ನ ಪಗಾರ, ಹೊಲದ ಉತ್ಪನ್ನದಲ್ಲಿ ಮನೆ ನಾಗಿಸುವದೇ ಕಠಿಣ. ಹೆಚ್ಚಿನದೇನು ನಮ್ಮಿಂದ ಆದೀತು, ಎಂದುಕೊಂಡು ಸುಮ್ಮನಿದ್ದರು.

ಗಂಗವ್ವ ನಾಲ್ಕೆಂಟು ದಿನ ನೋಡಿದಳು. ತಾನಿಷ್ಟು ಹೇಳಿದಮೇಲೂ ಬಾಬಣ್ಣ ಮಾಸ್ತರರಲ್ಲಿಯೇ ಊಟಕ್ಕೆ ಹೋಗುತ್ತಿದ್ದಾನೆ. ಅವರೂ ಒಂದು ಎತ್ತನ್ನು ಗಿರಾಕಿಗೆ ಇಟ್ಟಿದ್ದಾರೆ. ಅಂದಮೇಲೆ ಇಂದಿಲ್ಲ ನಾಳೆ ಈತ ಅವರ ಎತ್ತಿನ ಜೊತೆಗೇನೇ ತನ್ನ ಎತ್ತು ಒಯ್ಯುತಕ್ಕವ ಎಂದು ಭಾವಿಸಿದಳು. ಒಮ್ಮೆ ಬಾಬಣ್ಣ ಮನೆಗೆ ಬಂದಾಗ ಮೆಲ್ಲನೆ ಮಾತು ತೆಗೆದಳು,—

" ಸುಗ್ಗಿ ಆಯಿತು ಎಲ್ಲ ಆಯಿತು. ಇನ್ನು ಎತ್ತಿನ ರೂಪಾಯಿ ಅಷ್ಟು ಕೊಟ್ಟು ಬಿಡು."

ಬಾಬಣ್ಣನಿಗೆ ಒಮ್ಮೆಲೇ ಸಿಡಿಲು ಬಡಿದಂತಾಯಿತು. ಈ ಬೇಡಿಕೆ ಈಗ ಬಂದೀತೆಂದು ಅವನಿಗೆ ಅನಿಸಿರಲಿಲ್ಲ.

" ಈ ಸಾರ ಎಲ್ಲಿಂದ ತರಲೇ ಗಂಗವ್ವತ್ತಿ, ನೀನೇ ನೋಡಿದಿಯಲ್ಲ, ಸುಗ್ಗಿ ಹೇಗಾಯ್ತಂಬೋದು? "

" ಸುಗ್ಗಿ ನೆಟ್ಟಗೆ ಆಗಿದ್ದರೆ ನಾನೂ ಕೇಳತಿರಲಿಲ್ಲ ಬಾಬಣ್ಣಾ. ನಮಗೂ ಕಾಳಕಡಿ ಅಂತ ದುಡ್ಡಿನ ಕೊರತೆ ಅದೆ."

" ನಿನಗೇನ ಕಡಿಮೆ ಬಿಡು." ಬಾಬಣ್ಣ ನಡುವೆಯೇ ಅಂದ.

" ಆನೆಯ ಭಾರ ಆನೆಗೆ ಇರತದ ಬಾಬು! "

ಗಂಗವ್ವನ ಈ ಮಾತುಗಳಿಗೆಲ್ಲ ಕಾರಣವೇನೆಂಬುದು ಬಾಬಣ್ಣನಿಗೆ ಗೊತ್ತು. ತಾನು ಇಲ್ಲಿ ಉಣ್ಣುತ್ತಿದ್ದರೆ ಈ ಪ್ರಶ್ನೆಯೇ ಏಳುತ್ತಿರಲಿಲ್ಲ ವೆಂಬುದನ್ನು ಅವನು ಬಲ್ಲ. ಒಬ್ಬನ ಊಟಕ್ಕೆಂದು ಕೊಟ್ಟ ಧಾನ್ಯದಲ್ಲಿ ಇಬ್ಬರ ಊಟ ಸಹಜ ಆಗುವದು. ಆ ಲಾಭ ಚಂದ್ರವ್ವನಿಗೆ ಹೋಗುತ್ತಿದೆ;

ತನಗೆ ಇಲ್ಲ. ಅದಕ್ಕಾಗಿಯೇ ಇದೆಲ್ಲ ಗಂಗವ್ವನ ಆಟವೆಂದು ತರ್ಕಿಸಿದ. ಇದು ನಿಜವೂ ಇತ್ತು.

ಮರುದಿನ ಮಾಸ್ತರರ ಮನೆಗೆ ಊಟಕ್ಕೆ ಹೋಗುವದನ್ನು ತಪ್ಪಿಸಿದ. ಮನೆಯಲ್ಲಿಯೇ ಕೈಯಿಂದ ಮಾಡಿಕೊಂಡು ತಿಂದ ಇತ್ತಿತ್ತಲಾಗಿ ಅಡಿಗೆ ಮಾಡಿಕೊಂಡು ರೂಢಿ ಇಲ್ಲದುದರಿಂದ ಸ್ವಲ್ಪ ಕಷ್ಟವೂ ಆಯಿತು ಸಾಯಂಕಾಲ ಮನಸ್ಸಿಲ್ಲದೆ ಮಾಸ್ತರರ ಮನೆಗೆ ಹೋದ

"ಮುಂಜಾನೆ ಊಟಕ್ಕೆ ಬರಲಿಲ್ಲ ಬಾಬು? ಮಾಸ್ತರ ಹಾದಿ ನೋಡಿ ನೋಡಿ ಉಂಡರು. ಇನ್ನು ಅವರು ಬರಲಿಕ್ಕೆಂದರೆ ವೇಳೆ ಆಗ್ತದ ನೀನು ಯಾವಾಗ್ಗ ಉಂಡಿರುವಿಯೋ ಏನೋ. ಊಟಕ್ಕೆ ಏಳು."

ಎಂದು ಚಂದ್ರವ್ವ ಅಕ್ಕರತೆಯಿಂದ ಊಟಕ್ಕೆ ಎಬ್ಬಿಸಿದಳು. ಬಾಬಣ್ಣ ಊಟಮಾಡಿದ. ಉಣ್ಣುತ್ತಿರುವಾಗಲೇ ಮನೆಯಲ್ಲಿ ಮುಂಜಾನೆ ಅಡಿಗೆ ಮಾಡಿಕೊಂಡ ವಿಷಯವನ್ನೂ ಹೇಳಿದ. ಮಾತಿನ ಧ್ವನಿಯಲ್ಲಿ ನಾನಿನ್ನು ಮನೆಯಲ್ಲಿಯೇ ಅಡಿಗೆ ಮಾಡಿಕೊಂಡು ತಿನ್ನುವೆ ಎನ್ನುವ ಭಾವವಿದ್ದಿತು. ಅದನ್ನರಿತು ಚಂದ್ರವ್ವನೂ ಹೆಚ್ಚಿಗೆ ಆಗ್ರಹ ಮಾಡಲಿಲ್ಲ. ಅವನಿಗೆ ಸಂಕೋಚವೆನಿಸುತ್ತಿದ್ದರೆ ಹಾಗೇ ಮಾಡಿಕೊಳ್ಳಲಿ ಎಂದುಕೊಂಡು ಸುಮ್ಮನಾದಳು.

ಮುಂದೆ ಬಾಬಣ್ಣ ದಿವಸಕ್ಕೊಮ್ಮೆ ಎರಡು ದಿವಸಕ್ಕೊಮ್ಮೆ ಚಂದ್ರವ್ವನ ಮನೆಗೆ ಊಟಕ್ಕೆ ಹೋಗತೊಡಗಿದ ಒಮ್ಮೊಮ್ಮೆ ಹಾಗೇ ಹೋಗಿ ಕುಳಿತು ಮಾಸ್ತರರ ಕೂಡ ಮಾತನಾಡಿ ಬರಹತ್ತಿದ. ಇದರಿಂದ ಬಾಬಣ್ಣ ಯಾವಾಗ್ಗೆ ಊಟಕ್ಕೆ ಬಂದಿರುವ, ಯಾವಾಗ್ಗೆ ಕೇವಲ ಮಾತಿಗೆ ಬಂದಿರುವ ಎಂಬುದು ಚಂದ್ರವ್ವನಿಗೆ ತಿಳಿಯುತ್ತಿರಲಿಲ್ಲ ಅದರಿಂದ ಬಾಬಣ್ಣ ಊಟಕ್ಕೆಂದು ಹೋದಾಗ ಚಂದ್ರವ್ವ ಊಟಕ್ಕೆ ಕರೆಯುತ್ತಿರಲಿಲ್ಲ. ಈತ ಊಟ ಮಾಡಿ ಹೋದಾಗ ಊಟಕ್ಕೆ ಎಬ್ಬಿಸುವ ಕ್ರಮವೂ ಉಂಟಾಯಿತು. ಹೀಗಾಗಬಹುದೆಂದು ಬಲ್ಲ ಚಂದ್ರವ್ವನು ಒಮ್ಮೆ ಹೇಳಿಯೇ ಬಿಟ್ಟಳು,—

"ಬಾಬು, ನೀ ಯಾವಾಗ್ಗೆ ಉಂಡಿರುವಿ, ಯಾವಾಗ್ಗೆ ಇಲ್ಲ ಅಂಬುವುದು ನಮಗೆ ತಿಳಿಯಲಿಕ್ಕಿಲ್ಲ. ನೀನೇ ಹಸಿದಾಗ ಉಣ್ಣತೇನೆ ಅಂತ ಅಂದು ಉಂಡು ಹೋಗಬೇಕು."

"ಹಾಗೇನಿಲ್ಲ, ಹಾಗೇನಿಲ್ಲ" ಎಂದು ಒಣನಗೆ ನಕ್ಕು ಬಾಬಣ್ಣ ನುಡಿದ

ಬಾಬಣ್ಣನ ಉದ್ದೇಶ ತನ್ನ ಮನೆಯಲ್ಲಿ ಅಡಿಗೆ ಮಾಡಿಕೊಂಡು ಊಟ ಮಾಡುವದಿರಲಿಲ್ಲ. ಚಂದ್ರವ್ವನ ಮನೆಯನ್ನು ಬಿಟ್ಟು ಒಮ್ಮೆಲೇ ಗಂಗವ್ವನ ಮನೆಗೆ ಹೇಗೆ ಹೋಗುವದೆಂದು ಈ ಆಟ ಹೂಡಿದ್ದನು. ಮನೆಯಲ್ಲಿ ಅಡಿಗೆ ಮಾಡಿಕೊಂಡು ಉಂಡರೂ ಕೂಡ ಗಂಗವ್ವನ ಮನೆಗೆ ಹರಟೆಗೆ ಹೋಗದೆ ಇರುತ್ತಿರಲಿಲ್ಲ. ಅಲ್ಲಿ ಹೋದಾಗಲೆಲ್ಲ ಏನಾದರೂ ಸವಿ ಪದಾರ್ಥ ತಿನ್ನಲು ಸಿಕ್ಕುವದು ಆದರೂ ಎತ್ತಿನ ರೂಪಾಯಿ ಬೇಡುವ ಕ್ರಮವೇನೂ ನಿಲ್ಲಲಿಲ್ಲ. ಮತ್ತಿಷ್ಟು ಹೆಚ್ಚೇ ಆಯಿತು.

ಬಾಬಣ್ಣ ಈಗ ತನ್ನ ಮನೆಯಲ್ಲಿ ಉಣ್ಣುವನೆಂಬುದು ಗಂಗವ್ವನಿಗೆ ಗೊತ್ತಾಯಿತು. ಅದು ತನ್ನ ಮಾತಿನ ಪರಿಣಾಮವೆಂದೂ ಅರಿತಿದ್ದಳು. ಅದಕ್ಕಾಗಿಯೇ ಈಗ ಅವನ ಬಾಯಿಗೆ ಸವಿ ಹಚ್ಚಿ ಬಲೆಯಲ್ಲಿ ಕೆಡವಿಕೊಳ್ಳಬೇಕೆಂದು ಯೋಚಿಸಿದಳು. ಇದೇ ಸಮಯದಲ್ಲಿ ಅವನನ್ನು ಇನ್ನಷ್ಟು ಮೆತ್ತಗೆ ಮಾಡುವದೆಂದೂ ನಿಶ್ಚಯಿಸಿದಳು. ಅದರಂತೆ ಹಣದ ಬೇಡಿಕೆಗಾಗಿ ಕಠೋರ ಮಾತುಗಳನ್ನು ಆಡಲಾರಂಭಿಸಿದಳು ತಾತಪ್ಪ ಎಲ್ಲವನ್ನೂ ನೋಡುತ್ತ ಸುಮ್ಮನೇ ಇರುವನು.

ಗಂಗವ್ವನ ನಡತೆಯ ಗುಟ್ಟು ಬಾಬಣ್ಣನಿಗೆ ತಿಳಿಯದಾಯಿತು. ಹೋದಾಗ ಆದರದಿಂದ ತಿನ್ನಲು ಕೊಡುವಳು. ಅಕ್ಕರೆಯಿಂದ ಕರೆಯುವಳು. ಆದರೆ ಹಣದ ಮಾತು ಬಂದಾಗ ಇಷ್ಟೇಕೆ ನಿಷ್ಠುರಳಾಗುವಳೋ ಎಂಬುದು ಅವನಿಗೆ ಹೊಳೆಯದೆ ಹೋಯಿತು. ಮೆಲ್ಲನೆ ಅವಳ ಮನೆಗೆ ಊಟಕ್ಕೆ ಹೋಗಲು ಆರಂಭಮಾಡಿ ನೋಡಿದ. ಅದರ ಪ್ರತಿಫಲವೆಂದು ಒಂದು ಚೀಲ ಜೋಳವನ್ನು ಒಮ್ಮೆಲೇ ಕೊಟ್ಟುಬಿಟ್ಟ. ಆಂದರೂ ಗಂಗವ್ವನ ವರ್ತನೆಯಲ್ಲಿ ವ್ಯತ್ಯಾಸವಾಗಲಿಲ್ಲ. ಮೇಲಾಗಿ ಅವನ ಮಾವ ತಾತಪ್ಪನೂ ಒಂದೆರಡು ಸಲ ಅಂದ,—

"ಆಕೆಯದು ಏನ ಕೊಡೋದು ಕೊಡಬೇಕಿಲ್ಲೋ ಬಾಬು"

"ಹೂಂ! ಕೊಡತೇನಿ!"

ನಿರುಪಾಯನಾಗಿ ಬಾಬಣ್ಣ ಹೇಳಬೇಕಾಯಿತು. ಅದಕ್ಕಾಗಿ ಆತ ಯೋಚನೆಯನ್ನು ಮಾಡತೊಡಗಿದ. ಈಗ ಗಂಗವ್ವನಿಗೆ ನೂರೈವತ್ತು ರೂಪಾಯಿಗಳನ್ನು ಕೊಡಬೇಕು. ಬಡ್ಡಿಯನ್ನು ಕೇಳಿದರೆ ಮತ್ತೆ ಇಪ್ಪತ್ತೈದು ರೂಪಾಯಿಗಳಷ್ಟಾದರೂ ಹೆಚ್ಚಿಗೆ ಆದೀತು. ಈಗ ಎತ್ತನ್ನು ಮಾರಲಿಕ್ಕೆ ಹೋದರೆ ನೂರು ರೂಪಾಯಿಗಳಿಗೂ ಯಾರೂ ಕೊಳ್ಳುವದಿಲ್ಲ. ಸುಗ್ಗಿ ಒಳ್ಳೆಯದಾಗಿದ್ದರೆ ಕೊಂಡ ಬೆಲೆಗೆ ಎತ್ತು ಮಾರಾಟವಾಗಬಹುದಿತ್ತು. ಈಗ ಮನೆಯೊಳಗಿನ ಎತ್ತನ್ನು ಮಾರಿದರೆ ಅಡವಿಯ ಕೆಲಸಕ್ಕೆ ಏನು ಮಾಡುವುದು? ಒಂದು ವೇಳೆ ಮಾರಿದರೆ ಪೂರ್ಣ ಸಾಲವೂ ಕಳೆಯುವಂತಿಲ್ಲ. ಅಲ್ಲದೆ ಸುಗ್ಗಿಯವರೆಗೆ ಬಿತ್ತುವ ಬೀಜ, ಮನೆಯ ವೆಚ್ಚ ಅಂತ ಐವತ್ತರವತ್ತು ರೂಪಾಯಿಗಳಾದರೂ ಕೈಯಲ್ಲಿ ಮೇಲೆ ಬೇಕು. ಈ ಎಲ್ಲ ಸಮಸ್ಯೆಗಳನ್ನು ಬಗೆಹರಿಸುವ ಬಗೆಯೆಂತು? ವಿಚಾರಿಸಿ ವಿಚಾರಿಸಿ ಕೊನೆಗೆ ಯಾವ ದಾರಿಯೂ ಕಾಣದೆ ಕಲ್ಲಪ್ಪ ಕಕ್ಕನ ಮನೆಗೆ ಹೋಗುವದೆಂದು ನಿರ್ಣಯಿಸಿದ.

ಸಂಜೆಯ ಹೊತ್ತು ಕಲ್ಲಪ್ಪ ಇದೀಗ ಊಟಮಾಡಿ ಕಟ್ಟೆಯ ಮೇಲೆ ತಂಬಾಕು ಸೇದುತ್ತ ಕುಳಿತಿದ್ದ. ಹತ್ತರ ಯಾರೂ ಇಲ್ಲದ್ದನ್ನು ನೋಡಿ ಬಾಬಣ್ಣ ಮೆಲ್ಲನೆ ಅತ್ತ ಹೋದ. ಬಾಬಣ್ಣ ಸಮೀಪಕ್ಕೆ ಬಂದುದನ್ನು ಕಂಡೂ ಕಾಣದವರಂತೆ ಕಲ್ಲಪ್ಪ ಸುಮ್ಮನೆ ಇದ್ದ, ಸಾವುಕಾರರ ರೀತಿಯಲ್ಲಿ.

"ಯಾಕ ಕಾಕಾ ಊಟ ಆಯ್ತೇನು?" ಬಾಬಣ್ಣನೇ ಮಾತನಾಡಿಸಿದ.

"ಹೂಂ! ಆಯ್ತು." ಕಲ್ಲಪ್ಪ ಕಮ್ಮಿಮಿತ್ತ ನುಡಿದು ಸುಮ್ಮನಾದ.

ಬಾಬಣ್ಣ ಕಟ್ಟೆಯ ಮೇಲಿನ ಮಣ್ಣನ್ನು ಊದಿ, ಅಂಗಿಯನ್ನು ಮುದ್ದಿ ಮಾಡಿಕೊಂಡು ಮೆಲ್ಲನೆ ಕುಳಿತ. ಬಾಬಣ್ಣ ಯಾತಕ್ಕೆ ಬಂದಿರಬೇಕೆಂಬುದನ್ನು ಕಲ್ಲಪ್ಪ ಊಹಿಸಿದ. ಹಾಗೆಯೇ ತಂಬಾಕು ಸೇದಿ ಹೊಗೆ ಬಿಡುತ್ತ ಕುಳಿತ. ಹೊಗೆ ತೆರೆತೆರೆಯಾಗಿ ಅವನ ಮುಂದೆ ಸುಳಿದಾಡಹತ್ತಿತು. ಸ್ವಲ್ಪ ಹೊತ್ತು ಹೋಯಿತು. ಬಾಬಣ್ಣ ಹೇಗೆ ಮಾತಿಗೆ ಆರಂಭಿಸಬೇಕೆಂಬುದನ್ನು ಯೋಚಿಸತೊಡಗಿದ.

"ಇತ್ತ ಯಾವ ಕಡೆಗೆ ಹೊರಟಿರುವಿ?"

ತನ್ನ ಕಡೆಗೇ ಬಂದಿರುವನೆಂದು ಗೊತ್ತಿದ್ದೂ ಕಲ್ಲಪ್ಪ ಕೇಳಿದ.

"ಎಲ್ಲಿ ಇಲ್ಲ. ಇಲ್ಲೇ ಬಂದಿದ್ದೆ." ತುಸು ತಡೆದು ಉಗುಳು ನುಂಗಿ ನುಡಿದ ಬಾಬಣ್ಣ, "ನಿನ್ನ ಕಡೆಗೇ ಸ್ವಲ್ಪ ಕೆಲಸ ಇತ್ತು."

"ನನ್ನ ಕಡೆಗೆ ಕೆಲಸ ಇತ್ತು!" ಬೆರಗಿನ ಉದ್ಗಾರ ತೆಗೆದ ಕಲ್ಲಪ್ಪ.

"ಹೌದ; ನಿನ್ನ ಹತ್ತಿರ...." ಬಾಬಣ್ಣನ ಬಾಯಿಂದ ಮುಂದೆ ಮಾತು ಬರಲಿಲ್ಲ.

ಕಲ್ಲಪ್ಪನಿಗೆ ಬಾಬಣ್ಣನ ಭಾವ ಹೊಳೆಯಿತು. ಆದರೂ ಏನೂ ಮಾತನಾಡದೆ ಸುಮ್ಮನೇ ತಂಬಾಕದ ಝುರಿಕೆ ಎಳೆಯುತ್ತ ಕುಳಿತನು. ಕಲ್ಲಪ್ಪ ಮುಂದೆ ಹೇಳಲಿ ಎಂದು ತುಸು ಹೊತ್ತು ದಾರೀಕಾಯ್ದ ಬಾಬಣ್ಣ. ಆತ ಮಾತನಾಡದಿರಲು ಇವನೇ ಆರಂಭಿಸಿದ,—

"ಸ್ವಲ್ಪ ರೂಪಾಯಿ ಬೇಕಾಗಿದ್ದುವು."

"ಮುಂದ ರೂಪಾಯಿ ಕೇಳಲಿಕ್ಕೆ ಬಂದಿರುವಿ. ಒಂದ ವರ್ಷ ಆಯ್ತು, ಅದರ ಬಡ್ಡೀ ತೀರಿಸಿದೇನು?"

"ಸುಗ್ಗಿ ಹೇಗಾಯ್ತು, ನೀನೇ ನೋಡತಿದಿಯಲ್ಲ."

"ಆಯ್ತಪ್ಪ, ನಿನ್ನ ಸುಗ್ಗಿ ಆಯ್ತು, ಸುಕಾಲ ಆಯ್ತು. ಮನೆಯೊಳಗ ತಿನ್ನಲಿಕ್ಕೆ ಉಣ್ಣಲಿಕ್ಕೆ ಏನ ಕಡಿಮಿ ಮಾಡಿದೀರಿ? ಆಗ ಬಡ್ಡಿ ತೀರಿಸಲಿಕ್ಕೆ ಆಗಲಿಲ್ಲಂತ ಅದನ್ನು ಹಾಕೇ ಕಾಗದ ಮಾಡಿತು. ಈಗ ಆದರೂ ಕೊಟ್ಟೇ, ನಮ್ಮ ಅಡಚಣಿಗೆ ಉಪಯೋಗ ಬಿದ್ದೀತು ಅಂದರ ಮತ್ತ ರೂಪಾಯಿ ಯನ್ನೇ ಕೇಳಲಿಕ್ಕೆ ಬಂದಿರುವಿ. ಏನ ಹೇಳಲಿಯಪ್ಪ ನಾ ನಿನಗ?"

ಕಲ್ಲಪ್ಪನ ಬಿಗುಹಿನ ಮಾತು, ಮಾತಿಗಿರುವ ತಾತ್ಸಾರ ಭಾವಗಳನ್ನೆಲ್ಲ ಕಂಡು ಬಾಬಣ್ಣ ಸುಮ್ಮನೆ ಅಲ್ಲಿಂದ ಎದ್ದು ಹೋಗಬೇಕೆಂದ. ಅವನ ಅಭಿ ಮಾನ ಜಾಗೃತವಾಯಿತು. ಹೀಗೆ ಮಾತನಾಡಿಸಿಕೊಂಡು ಇವನಲ್ಲಿಯೇ ರೂಪಾಯಿ ಒಯ್ಯಲಿಕ್ಕೇನು? ನಮಗೇನು ಬಡ್ಡಿ ಇಲ್ಲದೆ ಕೊಡುವನೆ? ಬೇರೆ ಯೊರಲ್ಲಿಯಾದರೂ ತಂದರಾಯಿತು ಎಂದುಕೊಂಡ. ಆದರೆ ಮರುಕ್ಷಣ ದಲ್ಲಿ ವಿಚಾರ ಬಂತು—ಈಗ ಹೊಲ ಬರೆದು ಕೊಡದೆ ನನಗೆ ಇನ್ನೂರು ರೂಪಾಯಿಗಳನ್ನು ಯಾರು ಕೊಡುವರು? ಆ ಇನ್ನೊಂದು ಹೊಲವನ್ನೂ ತೋರವತ್ತಿಗೆ ಹಾಕುವದು ಒಳಿತಲ್ಲ. ಇದ್ದ ಎರಡೂ ಹೊಲಗಳನ್ನು

ಸಿಕ್ಕಿಸಿ ಇಡುವದು ಉಪಯೋಗದ್ದಲ್ಲ. ಇವನನ್ನೇ ಇನ್ನೊಂದು ಮಾತನ್ನು ಸ್ಪಷ್ಟವಾಗಿ ಕೇಳಿಬಿಡಬೇಕೆಂದು ಯೋಚಿಸಿ ನುಡಿದ,—

"ಏನಿಲ್ಲ. ಹನ್ನೆರಡ ಜನರ ಕಡೆಗ್ಹೋಕೇಳತ ಹೋಗುವಂತಿಲ್ಲ ಏನಿಲ್ಲ. ನೀನೇ ಇನ್ನೆರಡ ನೂರು ರೂಪಾಯಿ ಕೊಡು. ಒತ್ತಟ್ಟಿಗೇ ಆಗ್ತದ. ಮುಂದಿನ ಸುಗ್ಗಿ ಆದ ನಂತರ ಎಲ್ಲಾ ಒಮ್ಮೆ ತೀರಸತೇನಂತ."

ಇಷ್ಟು ಕೇಳಬೇಕಾದರೆ ಬಾಬಣ್ಣನಿಗೆ ಪೂರ್ವಜನ್ಮಗಳೆಲ್ಲ ನೆನಪಾಗಿ ಹೋದುವು. ಬೆವರಿನಿಂದ ಶರಟು ತೊಯ್ದಿತು. ಆದರೆ ಕಲ್ಲಪ್ಪ ತಟ್ಟನೆ ನುಡಿದ,—

"ಅವೇ ರೂಪಾಯಿ ಆ ಹೊಲದ ನೆತ್ತಿಮೇಲೆ ಗೇಣ ನೀರ ಆಡುವಂತೆ ಆಗೇದ. ಏನ ತುಸು ಕಡಿಮೆ ಮೂರ ಎಕರೆ ಹೊಲಾ. ಅದರಮೇಲೆ ಏಳ ನೂರಾ ಐವತ್ತ ರೂಪಾಯಿ ಗಂಟ. ಖರೀದಿ ಕೊಟ್ಟರೂ ಇಷ್ಟು ರೂಪಾಯಿ ಬರುವದಿಲ್ಲ. ಬಡ್ಡಿಯ ವಿಚಾರವಂತೂ ದೂರವೇ ಉಳಿಯಿತು ಮತ್ತ ಎರಡ ನೂರ ರೂಪಾಯಿ ಕೇಳಲಿಕ್ಕೆ ಹತ್ತಿದಿ. ಹುಚ್ಚಗಿಚ್ಚ ಹಿಡದಿಲ್ಲಲ್ಲ ನಿನಗ?"

ಕಲ್ಲಪ್ಪ ಹೀಯಾಳಿಸಿ ನುಡಿದ. ಬಾಬಣ್ಣ ಸುಮ್ಮನೆ ಅಲ್ಲಿಂದ ಎದ್ದು ಬಂದ. ಕಕ್ಕನ ಭಾವ ಹೊಳೆಯಿತು. ಹೊಲದ ಖರೀದಿ ಕೇಳುವ. ಕೇಳುವಷ್ಟು ಸಾಲ ಆಗಿದೆ ಎನ್ನುವ. ಮಾವ ಹೇಳಿದಂತೆಯೇ ಪ್ರಶ್ನೆ ಬಂತು. ಬರಲಿ. ಇವನಿಗೆ ಎಂದೂ ಹೊಲ ಕೊಡಲಿಕ್ಕಿಲ್ಲ. ಹೊರಗೆ ಹೊಲೆಯರಿಗೆ ಕೊಟ್ಟರೂ ಅಡ್ಡಿಯಿಲ್ಲ.

ಹೊಲ ಮಾರುವುದು ?

ಮದುವೆಯ ಸಾಲದಲ್ಲಿ ಹೊಲ ಕಳೆದನೆನ್ನಿಸಿಕೊಳ್ಳುವುದು !

ತಂದೆಯಂತೆಯೇ ನಾನೂ ಮದುವೆಗೆ ಹೊಲ ಹಾಕಲಿ ?

ಎಂದೂ ಹಾಕಲಾರೆ. ಬೇಕಾದದ್ದನ್ನು ಮಾಡಿ ಸಾಲವನ್ನೇ ಕಳೆಯುವೆ.

ಏನು ಮಾಡುವುದು ?

ಎಕ್ಸಂಬಿಯ ಆಪ್ತರ ಹತ್ತರ ಹಣ ಕೇಳಲೇ ?

"ಬಡತನ ಬಂದಾಗ ನೆಂಟರ ಬಾಗಿಲಿಗೆ ಹೋಗಬಾರದು."

ಸೋದರ ಮಾವನನ್ನು ಏಕೆ ವಿಚಾರಿಸಬಾರದು ?

ಯಾತರ ಸೋದರ ಮಾವನೀತ?

ಇನ್ನೊ ಒಂದು ವೇಳೆ ಗಂಗವ್ವನೇ ಒಳ್ಳೆಯವಳು.

ರಾತ್ರಿ ಊಟಕ್ಕೆ ಹೋದಾಗ ಗಂಗವ್ವನ ಮುಂದೆಯೇ ಮಾತು ತೆಗೆದ,

"ಕಲ್ಲಪ್ಪಕಕ್ಕ ಹೊಲವನ್ನೇ ಖರೀದಿ ಬೇಡ್ತಿದ್ದಾನೆ...."

ಈ ಸಂಗತಿ ಗಂಗವ್ವನಿಗೆ ಬೇಕಾದ ಸಂಗತಿಯಾದರೂ ಬೆರಗಿನಿಂದ ಕೇಳಿದಳು,—

"ಹೊಲ ಕೊಡುವಿ?"

"ನೀವೂ ರೂಪಾಯಿಗೆ ತಗಾದಿ ಕೊಟ್ಟಿರುವಿರಿ" ಬಾಬಣ್ಣ ಹೇಳಿದ. ಗಂಗವ್ವನಿಗೆ ದಯೆ ಬಂದು ಹಣ ಈಗ ಕೇಳಲಿಕ್ಕಿಲ್ಲವೆಂದು ಬಗೆದ. ಆದರೂ ಗಂಗವ್ವ ಕೇಳಿದಳು,—

"ಆ ಕಾಗದ ಹರಿದಕೊಟ್ಟ ಮೇಲೆ ಎಷ್ಟು ಕೊಡತೀನ ಅಂತಾನು?"

"ಅದನ್ನೇನ ವಿಚಾರಿಸಿಲ್ಲ ನಾ...."

"ಮೇಲೆ ಎತ್ತಿನ ರೂಪಾಯಿ ಕಳಿಯುವಷ್ಟಾದರೂ ಕೊಟ್ಟಾನಲ್ಲ?"

ತನಗೆ ಹೊಲ ಕೊಟ್ಟರೆ ತಾನು ಕೊಡಬಹುದಾದ ಬೆಲೆಯನ್ನು ಸೂಚಿಸಿದಂತೆ ಮಾಡಿದಳು.

"ಈ ಕಾಗದ ಎಷ್ಟರದದ ಬಾಬು ಮಾಮಾ?"

ನಡುವೆಯೆ ಸುಂದರಾ ಕೇಳಿದಳು. ಅವಳ ಕಡೆಗೆ ನೋಡಿ ಬಾಬಣ್ಣ ಹೇಳಿದ,—

"ಏಳನೂರಾ ಐವತ್ತು."

"ಆಯ್ತು. ಅದರ ಬಡ್ಡಿ, ಈ ಎತ್ತಿನ ರೂಪಾಯಿ, ಇದರ ಬಡ್ಡಿ ಅಂದರ ಸಾವಿರಕ್ಕ ಬಂದಂಗ ಆಯ್ತು. ಯಾರ ಕೊಟ್ಟರೂ ಇಷ್ಟೇ ಕೊಡವರಲ್ಲ?"

ಮಗಳಿಗೆ ಗಂಗವ್ವ ಹೇಳಿದಳು. ಅವಳ ಮಾತನ್ನು ನಡುವೆಯೇ ತಡೆದು,

"ಈಗ ಯಾತಕ್ಕ ಕೊಡಲಿ ಹೊಲಾ?" ಬಾಬಣ್ಣ ಕೇಳಿದ.

"ನಿನ್ನ ಅಂಥವ ಈಗಲೇ ಕೊಟ್ಟರ ಒಳ್ಳೇದು. ಮತ್ತ ನಾಲ್ಕ ವರ್ಷ ಕಣ್ಣುಮುಚ್ಚಿ ಕುಳತಿ ಅಂದರ ಆ ಹೊಲಕ್ಕೂ ಧಾಡಿ ಬರತದ. ಬಡ್ಡೀನು ಹೊಳಿ ಏರಿದಂತೆ ಏರತದ. ಕಲ್ಲಿಗೆ ಹತ್ತಿ ಬೆಲ್ಲೂ ಹೋಯ್ತುಂತ ಆದೀತು."

ಎಂದು ಉಪದೇಶಿಸಿದಳು. ಬಾಬಣ್ಣನ ನಿಶ್ಚಯ ಕದಲಿತು. ಗಂಗವ್ವನ ಮಾತೂ ನಿಜವೆಂದೆನಿಸಿತು. ಮತ್ತೆ ಆ ಮೂರು ಕೂರಿಗೆಯ ಹೊಲವನ್ನು ಕೊಡುವ ಪ್ರಸಂಗ ಬಂದರೆ? ವಿಚಾರ ಅವನ ಎದೆಯನ್ನು ನಡುಗಿಸಿತು. ಎರಡು ದಿವಸ ಒಂದೇಸವನೆ ಚಿಂತಿಸಿದ. ಚಂದ್ರವ್ವನನ್ನೂ ಕೇಳಿ ಬಂದ. ಅವಳು ಹೊಲ ಕೊಡುವ ಮುಂಚೆ ಎಕ್ಸಂಬಿಗೆ ಒಮ್ಮೆ ಹೋಗಿಬಾಯೆಂದು ಹೇಳಿದಳು. ಆ ಮಾತನ್ನು ಸೋದರ ಮಾವನ ಮುಂದೆ ಇಟ್ಟ. "ಮದುವೆಯಾಗಿ ಎರಡ ವರ್ಷ ಆಗಿಲ್ಲ. ಹೊಲ ಕೊಡತೇನಂತ ಅಲ್ಲೇನ ಹೇಳಲಿಕ್ಕೆ ಹೋಗೋದು? ನಿನ್ನ ಹಣೆಬರಹಕ್ಕೇನು ಅವರ ಕೈ ಹಚ್ಚಿಯಾರೇನು?" ಎಂದು ಅಲ್ಲಗಳೆದ. ಬಾಬಣ್ಣನ ಮನೋವೃತ್ತಿಗೆ ತಾತಪ್ಪನ ವಿಚಾರವೇ ಸರಿ ಕಂಡಿತು. ಕೊನೆಗೆ ಹೊಲವನ್ನೇ ಮಾರಾಟಕ್ಕೆ ತೆಗೆದ.

ಗಂಗವ್ವ ಕಲ್ಲಪ್ಪನ ಸಾಲ ಕಳೆದು ತನ್ನ ರೂಪಾಯಿಗಳನ್ನು ಮುರಿದುಕೊಂಡು ಮೇಲೆ ಐವತ್ತು ರೂಪಾಯಿ ಕೊಡುವೆನೆಂದು ಹೇಳಿದಳು. ಅದಕ್ಕೆ ಆತ ಸಹಜ ಒಪ್ಪಲೆಂದು ಸುಂದರಿಯ ಸಲಿಗೆಯ ಒಲೆ, ನವಿಯಾದ ತಿನಸುಗಳ ಮಾಟ ಹೂಡಿದಳು. ನವತಾರುಣ್ಯದಲ್ಲಿ ಪತಿಯಿಂದ ದೂರವಿದ್ದ ಸುಂದರಿಗೂ ಇದೇ ಬೇಕಾಗಿದ್ದಿತು. ತಾಯಿಗೆ ಹೊಲ ಸಿಗಲಿ ಸಿಗದಿರಲಿ, ಬಾಬಣ್ಣನ ಸಹವಾಸ ತನಗೆ ಸಿಕ್ಕರೆ ಸಾಕೆಂದು ಅವಳು ಇನ್ನೂ ಮುಂದರಿದಳು.

ಬಾಬಣ್ಣನು ಹೊಲ ಕೊಡುವ ಸಂಗತಿ ಕಲ್ಲಪ್ಪನಿಗೆ ತಿಳಿಯಿತು. ಆತ ಎಲ್ಲ ಸಾಲವನ್ನೂ ಕಳೆದು ಮೇಲೆ ನೂರು ರೂಪಾಯಿ ಕೊಡುವೆನೆಂದು ಹೇಳಿ ಕಳಿಸಿದ. ಈ ಸುದ್ದಿ ತಾತಪ್ಪನಿಗೆ ತಿಳಿಯಲು ಅವನಂದ,—

"ನಿನ್ನ ಮದುವೆಯೊಳಗ ಎರಡು ನೂರು ರೂಪಾಯಿ ಎತ್ತಿ ಹಾಕಿದಾನ. ಈಗ ಐವತ್ತ ರೂಪಾಯಿ ಹೆಚ್ಚಿಗೆ ಕೊಡದೆ ಏನು ಮಾಡುವನು?"

ಕಲ್ಲಪ್ಪನ ಕಡೆಯಿಂದ ಈಗಲೇ ನೂರಿನ್ನೂರು ರೂಪಾಯಿ ಹೆಚ್ಚಿಗೆ ಸೆಳೆಯಲಿಕ್ಕೆ ತಕ್ಕ ಸಮಯವೆಂದು ಬಾಬಣ್ಣ ಯೋಚಿಸಿದ. ಅವನಿಗೆ ಹೊಲ ಕೊಡಲಿಕ್ಕಿಲ್ಲೆಂಬ ನಿಶ್ಚಯ ಚಲಿಸಿತು. ಯಾರು ದುಡ್ಡು ಹೆಚ್ಚು ಕೊಡುವರೋ ಅವರಿಗೇ ಕೊಡುವದೆಂದು ನಿರ್ಣಯಿಸಿದ.

ಗಂಗವ್ವ ಕಲ್ಲಪ್ಪನೊಡನೆ ಏರಾಟಕ್ಕೆ ನಿಲ್ಲುವುದು ಸಾಧ್ಯವಿರಲಿಲ್ಲ. ಅವಳು ಸಲಿಗೆಯಿಂದ ಬಾಬಣ್ಣನನ್ನು ಮೆಚ್ಚಿಸಿ ಹೊಲ ಕೊಳ್ಳತಕ್ಕವಳು.

ಕಲ್ಲಪ್ಪ ಮೂಲ ಮನೆಯ ಗಂಟು ಕೊಟ್ಟಿದ್ದು ಐನೂರೇ ರೂಪಾಯಿ. ಅವೂ ಗೋದಿ ಬೆಲ್ಲ ಅಂತ ಮದುವೆಗೆ ಸಾಮಾನುಕೊಟ್ಟು ಏರಿಸಿದ್ದು, ಲೆಕ್ಕ ಮಾಡಿದ್ದು. ಆದರಿಂದ ಅವನು ಇನ್ನೂರು ಮುನ್ನೂರರ ವರೆಗೂ ಏರಿಸಿ ತಕ್ಕೊಳ್ಳಲು ಸಿದ್ಧನಾದ ಅವನಿಗೆ ಆ ಹೊಲದ ಅಗತ್ಯವೂ ಬಹಳವಿತ್ತು.

ಚಂದ್ರವ್ವ ಬಾಬಣ್ಣನ ಈ ಸಮಸ್ಯೆಯನ್ನೆಲ್ಲ ವಿವರಿಸಿ ತನ್ನ ಮಗನಾದ ಆದಪ್ಪ ಮಾಸ್ತರರ ಕಡೆಯಿಂದ ಎಕ್ಸಂಬಿಗೆ ಒಂದು ಕಾಗದ ಬರೆಯಿಸಿದಳು ಇವನು ಹೋಗಲಿಲ್ಲ, ಅವರ ಕಿವಿಯ ಮೇಲೆ ಹಾಕಿಬಿಡುವದು ತಮ್ಮ ಕರ್ತವ್ಯವೆಂದು ಬಗೆದಳು. ಕಾಗದದಲ್ಲಿ ಮಾಸ್ತರು, ಹೊಲ ಕೊಡಲಿಕ್ಕೆ ತೆಗೆದ ವಿಷಯವನ್ನೆಲ್ಲ ವಿವರಿಸಿ ಕೊನೆಗೆ "ಬಾಬಣ್ಣ ಗಂಗವ್ವನ ಮನೆಯಲ್ಲಿಯೇ ಉಣ್ಣುವ. ಅಲ್ಲಿಯೇ ಮಲಗುವ" ಎಂದೂ ಒಂದು ವಾಕ್ಯ ಇರಿಸಿದರು

ಪದ್ಮಾವತಿಗೆ ಹೊಲ ಹೋಗುವದೆಂಬ ಸಂಗತಿಗಿಂತ ಈ ವಾಕ್ಯವೇ ಹೆಚ್ಚಿಗೆ ಹೆದರಿಸಿತು. ಸುಂದರಿ, ಅವಳಿಗಾಗಿ ಅಲ್ಲಿ ಬಂದು ಹೋಗುವ ತರುಣರ ಸಂಖ್ಯೆ, ಎಲ್ಲ ಕಣ್ಣಿಗೆ ಕಟ್ಟಿತವಳಿಗೆ. ಅವಳು ಗಂಡುಮಗುವನ್ನು ಹೆತ್ತು ಇನ್ನೂ ಮೂರು ತಿಂಗಳು ಕಳೆಯದಿದ್ದರೂ ಗಂಡನ ಮನೆಗೆ ಹೋಗುವ ಹಟ ಹಿಡಿದಳು. ಅವಳ ತಂದೆ 'ನಾನೇ ಹೋಗಿ ಹೊಲದ ವಿಷಯ ಮಾತಾಡಿ ಬರುವೆ, ಸಧ್ಯಕ್ಕೆ ಅಗತ್ಯವಿದ್ದರೆ ಸ್ವಲ್ಪ ಹಣದ ಸಹಾಯವನ್ನೂ ಮಾಡುವೆ, ಮುಂದಿನ ಸುಗ್ಗಿ ಆಗುವ ವರೆಗೆ ಹೊಲ ಕೊಡುವವನ್ನು ತಡೆಯುವೆ, ಸುಗ್ಗಿ ಚನ್ನಾಗಿ ಆದರೆ ಮುಂದೆ ಏನಾದರೂ ಆದೀತು,' ಎಂದು ಹೇಳಿದ. ತಾಯಿಯು "ನೀ ಹಡೆದು ಇನ್ನೂ ಮೂರು ತಿಂಗಳಾಗಿಲ್ಲ. ಹೊಲ ಹೆಚ್ಚಿನದೋ ನಿನ್ನ ಜೀವ ಹೆಚ್ಚಿನದೋ? ಅವರು ಹೋಗಿ ಏನು ಮಾಡಿಕೊಂಡ ಬರತಾರ ಬರಲಿ. ಮೂರ ತಿಂಗಳ ಹೊರನಲ ಇಳಿಯುವಂತಿಲ್ಲ, ಇನ್ನೂ ತಣ್ಣೀರೊಳಗ ಕೈ ಹಾಕುವಂತಿಲ್ಲ, ಊರಿಗೆ ಹೋಗತೇನಂದರೆ?" ಎಂದು ಮಗಳಿಗೆ ಕೇಳಿದಳು.

ಯಾರು ಏನು ಹೇಳಿದರೂ ಪದ್ಮವ್ವ ಗಂಡನ ಮನೆಗೆ ಹೋಗುವ ಹಟ ಬಿಡಲಿಲ್ಲ. ಅವಳ ಆಗ್ರಹವನ್ನು ಕಂಡು ಅವರಣ್ಣ ಸಿಟ್ಟಿನಿಂದಲೇ ಅಂದ,—

"ಆಕೆಯ ದೈವದೊಳಗ ಏನ ಅದ ಅಡ ಆಗಲಿ. ನಿಲ್ಲು ನಿಲ್ಲು ಅಂದರೆ
ನಿಲ್ಲುವಳೇನು? ತನ್ನ ಮನಸ್ಸಿಗೇ ಬಂದದ್ದ ಆಕೆ ಮಾಡುವಾಕೆ. ಆಗಲಿ.
ಎಂಟದಿನಾ ಹುಣ್ಣಿವಿ ಅದ, ಅಷ್ಟ ಆಗಲಿ. ಒಂದ ದಿನ ಗಾಡಿ ಹೂಡಿ ಕಳಿಸಿ
ಕೊಟ್ಟ ಬರತೇನ. ತೊಟ್ಟಿಲ ಬಟ್ಟಿಲ ತಗೊಂಡ ಹೋಗುವಾಕೆ. ಹುಣ್ಣಿವೆ
ಮುಂದ ಹೇಗೆ ಹೋಗತಾಳು? ಹಡೆದು ಕೂಸನ್ನ ತಗೊಂಡು ಹೋಗುವಾಕೆ,
ಮುಹೂರ್ತ ನೋಡಲಿಕ್ಕೆ ಬೇಕು. ಎಲ್ಲಾ ಸರಳ ಹೋಗಲಿಕ್ಕೆ ಬೇಡಾ?"

ಆ ಎಂಟು ದಿನಗಳೆಂದರೆ ಪದ್ಮಾವತಿಗೆ ಎಂಟು ವರ್ಷಗಳಂಬ ಭಾವನೆ
ಯಾಯಿತು.

೬

ಎಕ್ಸಂಬಿಗೆ ಹೋಗಿ ಬಂದ ಊರೊಳಗಿನವರೊಬ್ಬರ ಕಡೆಯಿಂದ
ಪದ್ಮಾವತಿಯು ಇನ್ನೆರಡು ದಿನಗಳಲ್ಲಿ ಬರುವಳೆಂಬ ಸುದ್ದಿಯನ್ನು ಕೇಳಿ
ಬಾಬಣ್ಣನಿಗೆ ದಿಗಿಲು ಬಿದ್ದಂತಾಯಿತು. ಇನ್ನೂ ಹೆರಿಗೆಯಾಗಿ ಮೂರು
ತಿಂಗಳುಗಳಾಗಿಲ್ಲ. ಒಮ್ಮಿಂದೊಮ್ಮೆ ಈಗ ಬರುವುದೆಂತು? ಮನೆಯಲ್ಲಿ
ಅಣ್ಣನ ಹೆಂಡತಿಗೂ ಇವಳಿಗೂ ಹೊಂದಿ ನಡೆಯುತ್ತಿರಲಿಕ್ಕಿಲ್ಲವೆ? ಆಕಸ್ಮಾತ್
ಹೀಗೆ ಹೇಳಿ ಕಳುಹಿಸುವುದರ ಕಾರಣವೇನು? ಎಂದು ವಿಚಾರಿಸತೊಡಗಿದ.
ಯಾವುದೂ ಹೊಳೆಯದಾಯಿತು. ಮತ್ತೊಮ್ಮೆ ಮನಸ್ಸಿನಲ್ಲಿಯೇ ಅಂದು
ಕೊಳ್ಳುವನು— ನಾನು ಕಲ್ಲಪ್ಪನಿಗೆ ಹೊಲ ಮಾರಿದ ಸುದ್ದಿ ಏನಾದರೂ
ಹತ್ತಿರಬೇಕೆ? ಆದಕ್ಕಾಗಿಯೇ ಅವಸರದಲ್ಲಿ ಹೊರಟುನಿಂತಿದ್ದರೆ?

ಹೊಲ ಕೊಟ್ಟರೇನಾಯಿತು? ಬಾಣಂತಿ ಹೀಗೆ ಬರಬೇಕೆಂದೆಲ್ಲಿದೆ?
ಹೀಗೆ ಬಾಬಣ್ಣ ತನ್ನಷ್ಟಕ್ಕೆ ತಾನು ವಿಚಾರಿಸಿದನಾದರೂ ಹೊಲ ಕಳೆದು
ಕೊಂಡದ್ದಕ್ಕೆ ಮರ ಮರ ಮರುಗಿದ. ಹಿರಿಯರು ಗಳಿಸಿದ ಹೊಲ. ಮಿದುವು
ನೆಲ. ಒಂದೇ ಮಳೆಯಾದರೂ ಚನ್ನಾಗಿ ಬೆಳೆ ಬರುವ ಭೂಮಿ. ಇಂಥದನ್ನು
ಕಳೆದುಕೊಂಡೆನಲ್ಲ. ಆದೂ ಮದುವೆಯ ಸಾಲದಲ್ಲಿ. ಊರಲ್ಲಿ ಜನ
ಏನಂದೀತು? 'ಸೂ—ಮಗ ಮದುವೆ ಇಲ್ಲದೆ ತಿರುಗಬೇಕಿತ್ತು. ಇದೇನು
ಮಾಡಿದ? ಹೊಲ ಹಾಕಿ ಹೆಣ್ಣು ಮಾಡಿಕೊಂಡ.' ಎಂದು ಅನ್ನುವರಲ್ಲ
ಎಂದು ಜನರಿಗೆ ನಾಚಿ ಬಾಬಣ್ಣ ಎರಡು ದಿನ ಮನೆಬಿಟ್ಟು ಹೊರಗೆ ಹೋಗ
ಲಿಲ್ಲ. ಮನೆಯಲ್ಲಿಯೇ ಕೈಯಿಂದ ಅಡಿಗೆ ಮಾಡಿಕೊಂಡು ಊಟ ಮಾಡುವ.

ಗಂಗ್ಗವ್ವನ ಮನೆಯಲ್ಲಿ ಊಟಮಾಡುವದಕ್ಕೆಂದು ಧಾನ್ಯಕೊಟ್ಟಿದ್ದನಾದರೂ ಈಗ ಅಲ್ಲಿಗೂ ಹೋಗಲಿಕ್ಕೆ ಸಂಕೋಚ. ನೂರಾರು ರೂಪಾಯಿ ಹೆಚ್ಚಿಗೆ ಬರುವವೆಂದು ಹೊಲವನ್ನು ಅವಳಿಗೆ ಕೊಡದೆ ಕಲ್ಲಪ್ಪನಿಗೆ ಕೊಟ್ಟಿದ್ದೇ ಅದಕ್ಕೆ ಕಾರಣ. ಚಂದ್ರವ್ವನ ಮನೆಯಂತೂ ಮೊದಲೇ ದೂರಾಗಿದ್ದಿತು. ಈಗ ಊರಲ್ಲಿ ತನ್ನವರಾರೂ ಇಲ್ಲದಂತೆ ಬಾಬಣ್ಣನಿಗೆ ಅನ್ನಿಸುವುದು. ಜನ ನಾಲ್ಕು ದಿನ ಅಂದಾರು. ಆಮೇಲೆ ಸುಮ್ಮನೆ ಕುಳಿತಾರು. ಆದರೆ ನನ್ನ ಹೊಲ ಹೋದದ್ದು ಹೋಗಿಯೇ ಬಿಟ್ಟಿತಲ್ಲ. ಅದೇನು ತಿರುಗಿ ಬರುವಂತಿದೆಯೇ? ಎಂದು ಜನರ ಮಾತಿಗೆ ಸಮಾಧಾನ ಮಾಡಿಕೊಂಡರೂ ಹೊಲ ಕೊಟ್ಟದ್ದಕ್ಕೆ ಕಳವಳಗೊಳ್ಳುವನು. ಹಗಲಿರುಳೂ ನಿದ್ರೆ ಇಲ್ಲದೆ ಕೊರಗುವನು ಸೋದರ ಮಾವನಿದ್ದೂ ಇಂಥ ವೇಳೆಯಲ್ಲಿ ನನಗೆ ನೆರವಾಗಲಿಲ್ಲವಲ್ಲ. ಯಾರೋ ಏನೋ ಅನ್ನುವಂತೆ ನಡೆದುಕೊಂಡ. ಎಲ್ಲರೂ ಹೀಗೇ. ನಮ್ಮಿಂದ ಸಿಗುವವರೆಗೇನೇ 'ಬಾ, ತಿನ್ನು, ಉಣ್ಣು,' ಅನ್ನುವವರು. ಈಗ ಮೂರು ದಿನದಿಂದ ಗಂಗವ್ವನ ಮನೆಗೆ ಹೋಗಿಲ್ಲ ನಾನು. ಆದರೂ ಅವಳು ಊಟಕ್ಕೆ ಕರೆಯಲು ಕಳುಹಿಲ್ಲ. ಕಲ್ಲಪ್ಪ ಹೊಲದ ಖರೀದಿ ಆದಮೇಲೆ ಮಾತಾಡಿಸಿಯೇ ಇಲ್ಲ. ಜಗದ ರೀತಿ ವಿಚಿತ್ರ ಎಂದುಕೊಂಡ.

ಹೀಗೆ ಊರೆಲ್ಲ ಭಣ ಭಣವೆನ್ನುವ ಕಾಲದಲ್ಲಿ ಹೆಂಡತಿ ಬರುವಳೆಂಬ ಸುದ್ದಿ ಬಾಬಣ್ಣನಿಗೆ ಒಂದು ಕ್ಷಣ ಸಮಾಧಾನವನ್ನೂ ಉಂಟು ಮಾಡಿತು. ಬರಲಿರುವ ಮಗನ ರೂಪುರಂಗುಗಳನ್ನು ಮನದಲ್ಲಿಯೇ ನೆನೆಯತೊಡಗಿದ. ತಾನಿನ್ನೂ ಹೊಸದಾಗಿ ಮಾವನ ಮನೆಗೆ ಹೋಗಿ ಬಂದಿರಲಿಲ್ಲವಾದುದರಿಂದ ಅವರ ಮನೆಗೆ ಹೋಗುವಂತಿರಲಿಲ್ಲ. ಅದರಿಂದ ತಾತಪ್ಪಮಾವನನ್ನೇ ತೊಟ್ಟಿಲಲ್ಲಿ ಹಾಕುವ ಕಾಲಕ್ಕೆ ಕಳುಹಿಸಿದ್ದ. ಅವನೇ ಹೇಳುತ್ತ ಬಂದಿದ್ದ 'ಹುಡುಗ ಬಾಬಣ್ಣನಂತೆಯೇ ಇದೆ. ಬಣ್ಣ ಮಾತ್ರ ಪದ್ಮಾವತಿಯದು' ಎಂದು. ಅದರ ಮೇಲಿಂದ ಬಾಬಣ್ಣ ಮಗನ ಚಿತ್ರವನ್ನು ತನ್ನ ಬಗೆಗಣ್ಣೆದುರಿಗೆ ತಂದು ನಿಲ್ಲಿಸಲು ಯತ್ನಿಸುತ್ತಿದ್ದ. ತನಗಿಂತ ಪದ್ಮಾವತಿಯ ಬಣ್ಣ ಒಳ್ಳೆಯದು, ನಿಂಬೆಯ ಹಣ್ಣಿನಂತಹದು. ಬೆರಕಿ ಅವಳ ಬಣ್ಣವನ್ನೇ ಹೇಗೆ ಎತ್ತಿಕೊಂಡಿದ್ದಾನೆ ನೋಡು, ಎಂದು ಮನದಲ್ಲಿಯೇ ಸಂತಸಗೊಳ್ಳುವ. ನೋಡಲು ತವಕಗೊಳ್ಳುವ. ಅದರ ಜೊತೆಯಲ್ಲಿಯೇ ಈಗ ಪದ್ಮಾವತಿ

ಹೇಗೆ ಕಾಣುವಳೋ! ಹಡೆದು ಹೆಂಗಸು ಇಳಿಯುವದಂತೆ. ಇವಳು ಹೇಗಿರುವಳೋ. ಕಣ್ಣಿಗೆ ಕಾಡಿಗೆ, ಬಿಳುಪೊಡೆದ ಮುಖ, ಎಂದೇನೇನೋ ಬಾಣಂತಿಯ ಚಿತ್ರವನ್ನು ನೆನೆಯುವನು.

ಹೊಲದ ಸಂಗತಿ ನೆನಪಾದೊಡನೆಯೇ ಅವನ ಆನಂದ ಇಳಿಮುಖವಾಗುವದು. ಮಗನು ಹುಟ್ಟಿದ, ಅವನ ಹೊಲವನ್ನು ನಾನು ಕಳೆದೆ. ಹೀಗೇ ಕಳೆಯುತ್ತ ಹೋದರೆ ಮಗನಿಗೇನು ?

ಛೇ! ಹೀಗೆ ಇದೊಂದು ಹೊಲ ತಪ್ಪಿಹೋಯ್ತೆಂದು ಎಲ್ಲವೂ ಹೋಗುವುದೇ? ಇನ್ನೂ ಮೂರು ಕೂರಿಗೆ ಅಡವಿಯಿದೆ. ಒಂದು ಪೈಯೂ ಸಾಲವಿಲ್ಲ. ಮನೆಯಲ್ಲಿ ನೂರೈವತ್ತು ರೂಪಾಯಿಗಳಿವೆ. ಎತ್ತಿನ ಹಣವನ್ನಷ್ಟು ಗಂಗವ್ವನಿಗೆ ಕೊಡಬೇಕಾಗಿದೆ. ಅದಕ್ಕೂ ಅದಕ್ಕೂ ಹೊಂದಿ ಹೋಗುವುದು. ಇನ್ನೇನು ನಾನು ಬಿಡುಗಡೆಹೊಂದಿದೆ. ಯಾರಿಗೂ ಅಂಜಿ ಅಳುಕಿ ನಡೆಯಬೇಕಿಲ್ಲ. ನನಗೆ ತಿಳಿದಂತೆ ಸ್ವತಂತ್ರವಾಗಿ ನಡೆಯುವೆ

ಆದಾಯಿತು. ಪದ್ಮಾವತಿಗೆ ಏನೆಂದು ಹೇಳಲಿ? ಹೊಲ ಮಾರಿದೆನೆಂದು ಹೇಳಲೆ? ಹೇಗೆ ಹೇಳುವುದು ? ಅವಳೆಷ್ಟು ನೊಂದುಕೊಳ್ಳುವಳೋ. ನನ್ನ ಉತ್ಪನ್ನ ಕಡಿಮೆಯಾಯಿತೆಂದು ಬೇಸರಪಡುವಳೋ ಏನೋ. ಮೊದಲಿನಂತೆ ತನ್ನೊಡನೆ ವರ್ತಿಸದಿದ್ದರೆ?

ಅವಳು ಹಾಗೆಂದಿಗೂ ಮಾಡಳು ನನ್ನ ಹೊಲಮನೆ ನೋಡಿಯೇ ನನ್ನೊಡನೆ ಮದುವೆಯಾಗಿರುವಳೆ ಅವಳು? ಇಲ್ಲ. ನಾನು ಬೇಕೆಂದು ಮದುವೆಯಾಗಿದ್ದಾಳೆ. ಮೆಚ್ಚಿ ಮದುವೆಯಾಗಿದ್ದಾಳೆ

ಮೆಚ್ಚಿಸಲಿಕ್ಕೆ ಹೋಗಿದ್ದೆನೇನು ನಾನು ?

ಹೋಗಲಿಕ್ಕೇನು ? ಮದುವೆಯಾಗಿ ಮನೆಯಲ್ಲಿ ಬಂದ ಮೇಲೆ ಮೆಚ್ಚಬಾರದೇಕೆ ?

ಏನೇ ಆಗಲಿ, ಸದ್ಯಕ್ಕೆ ಹೊಲ ಕೊಟ್ಟ ವಿಷಯವನ್ನು ಅವಳಿಗೆ ತಿಳಿಸುವುದೇ ಬೇಡ. ಮುಂದೆ ಸಾವಕಾಶ ಹೇಳಿದರಾಯಿತು.

ಎರಡನೆಯವರಿಂದ ತಿಳಿದರೆ ?

ಅದೂ ಒಳ್ಳೆಯದೇ ಆಯಿತು. ಆಮೇಲೆ ನಾನು ಕಾರಣವನ್ನು ವಿಸ್ತರಿಸಿ ಸಮಾಧಾನ ಹೇಳಿದರಾಯಿತು.

ಮೂರು ದಿನಗಳು ಮಿಂಚಿನಂತೆ ಮಾಯವಾದುವು. ನಾಲ್ಕನೆಯ ದಿನ ಸಾಯಂಕಾಲ ಕಮಾನು ಕಟ್ಟಿದ ಒಂದು ಗಾಡಿ ಬಾಬಣ್ಣನ ಮನೆಯ ಮುಂದೆ ಬಂದು ನಿಂತಿತು. ಮುಂದೆ ಕುಳಿತು ಬಾಬಣ್ಣನ ಬೀಗ ಬಂಡಿ ಹೊಡೆಯುತ್ತಿದ್ದ ಬಾಡಿಯ ಬೆನ್ನುಹತ್ತಿ ಮಾವ ಬರುತ್ತಿದ್ದ. ಒಳಗೆ ಪದ್ಮಾವತಿ ಕೂಸಿನೊಡನೆ. ಅವಳ ಹತ್ತರ ತಾಯಿ. ಹೀಗೆ ಮನೆಯವರೆಲ್ಲ ಬಂದುಬಿಟ್ಟಂತಾಗಿದ್ದಿತು

ಬಾಬಣ್ಣ ಇದೀಗ ಹೊರಗೆ ಹೊರಡುವುದರಲ್ಲಿದ್ದ. ಬಂಡಿ ಬಂದುದನ್ನು ನೋಡಿ ನಿಂತ.

"ಬಂದಿರಿ?" ಎಂದ. ನಗಲಿಕ್ಕೆ ಯತ್ನಿಸಿದ.

"ಹೂಂ!" ಎಂದ ಮಾವ. ಬಿಸಿಲಲ್ಲಿ ದಣಿದು ಬಂದುದರಿಂದ ಬಾಯಿ ಒಣಗಿತ್ತು. ದನಿ ಅಷ್ಟು ಸ್ಪಷ್ಟ ಹೊರಡಲಿಲ್ಲ.

ಅದೇಕೋ ಮಾವ ಬಿಗುವಿನಲ್ಲಿರುವನೆಂದು ಬಾಬಣ್ಣ ಭಾವಿಸಿ ಸುಮ್ಮನಾದ. ಅತ್ತೆ ಬಂಡಿಯಿಂದ ಕೆಳಗಿಳಿದಳು. ಮುಂದಾಗಿ ಮನೆಯ ಕಡೆಗೆ ನಡೆದಳು. ಹಾಗೆಯೇ ಮಗಳಿಗೆ ಮೆಲ್ಲನೆ ಕೆಳಗಿಳಿದು ಬರಲು ಹೇಳಿದಳು.

"ಆಕೆಯನ್ನ ನಾ ಇಳಿಸಿಕೊಳ್ಳತೇನೆ. ನೀ ಒಳಗ ಹೋಗಿ ನಿವಾಳಿ ತಾ ಹೋಗು."

ಎಂದು ಹೆಂಡತಿಗೆ ಸೂಚಿಸಿದ, ಬಾಬಣ್ಣನ ಮಾವ.

ಗಂಡನ ಮಾತಿಗೆ ಪ್ರತಿಯಾಗಿ ಏನೂ ಹೇಳದೆ ಅವಳು ಅಳಿಯನಿಗೆ ಕೇಳಿದಳು—,

"ನಾವು ಹೇಳಿಕಳಿಸಿದ್ದೆವು. ನಿಮಗ ಬಂದ ಯಾರೂ ಹೇಳಲಿಲ್ಲ?"

ಅವನು ಹೊರಗೆ ಹೊರಟು ನಿಂತುದರ ಲಕ್ಷಣವನ್ನು ಅರಿತು ಹೀಗೆ ನುಡಿದಿರಬೇಕು. ಅದನ್ನು ಗಮನಿಸಿಯೇ ಬಾಬಣ್ಣ ಉತ್ತರವಿತ್ತ,—

"ಹೇಳಿದ್ದರು. ಯಾರ ಯಾರ ಬರತೀರೋ ಗೊತ್ತಿರಲಿಲ್ಲ. ಅದಕ್ಕ ಗಂಗವ್ವನ ಮನೆಗೆ ಹೋಗಿ ಹೆಂಗಸರನ್ನ ಕರಕೊಂಡ ಬರಬೇಕಂತ ಮಾಡಿದ್ದೆ. ಮನೆಯಲ್ಲಿ ಹೆಂಗಸರಾರಾದರೂ ಬೇಕಲ್ಲ."

"ಬಾಣಂತಿ ಸಂಗಡ ಬೇಕಂತ ನಾನೂ ಬಂದೆ."

ಅಳಿಯನ ಮಾತಿಗೆ ಸಮಾಧಾನ ಹೊಂದಿ ನುಡಿದಳು. ಆದರೆ ಸತಿಯ ಮಾತಿನಿಂದ ಪದ್ಮಾವತಿಗೆ ಸಂತಸವಾಗಲಿಲ್ಲ. ಇವರೆಲ್ಲ ಹೇಳುವುದು ಶುದ್ಧ ಸುಳ್ಳು ಎಂದುಕೊಂಡಳು. ಈಗ ಬಂಡಿ ಬರುವ ಹೊತ್ತು, ಅವರ ಮನೆಗೆ ಹೊರಟು ನಿಂತಿದ್ದಾರೆ ಇವರು, ಎಂದು ಸಪ್ಪಗಿನ ಮುಖ ಮಾಡಿಕೊಂಡೇ ಕೆಳಗಿಳಿದಳು,—

"ನಿನ್ನೆಯೂ ಹಾದೀ ನೋಡಿದೆ. ನೀರು ತಂದು ಮನೆಯೊಳಗಿನ ಪಾತ್ರೆಗಳನ್ನೆಲ್ಲ ತುಂಬಿಕೊಂಡ ಕುಳಿತೆ. ನೀವು ಬರಲಿಲ್ಲ. ಇಂದ ನಾನು ನೀರು ತರಲಿಲ್ಲ, ನೀವು ಬಂದಿರಿ."

ಹೆಂಡತಿಯ ಕಡೆಗೆ ನೋಡಿ ಬಾಬಣ್ಣ ಹೇಳಿದ.

"ಈಗ ಸಧ್ಯಕ್ಕ ಸ್ವಲ್ಪ ಇದ್ದರ ಸಾಕು. ಮತ್ತು ತರೋಣಂತ" ಎಂದು ಅತ್ತೆ ಅಳಿಯನಿಗೆ ಸಮಾಧಾನ ಹೇಳಿದಳು.

"ಹಾಗೆ ನಾಲ್ಕಾರು ಕೊಡ ಅವ."

"ಆಯ್ತಲ್ಲ"

ಎಂದು ಒಳಗೆ ಹೋಗಿ, ಕೈಕಾಲು ತೊಳೆದುಕೊಂಡು ಬುಟ್ಟಿಯಲ್ಲಿಯ ರೊಟ್ಟಿಯ ಎರಡು ತುಣುಕುಗಳನ್ನು ನಿವಾಳಿಗೆಂದು ತಕ್ಕೊಂಡು ಬಂದು, ಮಗಳ ಪಾದ ತೊಳೆದು ನಿವಾಳಿ ಒಗೆದು ಒಳಗೆ ಕರೆದುಕೊಂಡಳು.

"ತಣ್ಣತಣ್ಣಗ ಒಮ್ಮೆ ಕೂಸಿನಾ ತಗೊಂಡ ನಿಮ್ಮ ಮನೆ ಬಂದ ಸೇರಿದಿರಿ, ನೆಟ್ಟಗಾಯ್ತು ತಾಯಿ!"

ಎಂದು ಒಂದು ಭಾರ ಇಳಿದವರಂತೆ ನುಡಿದಳು.

ಮಗ ಹೆಂಡತಿ ಆಪ್ತರಿಂದ ಮನೆ ತುಂಬಿದಂತಾಯಿತು. ಬಾಬಣ್ಣ ಕೊಡ ತಕ್ಕೊಂಡು ನೀರಿಗೆ ಹೊರಡಲು ಸಿದ್ಧನಾದ.'ಈಗ ನಾವು ಬಂದಿದೇವಿ, ಸಾವಕಾಶ ತಂದರಾಯಿತು' ಎಂದು ಅತ್ತೆ ಅಕ್ಕರೆಯ ಮಾತನಾಡಿದಳು. ಅಷ್ಟಕ್ಕೆ ಅವನೂ ಕೊಡ ಇಟ್ಟುಬಿಟ್ಟ. ಎಲ್ಲರೂ ಕೂಡಿ ಊರಿಂದ ಕಟ್ಟಿತಂದ ಉಂಡಿ, ಚಕ್ಕುಲಿಗಳನ್ನು ತಿಂದರು. ಆಮೇಲೆ ಬಾಬಣ್ಣನ ಮಾವ ತೊಟ್ಟಿಲ ಕಟ್ಟುವದಕ್ಕೆ ಗಡಬಡಿ ಮಾಡಹತ್ತಿದ.

"ಈಗೆಲ್ಲಿ ನಿನ್ನ ಮೊಮ್ಮಗ ತೊಟ್ಟಿಲಾ ಬೇಡಿ ಅಳತಾನ ಇರಲಿ ಬಿಡು" ಎಂದು ಹೆಂಡತಿ ಹೇಳಿದಳು. ಅವಳಿಗೆ ಓಣಿಯಲ್ಲಿ ಯಾರುಯಾರಿಗೆ ಉಂಡಿಗ

ಳನ್ನು ಕೊಡಬೇಕೆಂಬುವ ವಿಚಾರ. ಅದನ್ನು ಅವಳು ಮಗಳೊಡನೆ ಚರ್ಚಿಸು ತ್ತಿದ್ದಳು. ಬಾಬಣ್ಣ ಸುಮ್ಮನೆ ಇದ್ದ. ಮನೆಯಲ್ಲಿ ಹಗ್ಗಗಳು ಇರಲಿಲ್ಲ. ಆದ ರಿಂದ ಆತ ತೊಟ್ಟಿಲ ಕಟ್ಟಲು ಚಟುವಟಿಕೆ ತೋರುತ್ತಿರಲಿಲ್ಲ. ಮಗನನ್ನು ಕಂಡ ಸಂತಸದಲ್ಲಿ ಗುಂಗಾಗಿ ಇದ್ದ.

"ಬಾಬು, ಹಗ್ಗಗಳಿದ್ದರೆ ಕೊಡು. ದಿವಸ ಚಲೋ ಅದೆ. ಇಂದೇ ಕಟ್ಟಿ ಬಿಡೋಣು."

ಎಂದು ಮಾವ ಇನ್ನೊಮ್ಮೆ ಸೂಚಿಸಿದ. ಆಗ ಪದ್ಮಾವತಿಯೇ ಹೇಳಿ ದಳು,—

"ಮನೆಯಲ್ಲಿ ಹಗ್ಗ ಇರಲಿಕ್ಕಿಲ್ಲ. ಅವರಿಗೇನ ಗೊತ್ತು, ಮುಂಚಿತ ತಂದ ಇಡಲಿಕ್ಕೆ ?"

"ಇನ್ನ ಎಲ್ಲ ಗೊತ್ತ ಆಗ್ತದ, ನಾಲ್ಕ ಮಕ್ಕಳ ಆದವಂದರ."
ಎಂದು ತಾಯಿ ಮಗಳಿಗೆ ನಗುತ್ತ ಹೇಳಿದಳು.

"ಈ ಒಬ್ಬ ಮಗನಿಗೆ ದೇವರ ಆಯುಷ್ಯ ಹಾಕಲಿ ತಾಯಿ. ನಾಲ್ಕಾರ ಮಂದಿ ಆದರ ಅವರ ಹೊಟ್ಟಿಗೆ ಎಲ್ಲಿಂದ ತರಲಿಯವ್ವ ನಾ."

ಹೆಂಡತಿಯ ಮಾತು ಕೇಳಿ ಬಾಬಣ್ಣನ ಎದೆ ಝಲ್ಲೆಂದಿತು.

"ಅವರವರ ಸೇರ ಅವರವರ ಹಣೆಯೊಳಗೆ ಬರದಿರತಾನ ಬ್ರಹ್ಮ. ನೀವು ಮಾಡೇನು ಅಂದರ ಆಗದು. ಹೊಲ ಮನೆ ಬರುವ ಕಾಲಕ್ಕ ಬರತಾವ, ಹೋಗುವ ಕಾಲಕ್ಕ ಹೋಗತಾವ" ಎಂದು ತಾಯಿ ಮಗಳಿಗೆ ಸಮಾಧಾನ ಹೇಳಿದಳು.

"ಆದರ ತಮ್ಮ ಕೈಯೊಳಗೂ ಇರತದಲ್ಲ." ಪದ್ಮಾವತಿಯ ಮಾತಿದು.

ಮಾವ ಏನನ್ನೂ ಮಾತಾಡಲಿಲ್ಲ. ಇಷ್ಟು ಬೇಗ ಅವನಿಗೆ ಈ ಮಾತು ತೆಗೆಯುವುದು ಬೇಕಿರಲಿಲ್ಲ. ಊಟವಾದಮೇಲೆ ಸಾವಕಾಶ ತೆಗೆದರಾಯಿತು. ಇನ್ನೂ ತಾತಪ್ಪ ಮನೆಗೆ ಬಾದಿಲ್ಲ, ಎಷ್ಟಾದರೂ ಮನೆಗೆ ಹಿರಿಯನಾತ, ಹಡುಗ ನಿಗೇನು ತಿಳಿಯುವುದು? ಇಂದು ನಾವು ಹಣದ ಸಹಾಯ ಮಾಡಿದರೂ ನಾಳೆ ನಡೆತನದಲ್ಲಿ ಕೆಡಕುತನ ಬರಬಾರದು. ಎಂದೇನೇನೋ ಯೋಚನೆಯಲ್ಲಿದ್ದ.

ಈಗಾಗಲೇ ನೀರೊಲೆಗೆ ಉರಿ ಮಾಡಿದ್ದರು. ಅದರಿಂದ ಮನೆಯಲ್ಲಿ ಸ್ವಲ್ಪಹೊಗೆ ಹಿಡಿದಿದ್ದಿತು. ಹೊಸ ಸ್ಥಳ, ಗಾಳಿಯೊಳಗಿಂದ ಬಂದುದರಿಂದ ಕೂಸೂ ಅಳುತಿದ್ದಿತು. ಆ ವಾತಾವರಣದಲ್ಲಿ ಬಾಬಣ್ಣನಿಗೆ ಕೂಡಲಿಕ್ಕಾಗಲಿಲ್ಲ.

ಮೆಲ್ಲನೆ ಎದ್ದು ಹೊರಗೆ ನಡೆದ.

"ನಿಮ್ಮ ಮಾವ ಎಲ್ಲಿ ಇದ್ದಾನ ಕರೆಸಬೇಕಪ್ಪ!"

ಮಾವ ಹೇಳಿದ.

"ಹೌದ, ಹಗ್ಗ ಹಂಗಡ ಎಲ್ಲಿ ಇರತಾವ ಅಂಬೋದ ಅವನಿಗೇ ಗೊತ್ತ. ಸಣ್ಣ ಹುಡುಗ ಇವನಿಗೆ ಏನು ಗೊತ್ತು?"

ಅತ್ತೆ ವಿಷಯಕ್ಕೆ ಬೇರೆ ಬಣ್ಣ ಕೊಡುತ್ತ ನುಡಿದಳು.

"ಎಲ್ಲಾ ಇವರೇ ಮಾಡುವವರು. ಇಥದರೊಳಗ ಅವನದೇನ ಇರುವದಿಲ್ಲ. ಅಂಥಾ ಮದುವೆಯೊಳಗಂದರ ಯಾರವನೋ ಏನೋ ಅನ್ನುವಂತೆ ಹೋಳಿಗೆ ಉಂಡ ತಿರುಗಾಡತಿದ್ದ. ನೋಡಿಲ್ಲಾ?"

ಪದ್ಮಾವತಿ ಮುಂದೆ ನುಡಿದೇ ಬಿಟ್ಟಳು. ಅವಳಿಗೆ ಆತುರ ಹೆಚ್ಚು. ಆದರೂ ಕುಳಿತಲ್ಲಿಯೇ ಅವಳ ತಾಯಿ ಕೈಸನ್ನೆಯಿಂದ ಮಗಳನ್ನು ಸುಮ್ಮನಾಗಿಸಿದಳು. ಕಳ್ಳದನಿಯಿಂದ ಹೇಳಿದಳು,—

"ಎಷ್ಟಾದರೂ ಗಂಡಸು. ಒಮ್ಮೆ ಮನ ಒಡೆದವಂದರ ಕೂಡಲಿಕ್ಕಿಲ್ಲ. ಸುಮ್ಮನ ಇರು ನಿನ್ನ ಹಡೆದವರ ಬಂದಾರ, ಎಲ್ಲಾ ಕೇಳತಾರ, ಮಾಡತಾರ, ನಿನಗೇಕೆ ಬೇಕು? ನಿನ್ನ ಕೂಸೇನೋ ನೀ ಏನೋ ಇದ್ದರಾಯಿತು."

"ಇರತಾರ! ಈಕೆ ಹೇಳುವಾಕಿ!"

ಪದ್ಮಾವತಿ ಗಲ್ಲ ಉಬ್ಬಿಸಿ ನುಡಿದಳು. ಸಿಟ್ಟಿನಿಂದ ಮೂಗಿನ ಹೊರಳಿಗಳೂ ಅರಳಿದ್ದುವು, ಕೆಂಪಾಗಿದ್ದುವು.

"ಹಾಗಾದರ ಧೋತರ ಹಿಡಿದ ಕೇಳ ಹೋಗವ್ವ ನಿನ್ನ ಗಂಡನ್ನ." ತಾಯಿ ಸಿಡುಕಿನಿಂದ ಅಂದಳು.

"ನಾಳೆ ನೀವು ಹೋದ ಮೇಲೆ ಕೇಳತೇನಲ್ಲ. ಬಿಡತೇನ ಏನು?"

"ಕೇಳಕೋತ ಕೂಡಿರಿ, ನಾವ ಹೋಗತೇವಿ." ಬೇಸರದಿಂದ ನುಡಿದು ಸ್ವಲ್ಪ ತಡೆದು "ಅವನ ಹೊಲ ಅವನು ಕೊಟ್ಟರೆ ಕೇಳುವಾಕೆ ನೀ ಯಾರು?" ಮಗಳಿಗೆ ಪ್ರಶ್ನೆ ಹಾಕಿದಳು.

"ನಾ ಯಾರು?" ಎಂದು ಪದ್ಮಾವತಿ ತುಸು ವಿಚಾರದಲ್ಲಿ ಬಿದ್ದಳು. ಆಮೇಲೆ ನುಡಿದಳು— "ಅವರೆಲ್ಲ ಕೊಟ್ಟಾರ. ಆದರ ಇತ್ತ ನಮ್ಮ ಕೊರಳಿಗೆ ಉರಲ ಬರತವಲ್ಲ" ಗಂಟಲ ಸಿರ ಬಿಗಿದಿದ್ದುವು.

" ಉರಲ ಯಾಕ ಬರತದ, ಇನ್ನೂ ಮೂರ ಕೂರಿಗೆ ಅಡವಿ ಇಲ್ಲಾ ?" ಮಗಳಿಗೆ ಸಮಾಧಾನ ಹೇಳಿದಳು.

ಅಷ್ಟರಲ್ಲಿ ಹೊರಗಿನಿಂದ ತಾತಪ್ಪ ಬಂದ. ಕ್ಷೇಮ ಸಮಾಚಾರದ ಮಾತು ಕತೆಗಳೆಲ್ಲ ಆದುವು. ತೊಟ್ಟಿಲ ಕಟ್ಟುವ ಹಗ್ಗದ ವಿಷಯಕ್ಕೂ ಪ್ರಶ್ನೆ ಬಂತು. ಕೂಡಲೇ ತಾತಪ್ಪ ಅಳಿಯನನ್ನು ಕರೆದು ಹೇಳಿದ,—

" ಹೋಗೋ. ಆ ಗಂಗಾನ ಮನೆಗೆ ಹೋಗಿ, ಬೋದಿಗೆ ಮೇಲೆ ಎರಡ ಹಣಿಗ್ಗ ಇಟ್ಟೇನಿ ತಾ ಹೋಗು, ಮೊನ್ನೆ ಸಂತೆಯಿಂದ ಬರತಾ ತಂದೇನಿ. ಹೊಸವು ಅವ ನೋಡು. ತೊಟ್ಟಿಲ ಕಟ್ಟಲಿಕ್ಕೆ ಬೇಕಂತ ಬಣ್ಣಾಸ್ಟು ತಂದೇನಿ. "

ಬಾಬಣ್ಣಾ ಹಗ್ಗ ತರಲಿಕ್ಕೆ ಹೋಗಿಬಿಟ್ಟ.

" ಹೇಳಲಿಲ್ಲಾ ನಾ ? ತಾತಪ್ಪನನ್ನು ಕರೆಯಿಸಿರಿ ಅಂತ. ಎಷ್ಟ ಆದರೂ ಹಿರಿಯರ ಅಂದರ ಮಾತೇ ಬೇರೆ. "

ಎಂದು ಬಾಬಣ್ಣಾನ ಅತ್ತೆ ತಾತಪ್ಪನನ್ನು ಹೊಗಳುತ್ತ ನುಡಿದಳು.

" ಹಿರಿಯರು ಹೆಸರಿಗೇ ನಾವು ನಮ್ಮ ಮಾತನ್ನ ಕೇಳತಾರ ಏನ ಬಾಬು ? ಎಂಥಾ ಬಂಗಾರ ತುಂಡಿನಂಥಾ ಹೊಲಾ ಕಳದ ಇಟ್ಟ. " ಹೊಲದ ಮಾತು ಬರುವದೆಂದು ತಿಳಿದ ತಾತಪ್ಪ ತಾನೇ ಮುಂಚಿತವಾಗಿ ಹೇಳಿಬಿಟ್ಟ.

ಎಲ್ಲರಿಗೂ ಸಿಡಿಲು ಬಡಿದಂತಾಯಿತು. ಹೊಲ ಇನ್ನೂ ಮಾರಿರ ಲಿಕ್ಕಿಲ್ಲವೆಂದು ಭಾವಿಸಿದ್ದರವರು. ಬಾಬಣ್ಣಾನ ಮಾವ ಒಳಗೆ ಹೋಗಿ, ಟ್ರಂಕಿನ ಬಾಗಿಲ ತೆಗೆದು, ನೋಟುಗಳ ಪುಡಿಕೆ ತಂದು ತಾತಪ್ಪನ ಮುಂದೆ ಒಗೆದ. ಆಮೇಲೆ ಅಂದ,—

" ಇದ ನೋಡು. ರೂಪಾಯಿ ಕಟ್ಟಿಕೊಂಡು ಬಂದಿದ್ದ ನಾ. ಹೊಲ ಒಮ್ಮೆ ಕೈಯೊಳಗಿಂದ ಹೋದರ ತಿರಗಿ ಬರತದ? ನೀ ಒಂದ ಕಾಗದವನ್ನಾದರೂ ನಮಗ ಹಾಕಸಬೇಕಪ್ಪ. "

ತಾತಪ್ಪನ ಮೇಲೆ ಅಪರಾಧ ಹೊರಿಸಿ ಬೇಗ ನುಡಿದ.

" ನಿಮಗ ಕಾಗದ ಹಾಕಲಿಕ್ಕೇನು? ನನಗ ಏನ ಇಲ್ಲಿ ದುಡ್ಡ ಹುಟ್ಟುವ ದಿಲ್ಲೇನ? ಈ ಊರನ್ನೇ ಕೊಂಡೇನಲ್ಲ. ಆದರ ನಿನ್ನ ಅಳಿಯನೊಬ್ಬ ನನ್ನ ಮಾತ ಕೇಳಬೇಕಲ್ಲ !"

ಎಂದು ತಾನು ಗಂಗವ್ವನಿಂದ ರೂಪಾಯಿ ಕೊಡಿಸಿ ಹೊಲ ಉಳಿಸಿ ಕೊಳ್ಳಲು ಮಾಡಿದ ಪ್ರಯತ್ನವೆಂಬುವಂತೆ ನಡೆದ ಸಂಗತಿಯನ್ನೂ ವಿವರಿಸಿದ.

" ಮಾತ ಕೇಳದಿದ್ದರ ಕಪ್ಪಾಳಿಗೆ ಹೊಡಿಯಬೇಕಿತ್ತು? "

ಬಾಬಣ್ಣನ ಅತ್ತೆ ನುಡಿದಳು.

" ಹೂಂ! ಕಪ್ಪಾಳಿಗೆ ಹೊಡೆಯುವ್ವ. ಆತ ಕಲ್ಲಪ್ಪನ ಮಾತ ಕೇಳಿ ಕುಣಿಯಲಿಕ್ಕೆ ಹತ್ತ. ಆತ ಒಬ್ಬರ ಕೇಳಿದರು ಒಬ್ಬರ ಇಲ್ಲೋ ಅನ್ನೋದ ರಲ್ಲಿ ಖರೀದಿ ಮಾಡಿಸಿಕೊಂಡ ಬಿಟ್ಟ, ಸಣಿ ಸವಿ ತಿನ್ನಲಿಕ್ಕೆ ಹಾಕಿ. "

" ಗಂಗವ್ವಅತ್ತಿ ಮನೆಯೊಳಗೇ ಉಣತಿರಲಿಲ್ಲ? "

ಒಳಗಿನಿಂದ ಸಂಶಯ ಸ್ವರದಲ್ಲಿ ಪದ್ಮಾವತಿ ಕೇಳಿದಳು.

" ಹೊಲಾ ಕೊಡೋದ ನಾಲ್ಕು ದಿನ ಇರುವಾಗಂದರ ಅತ್ತ ಹಾಯು ಲಿಲ್ಲ ನಿನ್ನ ಗಂಡ. ಏನ ಕೇಳುವಿ ನೀ ?"

ಎಂದು ತಾತಪ್ಪ ಮಾತು ಮುಗಿಸಿದ. ಎಲ್ಲರಿಗೂ ನಿರುತ್ಸಾಹ. ಮರು ದಿನ ಒಂದು ದಿನ ನಿಂತು, ಮಗಳಿಗೆ ಸಮಾಧಾನ ಹೇಳಿ ಎಲ್ಲರೂ ಹೋಗುವ ಸಿದ್ಧತೆ ನಡೆಯಿಸಿದರು. ಯಾರೂ ಬಾಬಣ್ಣನ ಕೂಡ ಹೆಚ್ಚಿಗೆ ಮಾತ ನಾಡಲಿಲ್ಲ. ಕಲ್ಲಪ್ಪನ ಕೈಯೊಳಗಿನ ಹೊಲ ತಿರುಗಿ ಕೊಳ್ಳಲು ಸಾಧ್ಯ ವಿಲ್ಲೆಂಬುದನ್ನು ವಿಚಾರಿಸಿ ನೋಡಿದ್ದರು. ಮಗಳ ದೈವ ಇದ್ದಂತೆ ಆಗಲಿ, ಎಂದುಕೊಂಡು ನಿರಾಶೆಯಿಂದ ತಮ್ಮ ಊರಿಗೆ ತೆರಳಿದರು.

ಬಾಬಣ್ಣ ಮನೆಯಲ್ಲಿ ಎತ್ತಿನ ಸಾಲ ಕಳೆಯಲಿಕ್ಕೆಂದು ತಂದಿಟ್ಟ ರೂಪಾಯಿಗಳು ಮೆಲ್ಲನೆ ಕರಗತೊಡಗಿದುವು. ಅತ್ತೆ ಮಾವಂದಿರಿಗೆ ಸೀರೆ ರುಮಾಲುಗಳನ್ನು ಉಡುಗೊರೆ ಕೊಟ್ಟ. ಹಡೆದ ಹೆಂಡತಿಯನ್ನು ಕಳಿಸಲು ಬಂದಾಗ ಹಾಗೇ ಕಳಿಸುವದೆಂತು? ಅವಸರದ ವೇಳೆಯಲ್ಲಿ ಚೆನ್ನಪ್ಪಸೆಟ್ಟಿಯ ಜವಳೀ ಅಂಗಡಿಗೆ ಹೋದರೆ ಆತ ಒಂದಕ್ಕೆ ಎರಡು ಬೆಲೆ ತಕ್ಕೊಳ್ಳದೆ ಕೊಡುವನೆ? ಹೀಗಾಗಿ ಸಹಜ ಐವತ್ತು ರೂಪಾಯಿಗಳು ವೆಚ್ಚವಾದುವು. ಮುಂದೆ ಮನೆಯಲ್ಲಿ ಮಗ—ಅದರಲ್ಲೂ ಚೊಚ್ಚಿಲ ಗಂಡುಮಗ—ಕೇಳುವ ದೇನು ? ಸ್ವಲ್ಪ ಕೈ ಸಡಿಲುಬಿಟ್ಟು ವೆಚ್ಚ ಮಾಡತೊಡಗಿದ. ಗಂಡನ ವ್ಯವ ಹಾರದ ಗುಟ್ಟನ್ನರಿತು ಪದ್ಮಾವತಿ ಒಂದು ದಿನ ಸಹಜ ಕೇಳಿದಳು,—

"ಬಣಿವೆ ಸುಟ್ಟು ಅಳ್ಳು ಹುರಿದು ತಿನ್ನುವವರೇ ಕಾಣುವಿರಿ."

ಹೆಂಡತಿಯ ಮಾತು ಮರ್ಮಕ್ಕೆ ತಾಕಿತು. ಇತ್ತಿತ್ತಲಾಗಿ ಪದ್ಮಾವತಿ ತುಸು ಬಿಗುವಿನಲ್ಲಿಯೇ ಇರುತ್ತಿದ್ದಳು. ತನ್ನ ಮನೆಯ ಕೆಲಸ, ಕೂಸು, ಇದರಲ್ಲಿಯೇ ಅವಳಿಗೆ ಸಾಕುಬೇಕಾಗಿ ಹೋಗುತ್ತಿದ್ದಿತು. ಮೇಲೆ ಬಾಣಂತಿ ಇವನೊಡನೆ ಮೊದಲಿನಂತೆ ಚೆಲ್ಲಾಟ ಎಲ್ಲಿಂದ ಬಂದೀತು? ನಡು ನಡುವೆ ಒಮ್ಮೊಮ್ಮೆ ಸಹಜ ಇಣಿಕಿದರೂ ಬೇಕಂತಲೇ ತಡೆಯುತ್ತಿದ್ದಳು. ಅವಳ ನಡತೆಯ ಅರ್ಥವಾಗದೆ ಒಂದೆರಡು ಸಲ ಬಾಬಣ್ಣ ಹೆಂಡತಿಗೆ ಅಂದ,—

"ನಾನೇನು ಬೇಕಂತ ಹೊಲ ಕೊಟ್ಟೆನೇನು?"

"ಬೇಕಂತ ಯಾತಕ್ಕ ಕೊಟ್ಟೀರಿ? ಆಗ ಊರಿಗೆ ಹೋದೆ. ಕಾಗದ ಬರೆದ ಕೊಟ್ಟೆ. ಈಗ ಬರುವಷ್ಟರಲ್ಲಿ ಹೊಲವನ್ನ ಮಾರಿಬಿಟ್ಟಿರಿ. ಒಂದ ಮಾತನ್ನಾದರೂ ಕೇಳಬಾರದ ನನ್ನ?" ಪದ್ಮಾವತಿ ಕೇಳಿದಳು.

"ಹೆಂಗಸರನ್ನ ಏನ ಕೇಳುವುದು ಇದರಲ್ಲಿ?"

"ಕೇಳವರನ್ನ ಕೇಳತಿದ್ದ ಆದೀರಲ್ಲ?"

ಪದ್ಮಾವತಿಯ ಈ ಮಾತಿನಲ್ಲಿ ಮುಳ್ಳಿನ ಮೊನೆ ಇದ್ದಿತು. ಅದು ಬಾಬಣ್ಣನ ಹೃದಯಕ್ಕೆ ಚುಚ್ಚದೆ ಇರಲಿಲ್ಲ. ಮನೆಯಲ್ಲಿ ಹೆಂಡತಿ ಬಂದಿದ್ದರೂ ಮಧ್ಯಾಹ್ನ ಬಾಬಣ್ಣ ಗಂಗವ್ವನ ಮನೆಯಲ್ಲಿಯೇ ಕಳೆಯುತ್ತಿದ್ದ. ಬೇಸಿಗೆಯ ದಿನಗಳು, ಅಡವಿಯ ಕೆಲಸಮಾಡಿ ದಣಿದು ಬಂದು ಅಲ್ಲಿಯೇ ಮಲಗುವವನು, ಇಳಿಹೊತ್ತಿಗೇನೇ ಮನೆಗೆ ಬರುವ. ತನ್ನ ಎತ್ತನ್ನೂ ಅಲ್ಲೇ ಕಟ್ಟಿದ್ದ. ತನ್ನ ಎತ್ತಿನ ಜೊತೆಗೆ ಅವರ ಎತ್ತಿನ ಕಾಲೊಳಗಿನ ಕಸ ಹೊಡೆಯುವುದ, ನೀರು ಕುಡಿಸುವುದು ಇವನೇ ಮಾಡಬೇಕಾಗುತ್ತಿದ್ದಿತು. ಇದನ್ನಾತ ಸಂತೋಷದಿಂದ ಮಾಡುತಿದ್ದನೆಂತಲ್ಲ. ಗಂಗವ್ವ ಎತ್ತಿನ ಹಣಕ್ಕೆ ಬೇಡಿಕೆ ಮುಂದೆ ಚಾಚಿದ್ದಳು. ಕೊನೆಗೆ ಜಗಳ ಆಗಿ ಎತ್ತನ್ನೇ ತನ್ನ ಮನೆಯಲ್ಲಿ ಕಟ್ಟಿಕೊಂಡೂ ಬಿಟ್ಟಳು. ಆದರೂ ಅದು ಬಾಬಣ್ಣನ ಎತ್ತು. ಅದರಿಂದ ಅತ ದುಡಿಯಬೇಕು, ಇಬ್ಬರ ಹೊಲ ಹರಗಬೇಕು. ಜನರು "ಸುಂದರಿಗಾಗಿ ನೇಗಿಲ ತೆಗೆಯಲಿಕ್ಕೆ ನಿಂತ" ಎಂದರೂ ಅನ್ನಿಸಿಕೊಳ್ಳಬೇಕು. ಜನರ ಮಾತೇನು ಸಂಪೂರ್ಣ ಸುಳ್ಳಲ್ಲ. ಸುಂದರಿ ನಗುತ್ತ ಕೊಟ್ಟಿಗೆಯೊಳಗಿಂದ

ಒಮ್ಮೆ ಹಾಯ್ದು ಹೋದರೂ ಬಾಬಣ್ಣನಿಗೆ ಸಂತಸವಾಗುವುದು. ಸಿಳ್ಳೆ ಹಾಕುತ್ತ ಎತ್ತುಗಳೊಡನೆ ಅವರ ಎಮ್ಮೆಗೂ ಸಾಯಂಕಾಲದ ನೀರು ಕುಡಿಸುವ. ಅದರಲ್ಲಿ ಮನೆಯೊಳಗೆ ಈ ಪದ್ಮಾವತಿಯ ಬಿಗುವಿನ ನಡತೆ. ಇದರಿಂದ ಅವನ ಮನಸ್ಸು ಮತ್ತಿಷ್ಟು ಗಂಗವ್ವನ ಮನೆಯ ಕಡೆಗೆ ಸೆಳೆಯುವಂತಾಗಿದ್ದಿತು.

ಇತ್ತ ಪದ್ಮಾವತಿಯ ಮನಸ್ಸು ಒಳಗೊಳಗೇ ಇನ್ನಿಷ್ಟು ಕುದುಪುಗೊಳ್ಳುತ ಸಾಗಿತ್ತು. ಆದರೂ ಬಾಬಣ್ಣನನ್ನು ತನ್ನ ಅಂಕಿತದಲ್ಲಿ ತರುವ ಯೋಚನೆ ಮಾತ್ರ ಹಗಲಿರುಳು ಅವಳಿಗೆ ಹತ್ತಿದ್ದಿತು. ಒಂದು ದಿನ ರಾತ್ರಿಯ ಊಟ ತೀರಿಸಿಕೊಂಡು ಬಾಬಣ್ಣ ಹೊರಗೆ ಹೊರಟ. ಪದ್ಮಾವತಿ ಅವನ ಲಕ್ಷಣವನ್ನು ಅರಿತು ಹೇಳಿದಳು,—

"ನೀವು ಬಹಳ ರಾತ್ರಿ ಆಗುವ ವರೆಗೆ ಹೊರಗ ಹೋಗತೀರಿ. ನನಗ ಮನೆಯಲ್ಲಿ ಅಂಜಿಕೆ ಬರತದ."

"ಎಂದಿಲ್ಲದ ಅಂಜಿಕೆ ಈಗs ಬರಲಿಕ್ಕೆ ಹತ್ತಿತೇನು?"

ಬಿಗುಹಿನಿಂದ ಕೇಳಿದ ಬಾಬಣ್ಣ.

"ಒಂದು ದಿನ ಗಂಗವ್ವನ ಮನೆಗೆ ಹೋಗದಿದ್ದರೆ ಆಗುವದಿಲ್ಲೇನು?"

ಪ್ರತಿಭಟಿಸಿ ಪದ್ಮಾವತಿ ಕೇಳಿದಳು.

"ಅಲ್ಲಿ ಯಾರ ನಿಮ್ಮ ಅಪ್ಪ ಹೋಗಿ ಎತ್ತಿಗೆ ಕಾಳ ತಿನಸತಾನ ಏನ?"

ಬಿರುಸಿನಿಂದ ಬಾಬಣ್ಣನ ಬಾಯಿಂದ ಮಾತು ಬಂತು.

"ಎತ್ತ ಇಲ್ಲೇ ತಂದ ಕಟ್ಟಿಕೊಳ್ಳಬೇಕು?"

"ಕಟ್ಟಿಕೊಳ್ಳತಾರ ಇಲ್ಲಿ. ಅಂಥಾ ಸಾವಕಾರತಿ ನೀ."

ಮುಖ ಕೆಂಪಗೆಮಾಡಿ ನುಡಿದ ಬಾಬಣ್ಣ.

"ನೀವು ಬೇಕಾದ್ದ ಹೇಳಿರಿ. ನಾ ಇಂದ ಹೋಗಗೊಡುವದಿಲ್ಲ ನೋಡು."

ಖಂಡಿತವಾಗಿ ಪದ್ಮಾವತಿ ಹೇಳಿದಳು.

"ಅಷ್ಟೇಕೆ ನಿನ್ನ ಹಟಾ?"

"ನಿಮ್ಮದೇಕೆ ಇಷ್ಟ ಹಟಾ ಇದ್ದೀತು?"

ಮಾತಿಗೆ ಮಾತು ಮಲಕು ಬಿದ್ದು ಬಾಬಣ್ಣ ಮನೆಯಲ್ಲಿ ಉಳಿದ. ಆ ದಿನ ತನ್ನ ಪತಿ ತನ್ನ ಸ್ವಾಧೀನ ಬಂದನೆಂದು ಹಿರಿಹಿರಿ ಹಿಗ್ಗಿದಳು ಪದ್ಮಾವತಿ. ಇನ್ನೂ ಹಡೆದು ನಾಲ್ಕು ತಿಂಗಳುಗಳೂ ಕೂಡ ಆಗಿಲ್ಲವೆಂಬುದನ್ನು ಅವಳು ಗಮನಿಸಲಿಲ್ಲ. ಬಾಬಣ್ಣ ಮಾತ್ರ ಅಂದು ರಾತ್ರಿ ಬಾಯಿಬಿಚ್ಚಿ ಹೆಂಡತಿಗೆ ಎಲ್ಲವನ್ನೂ ಹೇಳಿದ. ಅಲ್ಲಿ ಎತ್ತು ಕಟ್ಟಬೇಕಾದ ಕಾರಣ, ತಾನು ದುಡಿಯಬೇಕಾದ ಪ್ರಸಂಗ, ಮನೆತನ ನಡೆಸಲು ಬೇಕಾದ ಸಧ್ಯಕ್ಕಿನ ಆರ್ಥಿಕ ಸಹಾಯ, ಎಲ್ಲವನ್ನೂ ವಿವರಿಸಿದ ಪದ್ಮಾವತಿ ಕೇಳಿಕೊಂಡು ಸುಮ್ಮನಾದಳು ಗಂಭೀರವದನಳಾಗಿ ವಿಚಾರದಲ್ಲಿ ಮಗ್ನಳಾದಳು.

೭

ಕೆಲವು ದಿನಗಳು ಜಾರಿದುವು. ಬಾಳವ್ವ ಸೋದರಳಿಯನನ್ನು ನೋಡಲಿಕ್ಕೆಂದು ತವರುಮನೆಗೆ ಬಂದಳು. ಬರುವಾಗ ಕೂಸಿಗೆ ಅಂಗಿ ಕುಲಾಯಿಯನ್ನೂ ಪದ್ಮಾವತಿಗೆ ಕುಪ್ಪಸವನ್ನೂ ತಂದಿದ್ದಳು. ನಾಲ್ಕೆಂಟು ದಿನ ಅಣ್ಣನ ಮನೆಯಲ್ಲಿ ನಿಂತಳು. ಈಗ ಅವಳು ಮೂರು ತಿಂಗಳ ಬಸುರಿ. ಮೈನೆರೆದು ಏಳು ವರ್ಷಗಳ ಮೇಲಿನ ಗರ್ಭವದು. ಎಲ್ಲರಿಗೂ ಸಂತಸ. ಅವಳ ಗಂಡನು ಮಕ್ಕಳಾಗದುದಕ್ಕೆ ಇನ್ನೊಂದು ಮದುವೆಯಾಗುವ ಯೋಚನೆಯಲ್ಲಿದ್ದ. ಒಂದೆರಡು ಕಡೆಗೆ ಹೆಣ್ಣನ್ನೂ ನೋಡಿ ಬಂದಿದ್ದ. ಅಷ್ಟರಲ್ಲಿ ಬಾಳವ್ವ ಬಸಿರಾದಳು. ಈ ಸುದ್ದಿಯಿಂದ ಬಾಬಣ್ಣನಿಗೂ ತುಂಬ ಸಂತೋಷವಾಗಿದ್ದಿತು. ಅಕ್ಕನ ಬಾಳುವೆ ಒಳ್ಳೆಯದಾಯಿತು. ಇನ್ನು ಸವತಿಯನ್ನು ತರುವ ಹೆದರಿಕೆಯಿಲ್ಲ, ಎಂದು ನಿಶ್ಚಿಂತನಾದ. ಅದರ ಜೊತೆಗೇನೇ ಚೊಚ್ಚಿಲ ಬಸುರಿಗೆ ಮಾಡಬೇಕಾದ ಬುತ್ತಿ ರೊಟ್ಟಿಯ ಚಿಂತೆ ಅವನಿಗೆ ಹತ್ತಿತು.

ತಾಯಿ ಇಲ್ಲದ ತವರು. ತಮ್ಮನೊಬ್ಬ ಇನ್ನೂ ಹುಡುಗ. ನಾನೇ ಕೇಳಿ ಮಾಡಿಸಿಕೊಳ್ಳದಿದ್ದರೆ ಮಾಡುವವರಾರು? ಎಂದು ಯೋಚಿಸಿಯೇ ಬಾಳವ್ವ ಈಗ ಹುಡಗನನ್ನು ನೋಡುವ ನಿಮಿತ್ತ ಮಾಡಿ ಊರಿಗೆ ಬಂದಿದ್ದಳು. ಎರಡು ಮೂರು ದಿನಗಳು ಹೋದುವು. ಪದ್ಮಾವತಿಯೂ ಅತ್ತಿಗೆಗೆ ಬಯಕೆ ಎಂದು ಸವಿಸವಿ ತಿನಸು ಮಾಡಿ ಹಾಕಿದಳು. ಆದರದಿಂದ ಕಂಡಳು. ಆದರೆ ಬುತ್ತಿರೊಟ್ಟಿಯ ಮಾತನ್ನೂ ತೆಗೆಯಲಿಲ್ಲ, ಹೆಂಗಿಗೆ ತರುವ ಸುದ್ದಿಯನ್ನೂ ಎತ್ತಲಿಲ್ಲ. ಬಾಳವ್ವನೂ ಮದುವೆಯಾದ ಮೇಲೆ ತಮ್ಮ

ತನ್ನವನಲ್ಲ ಎಂದರಿತು ಪದ್ಮಾವತಿಯು ಕೂಸಿಗೆ ನೀರೆರೆಯುವುದು, ಅವಳು ಸ್ನಾನ ಮಾಡುವಾಗ ಬೆನ್ನು ತಿಕ್ಕುವುದು ಮಾಡಿ, ನಾದಿನಿಯ ಮನಸ್ಸನ್ನು ಮೃದುಮಾಡಿದಳು ಆಮೇಲೆ ಒಂದು ದಿನ ತಾನು ಊರಿಗೆ ಹೊರಡುವ ಮಾತು ತೆಗೆದಳು. ಅದಕ್ಕೆ ಬಾಬಣ್ಣ ಹೇಳಿದ,—

“ನಾಳೆ ರವಿವಾರ ಸಂತೆಗೆ ಹೋಗಿ ಸೀರೆಯೊಂದನ್ನ ತರತೇನೆ. ಸೋಮವಾರ ಹೋಗುವಿಯಂತೆ.”

ಸಂತೆಯಿಂದ ಸೀರೆ ತರಲಿಕ್ಕೆ ಕೈಯಲ್ಲಿ ಹಣವಿಲ್ಲದಿದ್ದರೂ ಬಾಬಣ್ಣ ಈ ರೀತಿ ಹೇಳಬೇಕಾಯಿತು.

“ಇಲ್ಲಿ ಚನ್ನಪ್ಪ ಸೆಟ್ಟಿ ಅಡ್ಡ ತಿಡ್ಡ ಹೇಳತಾನ” ಪದ್ಮಾವತಿಯೂ ಪತಿಯ ಮಾತಿಗೆ ದನಿಗೂಡಿಸಿದಳು.

“ಈಗ ಯಾತಕ್ಕ ಸೀರಿ, ಕುಪ್ಪಸ ಅಂತ ಮೇಲಿಂದ ಮೇಲೆ ಖರ್ಚ. ಇನ್ನೆರಡ ತಿಂಗಳದೊಳಗ ಬುತ್ತರೊಟ್ಟಿ ಅಂತ ಬಂತು. ಆಗ ಒಂದ ಸೀರೆ ತಕ್ಕೊಳ್ಳಲಿಕ್ಕೆ ಬೇಕು. ಮುಂದೆ ಹಡೆಯುವ ಖರ್ಚ. ಅದೇನ ಬೇಡ. ನಾನು ಈ ಸಲ ಹೀಗೇ ಹೋಗತೇನಿ. ಮೊನ್ನೇ ಹೊಲಾ ಬೇರೆ ಕೊಟ್ಟಿರುವಿ.”

ಹೀಗೆ ತನ್ನ ಸೋಬಾನ ಹಾಡಿದಳು

“ಇರಲಿ ಅಲ್ಲ. ನನ್ನ ತಾಪತ್ರಯ ಹಾಗೇ ಇದ್ದೇ ಇರತದ. ನಿನ್ನ ಜನ್ಮದಂಡೆಗೆಹತ್ತುವದು ಹೆಚ್ಚಿನದೋ ? ನಾ ಖರ್ಚ ಮಾಡುವದು ಹೆಚ್ಚಿನದೋ ಆಗತದ ಒಂದರೊಳಗೊಂದ ಹಾಗೇ.”

ತಮ್ಮನ ಮಾತಿದು. ಪದ್ಮಾವತಿ ಮಾತ್ರ ಮೌನ ತಾಳಿದಳು. ಇದನ್ನು ಕಂಡು ಬಾಳವ್ವ ನುಡಿದಳು,—

“ಈಗ ಮನೆಯೊಳಗ ಇಪ್ಪರೆ ಒಂದು ಕುಪ್ಪಸ ಕೊಡು, ಅದನ್ನ ತಗೊಂಡ ಹೋಗಿಬಿಡತೇನ. ನಾಳೆ ಇದರೊಳಗ ನಿಮಗ ನೆಗೆದಷ್ಟು ಬುತ್ತರೊಟ್ಟಿ ಮಾಡೀರಂತ. ಅಲ್ಲೇನವ್ವ ಪದ್ಮವ್ವ?” ಎಂದು ಮೃದು ನುಡಿಯಿಂದಲೇ ಕೇಳಿದಳು. ಪದ್ಮಾವತಿಯು ಒಪ್ಪಿಗೆ ಪಡೆಯುವ ಆಶೆ ಅವಳಿಗೆ

“ಮಾಡೋಣಲ್ಲ ಆಪಕೇನ ?”

ತುಸು ಬಿಗುವಿನಲ್ಲಿಯೇ ಮಾತು ಬಂದಿತು. ಅದರಿಂದ ಬಾಳವ್ವನ ಮನಸ್ಸು ಇನ್ನಷ್ಟು ನೊಂದಿತು ಅದರಿಂದ ನಸುಕೆರಳಿದ ಸ್ವರದಲ್ಲಿ ನುಡಿದಳು. ಮಾತೂ ಸ್ವಲ್ಪ ಅಣಕದ ರೀತಿಯಲ್ಲಿತ್ತು.

"ನಿಮಗೆಲ್ಲಾ ಮಾಡಿ ಒಂದ ಕೂರಿಗೆ ಅಡವಿ ಕಳಕೊಂಡ ನನ್ನ ತಮ್ಮ. ನಮಗ ಇಷ್ಟೂ ಮಾಡಿಸಿಕೊಳ್ಳುವ ಹಕ್ಕ ಇಲ್ಲೇನ. ನನ್ನ ಅವ್ವ ಅಪ್ಪನ ಹೊಲದ ಮೇಲೇ ನೀವು ಇಷ್ಟ ಚೈನಿ ಮಾಡತೀರಿ ಅಲ್ಲ?"

"ಅದಕ್ಕ ಅನ್ನಲಿಲ್ಲ ತಾಯಿ ನಾ. ನನಗೂ ಯಾಕೋ ಈ ಸಾರೆ ಕಡೆಗಾಗೋದು ಎಂಟ ದಿನ ಮುಂದ ಹೋಗೇದ. ಮೈ ಜಡ ಆಗೇದ. ನಮಗ ಮಾಡಿದರು ಅನಲಿಕ್ಕೆ ನಾಯೇನ ತವರ ಮನೆಗೆ ಗಂಟ ಕಟ್ಟಿಕೊಂಡ ಕಟ್ಟಿಕೊಂಡ ಹೋಗಿಲ್ಲ."

ಪದ್ಮಾವತಿಯ ಮಾತನ್ನು ನಡುವೆಯೇ ತಡೆದು ಬಾಳವ್ವ ಕೇಳಿದಳು,

"ಹಡೆದ ಮೇಲೆ ಎಷ್ಟ ಸಾರೆ ಹೊರಗ ಕೂತಿದ್ದಿ?"

ದನಿಯಲ್ಲಿ ಉಲ್ಲಾಸವಿರಲಿಲ್ಲ. ಮನೆಯಲ್ಲಿ ನಾದಿನಿ ಬಸಿರು ಆದ ಮೇಲೆ ತನ್ನನ್ನು ಹಡೆಯಲಿಕ್ಕೆ ತರಲಿಕ್ಕೆ ಬರುವದಿಲ್ಲ, ಎಂಬ ಕಾರಣವೇ ಬಾಳವ್ವನ ನಿರುತ್ಸಾಹಕ್ಕೆ ಕಾರಣವಾಗಿದ್ದಿತು.

"ಒಮ್ಮೇ ಏನೋ ಮುಖ ತೋರಿಸಿದಂತೆ ಮಾಡಿತ್ತು. ಇಷ್ಟ ಲಗೂನೆ ಯಾರಿಗೆ ಬೇಕಾಗಿತ್ತ ತಾಯಿ?" ಪದ್ಮಾವತಿಯ ಬೇಸರವಿದು.

"ಫಲಾ ಇದ್ದಮೇಲೆ ಆಗೋವ ಅಲ್ಲ. ನನ್ನ ತಮ್ಮ ಒಬ್ಬನೇ ಇದ್ದಾನ. ಹತ್ತೆಂಟ ಮಕ್ಕಳ ಆಗಲಿಯವ್ವ." ಬೇಕೆಂತಲೇ ಬಾಯಿತುಂಬ ಬಾಳವ್ವ ಹರಿಸಿದಳು.

ಏನಾದರೂ ಬಾಳವ್ವ ಊರಿಗೆ ಹೋಗುವಷ್ಟರಲ್ಲಿ ಬಾಬಣ್ಣ ನಿಶ್ಚಯಿಸಿಯೇ ಬಿಟ್ಟ. ತನ್ನ ಹೆಂಡತಿ ಬಸಿರಿರಲಿ, ಇಲ್ಲದಿರಲಿ ಬಾಳವ್ವನನ್ನು ಹಡೆಯುಲಿಕ್ಕೆ ತಮ್ಮ ಮನೆಗೆ ಕರೆದು ತರುವುದು. ಇದ್ದ, ಅಕ್ಕ ಒಬ್ಬಾಕೆ; ಹಕ್ಕಿ ಪಕ್ಕಿಯಂತೆ ನಾವಿಬ್ಬರೇ ಜೊತೆ. ಒಳ್ಳೆಯ ರೀತಿಯಿಂದ ಬುತ್ತಿರೊಟ್ಟಿಯನ್ನೂ ಮಾಡುವುದು. ಆ ರೀತಿ ಬಾಳವ್ವನಿಗೂ ಹೇಳಿ ಸಮಾಧಾನ ಮಾಡಿ ಕಳುಹಿಸಿ ಕೊಟ್ಟ.

ಮುಂದೆ ಒಂದೆರಡು ತಿಂಗಳು ಕಳೆಯುತ್ತಲೇ ಅಕ್ಕನ ಬುತ್ತರೊಟ್ಟಿಯ ಸಿದ್ಧತೆಗೆ ತೊಡಗಬೇಕಾಯಿತು. ತಾತಪ್ಪನನ್ನು ಒಂದು ಮಾತು ಸಲಹೆ ಕೇಳಬೇಕೆಂದು ಕೇಳಿದ.

" ನೋಡಪ್ಪ, ನಿನ್ನ ಶಕ್ತಿ ಇದ್ದಷ್ಟ ಮಾಡು. ನಾ ಏನ ಹೇಳುವವ ಇದರಲ್ಲಿ? ಬೇಡ ಅಂದರ ಬಾಳವ್ವ ಸಿಟ್ಟಿಗೆ ಬರುವಾಕೆ, ಮಾಡು ಅಂದರ ನೀ ಸಾಯುವಿ. ಇದನ್ನ ನೀನೇ ವಿಚಾರಮಾಡಿ ನೋಡಬೇಕು."

ಎಂದು ಹೇಳಿ ಮುಗಿಸಿಬಿಟ್ಟ. ದಿನಾಲು ಊಟಕ್ಕೇನೋ ಎರಡು ಹೊತ್ತು ತಾತಪ್ಪ ಮೊದಲಿನಂತೆಯೇ ಬರುತ್ತಿದ್ದ. ಆಗ ಪದ್ಮಾವತಿಯ ಕೂಸನ್ನಷ್ಟು ಎತ್ತಿ ಆಡಿಸಿ ಮುದ್ದುಕೊಟ್ಟು ಹೋಗುವ. ಎಲ್ಲಿಯಾದರೂ ಸಂತೆಗೆ ಹೋಗಿ ಬಂದರೆ ದೋತರ ಪದರಿನಲ್ಲಿ ಬೆಲ್ಲವನ್ನಾಗಲಿ, ಅಕ್ಕಿಯನ್ನಾಗಲಿ ಕಟ್ಟಿ ತಂದು ಇತ್ತಿತ್ತಲಾಗಿ ಮನೆಯಲ್ಲಿ ಸುರಿಯುವ. ಅಳಿಯನ ಪ್ರಪಂಚದ ನಾಜೂಕುತನ ಅವನಿಗೂ ಗೊತ್ತಾಗಿತ್ತು.

ಹೀಗೆ ಸಾಮಾನು ತಂದ ಸರತಿಗೊಮ್ಮೆ ಪದ್ಮಾವತಿ ಅನ್ನುವಳು, —

" ಈಗ ಯಾತಕ್ಕ ತರತಿದ್ದಿರಿ ಇದನ್ನ ? "

" ಸಹಜ ಸೋಯಿ ಕಂಡಿತು ತಂಡೆ "

ಇಬ್ಬರ ಮಾತುಗಳೂ ಔಪಚಾರಿಕವಾಗಿಯೇ ನಡೆಯುತ್ತಿದ್ದವು. ಪ್ರಪಂಚ ಹೇಗೋ ಕುಂಟುತ್ತ ಸಾಗಿತ್ತು. ಅದರಲ್ಲಿ ಬಾಬಣ್ಣ ಚೆನ್ನಪ್ಪಸೆಟ್ಟರಲ್ಲಿ ಸಾಲಮಾಡಿ ಬುತ್ತರೊಟ್ಟಿಯ ಸಾಮಾನೂ ಸೀರೆ ಕುಪ್ಪಸ ಎಲ್ಲವನ್ನೂ ತಂದ. ಸೆಟ್ಟರ ಅಂಗಡಿಗಳೆರಡು; ಒಂದು ಕಿರಾಣಿ ಅಂಗಡಿ, ಇನ್ನೊಂದು ಜವಳಿ ಅಂಗಡಿ. ಅದರಿಂದ ಬಾಬಣ್ಣ ಯಾವುದಕ್ಕೂ ಬೇರೆಯವರ ಕಡೆಗೆ ಹೋಗಬೇಕಾಗಿರಲಿಲ್ಲ. ಸುಗ್ಗಿಯಾದಮೇಲೆ ಒಮ್ಮೆಲೇ ಎಲ್ಲ ತೀರಿಸುವೆನೆಂದು ಹೇಳಿ ತನ್ನ ಖಾತೆಯನ್ನೇ ಇಡಿಸಿದ

ಈ ಕೆಲಸಕ್ಕೆಲ್ಲ ಸಲಹೆಗಾರಳೆಂದು ಚಂದ್ರವ್ವನನ್ನು ನಾಲ್ಕುದಿನ ಮನೆಯಲ್ಲಿ ತಂದು ಇಟ್ಟುಕೊಂಡ. ಅವಳು ಇವನ ಈ ವೆಚ್ಚದ ರೀತಿಗೆ ಒಪ್ಪದಿದ್ದರೂ ಬಂದಳು. ಮನದಲ್ಲಿ ಇವನು ಹೊಲ ಮಾರಿ ಖರ್ಚ ಮಾಡತಾನ. ಹೆಣ್ಮಕ್ಕಳಿಗೆ ಬೇಡ? ಎಂದೂ ಒಮ್ಮೆ ಅಂದುಕೊಂಡು ಸಿಸ್ತಿನಿಂದಲೇ ಎಲ್ಲ

ಸಾಮಾನು ಮಾಡತೊಡಗಿದಳು; ಸಂಗಡ ಬಾಳವ್ವನ ಊರಿಗೆ ಹೊರಡಲೂ ಸಿದ್ಧವಾದಳು. ಹಿಡಿದ ಕೆಲಸ ಕೊನೆಮುಟ್ಟಿಸಬೇಕೆಂದು ಅವಳ ಆಶೆಯಾಗಿದ್ದಿತು.

ಕೇವಲ ಚಂದ್ರವ್ವನ ಮನೆಯವರನ್ನೇ ಕರೆದರೆ ಹೇಗೆಂದು ಬಾಬಣ್ಣ ಗಂಗವ್ವನನ್ನೂ ಕರೆಯಲಿಕ್ಕೆ ಹೋದ.

" ಇದಕ್ಕೆಲ್ಲ ಖರ್ಚ ಮಾಡಲಿಕ್ಕೆ ಅದ. ನಮ್ಮ ಎತ್ತಿನ ರೂಪಾಯಿ ಕೊಡಲಿಕ್ಕೆ ಇಲ್ಲೇನ? ನಮ್ಮ ರೂಪಾಯಿ ನಮಗ ಇಂದ ಬೇಕನೋಡು. ನಿನ್ನ ಎತ್ತ ನಿಮ್ಮ ಮನೆಗೆ ತಕ್ಕೊಂಡು ಹೋಗು."

ಎಂದು ಗಂಗವ್ವ ಖಂಡಿತ ಸ್ವರದಲ್ಲಿ ಬಾಬಣ್ಣನಿಗೆ ಹೇಳಿದಳು. ಅದಕ್ಕೆ ಕಾರಣವೂ ಇಲ್ಲದಿರಲಿಲ್ಲ. ಬುತ್ತರೊಟ್ಟಿಯ ಸಿದ್ಧತೆ ಮಾಡಲಿಕ್ಕೆ ತಾನೂ ತನ್ನ ಮಗಳೂ ನಾಲ್ಕುದಿನ ಹೋಗಿ ತಿಂದುಂಡು ಬರಬೇಕೆಂದು ಯೋಚಿಸಿದ್ದರವರು. ಬರುವಾಗ ಎರಡು ಕುಪ್ಪಸಗಳಂತೂ ಬಂದೇಬರುವವೆಂಬುದು ಅವರ ಲೆಕ್ಕ. ಅದೆಲ್ಲ ತಪ್ಪಿದ್ದಿತು: ಅದಕ್ಕಾಗಿ ಈ ಖಂಡಿತವಾದ. ಇದನ್ನರಿತ ತಾತಪ್ಪ ತಟ್ಟನೆ ನಡುವೆ ನುಡಿದ,—

" ಈಗ ಎಲ್ಲಿಂದ ರೂಪಾಯಿ ತರತಾನ? ಅದೇ ಖರ್ಚ ಅವನಿಗೆ ಹೆಚ್ಚಾಗಿ ಹೋಗಿದೆ."

ಈ ಮಾತಿಗಾಗಿ ಗಂಗವ್ವ ತಾತಪ್ಪನಲ್ಲಿ ದೊಡ್ಡ ಜಗಳವೇ ಆಯಿತು. ಮೂರು ದಿನ ಮಾತನ್ನೂ ಬಿಟ್ಟರು. ಬಿಗುವಿನಲ್ಲಿ ಗಂಗವ್ವ ಮನೆಯಲ್ಲಿ ವರ್ತಿಸತೊಡಗಿದಳು. ಕ್ಷಣಕ್ಷಣಕ್ಕೆ ಸುಂದರಿಯ ಮೇಲೆ ಸಿಟ್ಟು, ಕೊಡ ತಂಬಿಗೆ ಅಪ್ಪಳಿಸುವುದು ನಡೆಯಿತು. ಇದು ಅಪ್ಪಣ್ಣನಿಗೆ ಸಹನವಾಗಲಿಲ್ಲ. ತನ್ನ ಹೆಂಡತಿಗೂ ತಾತಪ್ಪನಿಗೂ ಸಂಧಿಮಾಡುವ ಉದ್ದೇಶದಿಂದ ನುಡಿದನಾತ,—

" ಕೊಡುವಾಗ ಕೊಡುವ, ಈಗ ಹೀಗೇಕೆ ಮಾಡುವಿ? ಹ್ಯಾಗಾದರ ತಾತಪ್ಪ ಮೊದಲೇ ಕೊಡಬಾರದಪ್ಪ ಈಕೆ? ಮೊದಲ ಕೊಡುವುದು. ಈಗ ಹೀಗೆ ಮನೆಯೊಳಗ ಧಡಪಡ ಮಾಡಿದರ?"

ತಾತಪ್ಪ ಏನಾದರೂ ಹೇಳಿಯಾನೆಂದು ಅವನನ್ನುದ್ದೇಶಿಸಿ ಹೇಳಿದ. ಗಂಗವ್ವನೂ ಅಲ್ಲೇ ಇದ್ದಳು. ಗಂಡನ ಮಾತನ್ನು ತಡೆದು ಸಿಟ್ಟಿನಿಂದ ಅಂದಳು:

" ನಿನಗೇನ ತಿಳಿತದ ಹೋಗ ಇದರೊಳಗ. ನಡುವ ತಂದೊಂದ ಅಕ್ಕಿ ಕಾಳ ಇರಲಿ ಅಂತ ಬರಶಾನ "

ಹೆಂಡತಿಯ ಮಾತು ಅಪ್ಪಣ್ಣನ ಮರ್ಮಕ್ಕೆ ನಟ್ಟಿತು. ಮುಖ ಸಪ್ಪಗೆ ಮಾಡಿ ಹೊರಗೆ ಹೋಗುತ್ತ ಹೇಳಿದ :

" ಬಹಳ ತಿಳದಾಕಿ. ಮಾಡಿಕೋ ಹಾಗಾದರ. ಎಲ್ಲಾರ ಕೂಡ ಕೆಟ್ಟೆಳಗಿ ಕುಳಿತ. "

" ಮಾಡಕೊಳ್ಳು ಹೊತ್ತಿನೊಳಗ ಮಾಡಿಕೊಳ್ಳತಾರಲ್ಲ. ನೀ ಏನ ಹೇಳುವಿ ಅದನ್ನ ?" ಗಂಗವ್ವ ಧೂತ್ಕರಿಸಿದಳು.

ಕೊನೆಗೂ ಗಂಗವ್ವ ಹಟ ಬಿಡಲಿಲ್ಲ ತಾತಪ್ಪನೇ ಸೋತು ಬಾಬಣ್ಣ ನಿಗೆ ಎಲ್ಲಿಂದಾದರೂ ಹಣ ತಂದು ಕೊಡಲು ಹೇಳಿದ. ಬಾಬಣ್ಣನಿಗೆ ಇನ್ನಾರು ಗತಿ? ಸೆಟ್ಟರ ಕಡೆಗೇನೇ ಹೋದ ಅವರು ಮೊದಮೊದಲು ಅನುಮಾನಿಸಿದರು. ಇವನ ಆಗ್ರಹ ಹೆಚ್ಚಾಗಲು "ಎಲ್ಲ ಕೂಡಿಸಿ ಐನೂರು ರೂಪಾಯಿಗಳ ಕಾಗದ ಬರೆದುಕೊಡು, ಹೊಲ ಹಚ್ಚಿ ನೋಂದ ಮಾಡಿ ಸೋಣ. ಅಂದರೆ ಶಕ್ಯವಾದರೆ ನೋಡತೇನೆ " ಎಂದು ಹೇಳಿದರು. ಈ ಸಂಗತಿಯನ್ನು ಪದ್ಮಾವತಿಯ ಮುಂದೆ ಬಂದು ಹೇಳಿದ ಬಾಬಣ್ಣ. ಅವಳು ಎತ್ತಸ್ಸೇ ಮಾಡಲಿಕ್ಕೆ ಸೂಚಿಸಿದಳು. ಆದರೂ ಗಂಗವ್ವನ ಸಾಲ ಬಗೆ ಹರಿಯುವಂತಿರಲಿಲ್ಲ. ಅಲ್ಲದೆ ನಾಳೆ ಬೆಳಗಾದರೆ ಒಕ್ಕಲತನ ಕುಂಠಿತವಾಗು ವುದು. ಎಂದೆಲ್ಲ ಯೋಚಿಸಿ ಕಾಗದ ಬರೆದುಕೊಟ್ಟು ಸಾಲ ತರುವುದೇ ನಿಶ್ಚಿತವೆಂದು ನಿರ್ಣಯಿಸಿದ. ಆಗ ಪದ್ಮಾವತಿ ಪ್ರಶ್ನೆ ಹಾಕಿದಳು,—

" ಐನೂರು ಏತಕ್ಕೆ? "

" ನೂರಿನ್ನೂರು ರೂಪಾಯಿಗಳ ಸಾಮಾನ ಆಗಿದೆ. ಗಂಗವ್ವನಿಗೆ ಕೊಡಲಿಕ್ಕೆ ನೂರೈವತ್ತು. ಮೇಲೆ ಹೆಚ್ಚಿಗೆ ಹಾಕಿ ಕಾಗದ ಬರಸಕೊಳ್ಳ ತಾರಂತ ಸೆಟ್ಟರು. " ವಿವರಿಸಿದ ಬಾಬಣ್ಣ.

" ಎಷ್ಟು ?"

" ನೂರ ರೂಪಾಯಿ! "

" ಅದಕ್ಕೂ ಬಡ್ಡಿ ಏನು? "

" ಇಲ್ಲ. ಸುಮ್ಮನೆ ಕಾಗದದಲ್ಲಿ ಬರೆಯೋದು. ಕೊಡುವಂತಿಲ್ಲ, ತಕ್ಕೊಳ್ಳುವಂತಿಲ್ಲ.

"ನೋಡರಿ ಮತ್ತ ! ಹಿಂದಿನಿಂದ ಸೆಟ್ಟರ ಕೈ ಹೆಚ್ಚಿಯಾರು ?"

"ಇಲ್ಲ. ಅದೊಂದ ಪದ್ಧತಿ ಇರತದ."

ಎಂದು ಬಾಬಣ್ಣ ಹೆಂಡತಿಗೆ ಹೇಳಿ ಸುಮ್ಮನಾಗಿಸಿದ. ಸದ್ಯಕ್ಕೆ ಹೇಗಾದರೂ ತೊಡಕು ಬಿಟ್ಟಿದ್ದರೆ ಅವನಿಗೆ ಸಾಕಾಗಿತ್ತು. ಹಣ ತಂದು ಗಂಗವ್ವನ ಸಾಲ ಕಳೆದ. ಆಗ ಅವಳು ಬುತ್ತಿರೊಟ್ಟಿ ಮಾಡಲು ಮಗಳೊಡನೆ ಗಾಡಿ ಹತ್ತಿದಳು. ಅಪ್ಪಣ್ಣ ಗಾಡಿ ಹೊಡೆಯಲು ಸಿದ್ಧನಾಗಿ ಬಂದ. ತಾತಪ್ಪ ನಂತೂ ಮೇಲ್ವಿಚಾರಣೆಗೆ ಇದ್ದೇ ಇದ್ದ.

ಇದಕ್ಕೆಲ್ಲ ಪದ್ಮಾವತಿ ಒಪ್ಪತಕ್ಕವಳಲ್ಲವಾದರೂ ಒಮ್ಮೆ ಗಂಗವ್ವನ ಮನೆಯ ಸಂಬಂಧ ಕಡಿದುಹೋಗಲಿ. ನಮ್ಮ ಎತ್ತು ನಮ್ಮ ಮನೆಗೆ ಬರಲಿ. ಬೇಕಾದರೆ ಮುಂದೆ ಚಂದ್ರಪ್ಪ ಆಬಚಿಯುವರಲ್ಲಿ ಎತ್ತಿನ ಜೋತಿ ಮಾಡಿದರಾಯಿತು. ಬಾಬಣ್ಣ ಅವರ ಮನೆಗೆ ಹೋಗುವುದು ತಪ್ಪಲಿ ಎಂದುಕೊಂಡಿದ್ದಳು. ಕೊನೆಗೆ ಬುತ್ತಿರೊಟ್ಟಿಯ ಕಾರ್ಯಕ್ರಮದಲ್ಲಿ ಗಂಗವ್ವನ ಮನೆಯವರ ಕೈಯೇ ಹೆಚ್ಚಾಗಿ ಉಳಿಯಲು ಪದ್ಮಾವತಿ ಸಿಡಿಮಿಡಿಗೊಂಡಳು, ಸಿಡುಕಿನಿಂದ ವರ್ತಿಸತೊಡಗಿದಳು. ಇದನ್ನು ಕಂಡು ಗಂಗವ್ವ ಬಾಬಣ್ಣನಿಗೆ ಹೇಳದೆ ಇರಲಿಲ್ಲ,—

"ನೀನೆಲ್ಲ ನಿನ್ನ ಅಕ್ಕನಿಗೆ ಮಾಡುವಿಯಾದರೂ ನಿನ್ನ ಹೆಂಡತಿ ಮನಸಿಗೆ ಬರುವದಿಲ್ಲ. ತನ್ನ ತವರುಮನೆಯಿಂದ ತಂದ ಮಾಡಿದಂತೆ ಮಾಡತಾಳು."

ಬಾಬಣ್ಣ ಕೇಳಿಕೊಂಡು ಸುಮ್ಮನಾಗಿಬಿಟ್ಟ. ನಡುವೆ ಸುಂದರಿ ಕಿವಿ ಹಾರಿಸಿದಳು, ನಗುನಗುತ್ತ,

"ಅವರು ಗಂಡಹೆಂಡರು ಒಂದೇ ಇದ್ದಾರೆ ಬಿಡು. ನೀ ಅತ್ತಂತೆ ಮಾಡು ನಾ ಸತ್ತಂತೆ ಮಾಡತೇನಿ ಅಂತ ಮಾತಾಡಿಕೊಂಡೇ ಮಾಡತಾರ. ಗಂಟು ಉಳಿಸಿಕೊಳ್ಳುವವರು."

"ಏನ ಬೆರಕಿ ಇದ್ದಾಳ ಇಕ್ಕಿ!"

ಅಪ್ಪಣ್ಣ ಗಾಡಿ ಹೊಡೆಯುತ್ತ ಮಗಳ ಜಾಣತನಕ್ಕೆ ತಲೆದೂಗಿದ. ಬಂಡಿಯ ಹಿಂದೆ ನಡೆಯುತ್ತಿದ್ದ ಬಾಬಣ್ಣ ಯಾವುದಕ್ಕೂ ಏನೂ ಹೇಳಲಿಲ್ಲ. ಮುಖದಮೇಲೆ ಧೂಳು ಹಾರುತ್ತಿದ್ದಿತು. ಬಿಸಿಲಲ್ಲಿ ಹಾಗೇ ಸಾಗಿದ್ದ.

ಇದನ್ನು ಕಂಡು ಮುಂದಿನ ಬಂಡಿಯಲ್ಲಿ ಕುಳಿತ ಪದ್ಮಾವತಿ ಗಂಡನನ್ನು ಕರೆದಳು.

"ಬಿಸಲೊಳಗ ಯಾತಕ್ಕ ನಡೆಯುವಿರಿ ಬರ್ರಿ. ನಿನ್ನೆ ಬೆಳತನಕ ನಿದ್ರೆ ಬೇರೆ ಇಲ್ಲ. ಗಾಡಿಯೊಳಗ ಕೂಡ ಬರ್ರಿ."

ದನಿಯಲ್ಲಿ ಪ್ರೇಮವಿತ್ತು, ಆತ್ಮೀಯತೆ ಇತ್ತು. ಸಂಕೋಚವೂ ಇಲ್ಲದಿರಲಿಲ್ಲ.

"ನಿನ್ನ ಹೆಂಡತಿ ಮಾಯೆ ಮಾಡತಾಳ ಹೋಗಪ್ಪ"

ಗಂಗವ್ವ ಚುಚ್ಚಿ ಆಡಿದಳು.

"ಇಲ್ಲೇ ಏರಲ್ಲ." ಸುಂದರಾ ಸ್ವಾಗತಿಸಿದಳು.

ಆಯಿತು. ಎರಡೂ ಬಂಡಿಗಳಲ್ಲಿ ಏರದವನಾಗಿ ಬಾಬಣ್ಣಾ ಹೇಳಿದ,—

"ಮುಂದಿನ ಹಳ್ಳ ಇಷ್ಟು ದಾಟಲಿ. ಆಮೇಲೆ ಏರತೇನ."

ಹೀಗೆ ಬಾಳವ್ವನ ಬುತ್ತರೊಟ್ಟಿಯಾಯಿತು. ತವರುಮನೆಗೆ ಅವಳು ಹಡೆಯಲೂ ಬಂದಳು. ಮನೆಯಲ್ಲಿ ಪದ್ಮಾವತಿಗೂ ಆರುತಿಂಗಳು ಬಸಿರು. ಹೊಲದಲ್ಲಿ ಸುಗ್ಗಿ. ಬೆಳೆಗಳೇನೋ ಸಾಧಾರಣವಾಗಿ ಇದ್ದವು. ಮನೆಯಲ್ಲಿ ವೆಚ್ಚ ಬೆಳೆಯಿತು. ಬಾಬಣ್ಣನ ಜ್ಯೇಷ್ಠ ಪುತ್ರ ಸೊರಗಿದ ಕೈಕಾಲು ಡುಮ್ಮು ಹೊಟ್ಟೆಯಿಂದ ಅಂಬೆಗಾಲಿಕ್ಕುವನು. ನಡುವೆ ತನ್ನ ತವರುಮನೆಯಿಂದ ಪದ್ಮಾವತಿ ಎಮ್ಮೆಯೊಂದನ್ನು ತರಿಸಿದ್ದಳು. ಅದು ತುಸು ಹಾಲನ್ನೂ ಕೊಡುತ್ತಿದ್ದಿತು. ಅದರ ಕೆಲಸ, ಅತ್ತಿಗೆಯ ಸೇವೆ, ಮಗನ ಆರೈಕೆ ಮಾಡುವದೆಂದರೆ ಪದ್ಮಾವತಿಗೆ ಸಾಕುಬೇಕಾಗಿ ಹೋಗುತ್ತಿದ್ದಿತು. ಅದರಲ್ಲಿ ಮನೆಯ ಕೆಲಸವೆಲ್ಲವೂ ಅವಳ ಮೇಲೆಯೇ. ಬಸಿರು ಹೆಂಗಸು ಉಸ್ಸೆಂದು ಕೂಡಬೇಕೆಂದರೆ ಅವಕಾಶವಿಲ್ಲ. ಆದರಿಂದ ಹೊಲದೊಳಗಿನ ಸುಗ್ಗಿಯ ಕಡೆಗೆ ಲಕ್ಷ್ಯ ಹಾಕುವದು ಅವಳಿಗೆ ಶಕ್ಯವಿರಲಿಲ್ಲ. ಆದರೂ ದಿನಕ್ಕೊಮ್ಮೆ ಹೊಲಕ್ಕೆ ಎಮ್ಮೆಯನ್ನು ಹೊಡೆದುಕೊಂಡು ಹೋಗಿ, ಗಂಡನ ಬುತ್ತಿಯನ್ನು ಕೊಟ್ಟು ಬರುತ್ತಿದ್ದಳು. ಬರುವಾಗ ಮೇವಿನ ಹೊರೆಯನ್ನೂ ತರುತ್ತಿದ್ದಳು.

ಪದ್ಮಾವತಿಯು ಪ್ರಪಂಚದೊಳಗೆ ತೋರಿಸುವ ಆಸಕ್ತಿ ಹಾದಿಗರೂ ಒಂದು ಕ್ಷಣ ನಿಂತು ನೋಡುವಂತಹದು. ಬಗಲಲ್ಲಿ ಒಂದು ಒಂದೂಕಾಲು

ಪರ್ವದ ಕೂಸು. ಮೇಲೆ ಐದು ತಿಂಗಳ ಬಸಿರು. ತಲೆಯ ಮೇಲೆ ಬುತ್ತಿ, ಅದರ ಮೇಲೆ ಮೈಲಿಗೆ ಅರಿವೆಗಳ ಗಂಟು, ಕೈಯಲ್ಲಿ ಎಮ್ಮೆ ಕಟ್ಟುವ ಹಗ್ಗ. ಮುಂದೆ ಅನ್ಯರ ಬೆಳೆಯಲ್ಲಿ ಹೊಕ್ಕು ಮೇಯಲು ಹಾತೊರೆಯುವ ಎಮ್ಮೆಯ ಕರು. ಅದರ ಮುಂದೆ ಎಮ್ಮೆ. ಬಾಯಿ ಮಾಡುತ್ತ, ಕರುವನ್ನು ಆ ದಂಡೆಯಿಂದ ಈ ದಂಡೆಗೆ ಈ ದಂಡೆಯಿಂದ ಆ ದಂಡೆಗೆ ಅಟ್ಟುತ್ತ, ಹೊಲಕ್ಕೆ ಹೋಗಿ ಮುಟ್ಟಬೇಕಾದರೆ ನಾಲ್ಕು ತಾಸುಗಳೇ ಹಿಡಿಯುತ್ತಿದ್ದವು. ಮುಂಜಾನೆ ಹತ್ತು ಗಂಟೆಯೊಳಗೆ ಮನೆಯಲ್ಲಿ ಅಡಿಗೆ ಮುಗಿಸಿಕೊಂಡು ಹೊಲಕ್ಕೆ ಪದ್ಮಾವತಿಯ ರಥ ಹೊರಟರೆ ಎರಡು ಗಂಟೆಗೇನೇ ಹೊಲ ಸೇರುವುದು.

ದಾರಿಯಲ್ಲಿ ತಾವು ಕಲ್ಲಪ್ಪನಿಗೆ ಕೊಟ್ಟ ಹೊಲ ಹತ್ತುವದು. ಅದನ್ನು ದಾಟಿ ಈಗ ತಮ್ಮ ಹೊಲಕ್ಕೆ ಹೋಗಬೇಕಾಗುತ್ತಿದ್ದಿತು. ಈ ಸಲ ಆ ಹೊಲವು ಬೆಳೆಯಿಂದ ತುಂಬಿನಿಂತಿದೆ. ಅತ್ತ ನೋಡಿದೊಡನೆ ಪದ್ಮಾವತಿಯ ಕಣ್ಣುಗಳಲ್ಲಿ ನೀರು ಬರುವವು. ಕಳೆದ ಸುಗ್ಗಿಯಲ್ಲಿ ತಾವು ಆ ಹೊಲದಲ್ಲಿ ಕಳೆದ ಪ್ರತಿಕ್ಷಣಗಳೂ ನೆನಪಾಗುವವು. ಇಂಥ ಹೊಲ ಹೋಯಿತಲ್ಲ ಎಂದು ನಿಟ್ಟುಸಿರು ಬಿಡುವಳು. ಆಗ ತಲೆಯ ಮೇಲಿನ ಬುತ್ತಿ ಹೊಯ್ದಾಡುವದು, ಬಗಲೊಳಗಿನ ಕೂಸು ಭಾರವಾಗುವದು. ಮರುಕ್ಷಣದಲ್ಲಿ ನಮ್ಮ ಹೊಲವನ್ನು ನಾವು ತಿರುಗಿ ಕೊಳ್ಳುವಂತಾದೀತೆ ? ಎಂದು ಮನದಲ್ಲಿಯೇ ಪ್ರಶ್ನೆ ಏಳುವುದು. ಅನುಕೂಲ ಪ್ರತಿಕೂಲಗಳೆಲ್ಲ ಸುಳಿಯುವವು. ಶಕ್ಯವಿಲ್ಲ ಎನಿಸುವುದು. ಇನ್ನೂ ಐನೂರು ಸಾಲ ಕಳೆಯಬೇಕು. ನಾವು ಹೊಟ್ಟೆ ತುಂಬಿಕೊಳ್ಳಬೇಕು. ಆಮೇಲೆ ಹೊಲದ ವಿಚಾರ. ಆಗದ ಮಾತು, ಹೋಗದ ಕತೆ. ನೆನೆದು ಫಲವೇನು ? ಎಂದು ನಿಟ್ಟುಸಿರು ಬಿಡುವಳು. ಹೊಲ ನಾಲ್ಕು ಹೆಜ್ಜೆ ದೂರವೆನಿಸುವುದು.

ಒಮ್ಮೊಮ್ಮೆ ಬಾಬಣ್ಣ ಹೆಂಡತಿಗೆ ಅನ್ನುವನು,—

" ಈ ಸಲ ಕಾಳಿಗೆ ಧಾರಣೆ ಬಂದಂತೆ ಹೋದ ಸಲ ಇದ್ದರ ನಾನು ಹೊಲ ಕೊಡತಿರಲಿಲ್ಲ ! "

" ನಾವು ಕೊಟ್ಟ ಮೇಲೇ ಹಾಗೆ ಬರುವದಲ್ಲ ! "

" ಅಲ್ಲಽ, ಯುದ್ಧದಿಂದ ಧಾರಣಿ ಏರಿತಽ. "

" ಧಾರಣೆ ಏರಿತು. ನಮ್ಮಲ್ಲಿ ಮಾರುವಷ್ಟು ಕಾಳ ಇಲ್ಲ. ಹೊಟ್ಟೆಗೆ ಬಟ್ಟೆಗೆ ಸಾಲಲಿ ಮೊದಲು."

ಆ ಸಲ ಪದ್ಮಾವತಿ ಅಂದಂತೆಯೇ ಆಯಿತು. ಅವರ ಮನೆಗೆ ವರ್ಷಕ್ಕೆ ಸಾಲುವಷ್ಟು ಕಾಳು ಕೂಡ ಬರಲಿಲ್ಲ. ಹೆಂಗಸರು ಮನೆಯಲ್ಲಿ ಇರಹತ್ತಿದರು. ಬಾಬಣ್ಣ ಕೂಲಿಯ ಜನರನ್ನು ಕರೆದುಕೊಂಡು ಕೆಲಸ ಮಾಡಿಸಿದ. ಎಲ್ಲ ಕಳೆದು ಮನೆಗೆ ಧಾನ್ಯ ಬಂದು ಹತ್ತಬೇಕಾದರೆ ಅಷ್ಟು ಕಷ್ಟ. ಬಾಳವ್ವ ಬೇರೆ ಐದಾರು ತಿಂಗಳು ತವರ ಮನೆಯಲ್ಲಿ ನಿಂತಳು ಎಲ್ಲರ ಊಟದ ವೆಚ್ಚ, ಮಹಾಯುದ್ಧದ ಕಾಲದಲ್ಲಿ ಏರಿದ ದರಗಳಿಂದ ಬಾಬಣ್ಣನ ಮನೆತನದ ಆರ್ಥಿಕ ಸ್ಥಿತಿ ಮತ್ತಿಷ್ಟು ಕೆಳಮಟ್ಟಕ್ಕೇನೇ ಇಳಿಯಿತು.

ಅದರಲ್ಲಿ ಬಾಬಣ್ಣ ಒಂದು ಲೆಕ್ಕ ಹಾಕಿದ್ದ. ಅಕ್ಕನನ್ನು ಅವಳ ಗಂಡನ ಮನೆಗೆ ಕಳುಹಬೇಕು, ಹೆಂಡತಿಯೂ ಹೆರಿಗೆಗೆ ತನರುಮನೆಗೆ ಹೋಗುವಳು. ಒಂದು ಎಮ್ಮೆಯ ಹಾಲಿನ ಮೇಲೆ ತನ್ನ ವೆಚ್ಚ ಸಾಗುವದು. ಹೇಗಾದರೂ ಮಾಡಿ ನಾಲ್ಕಾರು ತಿಂಗಳು ತೆಗೆದರೆ ಮುಂದಿನ ಸುಗ್ಗಿಯನ್ನು ಕಾಣುವೆ, ಎಂಬುದೇ ಅವನ ಲೆಕ್ಕ. ಆದರೆ ಪದ್ಮಾವತಿ ಏಳು ತಿಂಗಳ ಬಸಿರಿ ಆದರೂ ಅವಳ ತವರು ಮನೆಯಿಂದ ಕರೆಯಲು ಯಾರೂ ಬರಲಿಲ್ಲ. ಈತ ಸುಗ್ಗಿಯಲ್ಲಿ ಹೊಲದೊಳಗೆ ವಸತಿ ಇದ್ದಾಗಲೇ ಪದ್ಮಾವತಿಯ ತಾಯಿ ಒಮ್ಮೆ ಬಂದು ಮಗಳನ್ನು ನೋಡಿಕೊಂಡು ಹೋಗಿದ್ದಳು. ಆಮೇಲೆ ಯಾರೂ ಇತ್ತ ಸುಳಿಯಲಿಲ್ಲ. ದಿನಗಳೆದಂತೆ ಬಾಬಣ್ಣ ಎಕ್ಸಂಬಿಯ ಕಡೆಯ ಸುದ್ದಿಗೆ ಉತ್ಕಂಠನಾದನು. ಆದರೂ ಏನೂ ಸದ್ದಿಲ್ಲ. ಪದ್ಮಾವತಿಯೂ ಅತ್ತ ಕಡೆಯ ಮಾತನ್ನು ತೆಗೆಯಲಿಲ್ಲ. ಬಾಬಣ್ಣನೇ ಕೊನೆಗೆ ತಾಳಲಾರದೆ ಕೇಳಿದ,—

" ಎಕಸಂಬಿಯವರ ಸುದ್ದಿ ಏನೂ ಇಲ್ಲದಂತೆ ಆದೆ. ಸುಗ್ಗಿಯೊಳಗೇ ತೊಡಗಿರುವರೋ ಏನೋ ? "

" ಇನ್ನೂ ಯಾತರ ಸುಗ್ಗಿ ? ಆಗಲೇ ತೀರಿರಬೇಕು "

" ಮಾಮಾ ಬರತಕ್ಕವ ಇಷ್ಟರಲ್ಲಿ. "

" ಅವರ ಮನೆಯೊಳಗೂ ನೆಟ್ಟಗಿಲ್ಲ. "

" ಏಕೆ ? "

" ನಾ ಈ ಎಮ್ಮಿ ತರುವಾಗ ಮಣಕ ಒಯ್ಯು ಅನ್ನತಿದ್ದಳು, ಅಣ್ಣಾನ ಹೆಂಡತಿ. ಹಾಲ ಕೊಡುವದನ್ನ ಬಿಟ್ಟ ಅದನ್ನ ಯಾತಕ್ಕ ತರಲಿ ಅಂತ ಇದನ್ನ ಹೊಡಕೊಂಡ ಬಂದೆ ನಾನು. ಅದೇ ಮನೆಯೊಳಗ ಜಗಳ ಹತ್ತೇದ ಮುದಕ ಮುದಕಿಯನ್ನ ಯಾರ ಕೇಳತಾರೆ ? "

" ಹೀಗೆ ಆಗಿದೆ ಏನು ? " ಬಾಬಣ್ಣ ನಡುವೆಯೇ ಕೇಳಿದ.

" ಅಣ್ಣಾನ ಹೆಂಡರು, ಹೆಣ್ಮಕ್ಕಳ ಕಡೆಗೆ ಎಳೆತ ಅದೆ ಅನ್ನತಾರೆ. ಅವ್ವ ಏನ ಮಾಡಿಯಾಳು ? "

" ಹಾಗನ್ನಲಿಕ್ಕೆ ನೀವೆಷ್ಟ ಮಂದಿ ಇದ್ದೀರಿ ? ನಿಮಗೇನ ಅಂಥಾದ ಕೊಟ್ಟದಾರ ?"

" ಅವರ ಇಷ್ಟು ಕೊಟ್ಟದ್ದೇ ಹೆಚ್ಚಿನದಲ್ಲ. ಈಗ ಒಂದ ಎಮ್ಮಿ ಗೆಂದರೆ ಮೂರ ನೂರು ನಾಲ್ಕ ನೂರ ರೂಪಾಯಿ ಬೀಳತಾವು." ತವರು ಮನೆಯನ್ನ ಎತ್ತಿ ಸ್ವಲ್ಪ ಮಾತನಾಡಿದಳು. ಬಾಬಣ್ಣನಿಗೆ ಇದೇನೂ ಬೇಕಾಗಿರಲಿಲ್ಲ. ಅವರು ಕೊಟ್ಟದ್ದು ದೊಡ್ಡದೆಂದು ಅವನೂ ಭಾವಿಸಿದ್ದ. ಮಾವನ ಮನೆಯ ವಿಷಯಕ್ಕೆ ಆದರವೂ ಇತ್ತು. ಆದರೆ ಈಗವನಿಗೆ ಅದು ಬೇಕಾಗಿರಲಿಲ್ಲ. ಹೆರಿಗೆಗೆ ಒಯ್ಯುವರೋ ಇಲ್ಲವೋ ಎಂಬುದನ್ನು ತಿಳಿದುಕೊಳ್ಳಬೇಕಾಗಿತ್ತು ಅದರಿಂದ ಕೇಳಿದ,—

" ಈ ಸಲ ಹಡೆಯಲಿಕ್ಕೆ ಒಯ್ಯುದಿಲ್ಲ ಅನ್ನ ಹಾಗಾದರೆ. "

" ಮೊನ್ನೆ ಬಂದಾಗ ಅವ್ವ ಅನತಿದ್ದಳು. "

" ಏನಂತ ? "

" ಇಲ್ಲೇ ಬಂದು ನಿಂತು ಒಂದ ತಿಂಗಳ ಮಾಡಿ ಹೋಗತಾಳಂತ. " ಮೆಲ್ಲನೆ ಪದ್ಮಾವತಿಯ ಬಾಯಿಂದ ಮಾತು ಬಂತು.

ಬಾಬಣ್ಣನ ಎದೆ ನಡುಗಿತು, ಮುಖ ಸಪ್ಪಗಾಯಿತು.

ಪದ್ಮಾವತಿಯ ಹೆರಿಗೆ ಇನ್ನೂ ತಿಂಗಳಿರುವಾಗಲೇ ಅವಳ ತಾಯಿ ಮಗಳ ಮನೆಗೆ ಬಂದಳು. ಸಂಗಡ ಎಂಟು ವರ್ಷದ ಮೊಮ್ಮಗಳೊಬ್ಬಳನ್ನು ಕರೆದುಕೊಂಡು ಬಂದಿದ್ದಳು. ಅಲ್ಲಿ ಮನೆಯಲ್ಲಿ ಹೆಯನು ಇಲ್ಲ, ಬಾಬಣ್ಣನಿಗೆ

ಕೊಟ್ಟ ಎಮ್ಮೆ ಹಾಲು ಕೊಡುವುದು, ಹುಡಿಗೆ ತಿಂದೀತು, ಉಂಡೀತು ಎಂದು ಕರೆದು·ತಂದೆನೆಂದು ಅಳಿಯನಿಗೆ ಹೇಳಿದಳು. ಆಯಿತು. ಬಾಳವ್ವ ಇನ್ನೂ ಹಡೆದು ಹೋಗಿರಲಿಲ್ಲ. ಹೀಗಾಗಿ ಮನೆಯಲ್ಲಿ ಐದಾರು ಜನರು ತಿನ್ನುವವ ರಾದರು. ಧಾನ್ಯವೇನೋ ಹೊಲದಿಂದ ಬಂದುದು—ವರ್ಷದವರೆಗೆ ಸಾಲಲಿ, ಸಾಲದೆ ಇರಲಿ—ಆದರೆ ಮೇಲಿನ ಖರ್ಚಿಗೊಂದು ಬೇಕಲ್ಲ. ಅದಕ್ಕೆ ಏನು ವ್ಯವಸ್ಥೆ ಮಾಡುವುದೆಂದು ಬಾಬಣ್ಣ ಯೋಚಿಸತೊಡಗಿದ. ಅದರಲ್ಲಿ ಬಾಳವ್ವ ಗಂಡನ ಮನೆಗೆ ಹೋಗುವ ವಿಚಾರ ಎತ್ತಹತ್ತಿದಳು. ಅವಳನ್ನು ಕಳಿಸಿದರೆ ಎಷ್ಟೋ ವೆಚ್ಚ ಕಡಿಮೆಯಾಗುವದೆಂಬುದು ಬಾಬಣ್ಣನಿಗೆ ಗೊತ್ತು. ಆದರೆ ಹಡೆದು ಕೂಸಿನೊಡನೆ ಗಂಡನ ಮನೆಗೆ ಹೋಗುವ ಅಕ್ಕನಿಗೆ ಎನಿಲ್ಲೆಂದರೂ ಐವತ್ತು ಅರವತ್ತು ರೂಪಾಯಿಗಳನ್ನಾದರೂ ಖರ್ಚು ಮಾಡಲಿಕ್ಕೆಬೇಕು. ಆದಕ್ಕೆ ದಾರಿ ಏನು? ನಾಳೆ ಬೆಳಗಾದರೆ ಹೆಂಡತಿಯು ಹೆರಿಗೆ. ಮನೆಯಲ್ಲಿ ಎಣ್ಣೆ ಬೆಣ್ಣೆ ಎಂದು ನೂರಾರು ವಿಧದ ವೆಚ್ಚ. ಅವರ ವ್ಯವಸ್ಥೆಯೂ ಈಗಿನಿಂದಲೇ ಆಗಬೇಕು. ಅತ್ತೆಯು ಈಗಾಗಲೇ ಸಾಮಾನಿನ ವ್ಯವಸ್ಥೆಗೆ ದುಂಬಾಲು ಬಿದ್ದಿದ್ದಾಳೆ ಇದೆಕ್ಕೆಲ್ಲ ಏನು ಮಾಡಬೇಕೆಂಬುದು ಬಾಬಣ್ಣನಿಗೆ ತೋಚದಾಯಿತು. ಹಗಲಿರುಳು ಇದೇ ವಿಚಾರವೇ ವಿಚಾರ. ಅದರಿಂದ ಕಣ್ಣಿಗೆ ನಿದ್ರೆಯಿಲ್ಲ. ಮೈಯಲ್ಲಿ ಉತ್ಸಾಹವಿಲ್ಲ.

ಮೂರ ನಾಲ್ಕುದಿನ ವಿಚಾರಿಸಿ ವಿಚಾರಿಸಿ ಬಾಬಣ್ಣ ಒಂದು ನಿರ್ಧಾರಕ್ಕೆ ಬಂದ. ಇಂಥ ಸಮಯದಲ್ಲಿ ಸುಮ್ಮನೆ ಕುಳಿತರೆ ಸಾಗದು. ಬಂದ ತೊಡಕನ್ನು ಹೇಗಾದರೂ ಬಿಡಸಲೇಬೇಕು. ಚೆನ್ನಪ್ಪಸೆಟ್ಟಿಯ ಹತ್ತರ ಹೋದರೆ ಮತ್ತೆ ಆತ ಹಣಕೊಡತಾನ. ಈಗಾಗಲೇ ಅವನಿಗೆ ಐನೂರು ರೂಪಾಯಿಗೆ ಹೊಲ ಬರೆದುಕೊಟ್ಟಾಗಿದೆ. ಮತ್ತೆ ಅಲ್ಲಿಯೇ ಸಾಲಮಾಡಿದರೆ ಹೊಲಕಳೆಮಕೊಳ್ಳುವುದೇ ಖಂಡಿತ. ಅದಕ್ಕಾಗಿ ಸೆಟ್ಟಿಕೊಟ್ಟರೂ ಹಣ ತರುವುದು ಬೇಡ. ಮತ್ತಾರಲ್ಲಿಯಾದರೂ ಕೇಳಬೇಕು. ಈ ವಿಚಾರ ಬಂದಾಗ ಬಾಬಣ್ಣನಿಗೆ ಎರಡು ವ್ಯಕ್ತಿಗಳು ಕಣ್ಣುಮುಂದೆ ಬಂದು ನಿಂತವು. ಒಬ್ಬ ಕಲ್ಲಪ್ಪಕಕ್ಕ ಇನ್ನೊಬ್ಬಾಕೆ ಗಂಗವ್ವ.

ಇಬ್ಬರೂ ಸಾವುಕಾರರನ್ನು ತೂಗಿನೋಡಿದ ಬಾಬಣ್ಣ—

ಕಲ್ಲಪ್ಪಕಕ್ಕನಕಿಂತ ಗಂಗವ್ವನ ಕೈಯು ಒಳ್ಳೆಯದು.

ಕಲ್ಲಪ್ಪನ ಕೈಯು ಕರಿಗೈ. ತಂದ ಸಾಲ ಕಳೆಯುದು.

ಗಂಗವ್ವನ ಕೈಯೇನೋ ರಸಗೈ ಆದರೂ ಅದು ಪದ್ಮಾವತಿಗೆ ವಿಷಗೈ ಎನಿಸಿದೆ. ಅದೇಕೋ ಅವರ ಮನೆಯ ಸಂಬಂಧವೇ ಬೇಡವೆನ್ನುವಳಾಕೆ ಅವರ ಮನೆಗೆ ನಾನು ಹೋಗುವದೆಂದರೂ ಅವಳಿಗೆ ಬೇಸರ. ಅವರಲ್ಲಿ ಹೋಗಿಬರದೆ ಸಾಲ ಸಿಕ್ಕುವಂತಿಲ್ಲ. ನಾಲ್ಕುದಿನ ಹೋಗಿ ಬರುತ್ತಿರಬೇಕು, ಹಾಗೆ ಹೀಗೆ ಅವರ ಮನೆಯಲ್ಲಿ ಏನಾದರೂ ಕೆಲಸ ಮಾಡುತ್ತಿರಬೇಕು. ಅಂದರೆ ಸಾಲ ಸಿಕ್ಕುವುದು ಹೀಗೆ ಮಾಡುವುದಕ್ಕೆ ಬಾಬಣ್ಣ ಸಿದ್ಧ. ಅವನ ಮನಸ್ಸೂ ಎಳೆಯುತ್ತದು. ಅಂಥ ಆಕರ್ಷಣ ಗಂಗವ್ವನ ಮನೆಯಲ್ಲಿ ಸಹಜವಾಗಿಯೇ ಇತ್ತು.

ಈ ತೂಗಾಟದ ಮನಃಸ್ಥಿತಿಯಲ್ಲಿಯೇ ಬಾಬಣ್ಣ ಹೆಂಡತಿಯನ್ನು ಏಕಾಂತದಲ್ಲಿ ಸಂಧಿಸಿ ಸಾಲದ ವಿಚಾರವನ್ನು ಮುಂಡಿಸಿದ. ಅವಳು ಒಂದೇ ಮಾತು ಹೇಳಿದಳು,—

"ನಾನು ಹಗಲೆಲ್ಲ ಹೇಳುತ್ತ ಕೂಡುವದಿಲ್ಲ. ಈಗ ಮನೆಯಲ್ಲಿ ನಾವಿಬ್ಬರೇ ಇಲ್ಲ. ತಾಯಿ ಇದ್ದಾಳೆ, ಅತ್ತಿಗೆ ಇದ್ದಾಳೆ. ಹೊಲ ಖರೀದಿ ಕೊಟ್ಟರೂ ನಾನು ಕೇಳುವದಿಲ್ಲ. ಗಂಗವ್ವನ ಮನೆಯ ಕಟ್ಟೆಯನ್ನು ಏರುವುದು ಮಾತ್ರ ಬೇಡ."

"ಹಾಗಂದರೆ ಹೇಗೆ ನಡೆಯಬೇಕು?" ಸಹಜ ಬಾಬಣ್ಣ ಕೇಳಿದ.

"ಯಾಕೆ? ಅವರೇನು ನಮಗೆ ಹತ್ತಿದವರೋ ಹೊಂದಿದವರೋ?"

ಹಣೆಗೆ ಹದಿನಾರು ಗಂಟು ಹಾಕಿ ಪದ್ಮಾವತಿ ಕೇಳಿದಳು.

"ಇಲ್ಲ. ತಾತ್ಯಾ ಮಾಮಾ ಹಗಲಿ ರಾತ್ರಿ ಇರತಾನ ಅಲ್ಲೇ. ಅವನ ಕಡೆಗೆ ಹೋಗಲಿಕ್ಕೆ ಬೇಕ, ಮಾಡಲಿಕ್ಕೆ ಬೇಕ."

"ನೀವೂ ಹೋಗಿ ಅವನಂತೆ ಅಲ್ಲೇ ಇರಹೋಗಿರಿ."

ಎಂದು ಪದ್ಮಾವತಿ ನಡುವೆಯೇ ಸಿಡುಕಿನಿಂದ ನುಡಿದು ಹೋಗಿ ಬಿಟ್ಟಳು. ಅದರಿಂದ ಬಾಬಣ್ಣ ಗಂಗವ್ವನಲ್ಲಿ ಸಾಲ ಕೇಳುವ ವಿಚಾರವನ್ನೆ ಬದಿಗಿರಿಸಿದ. ಇನ್ನುಳಿದವ ಕಲ್ಲಪ್ಪನೊಬ್ಬ. ಅವನಂತೂ ಬಾಬಣ್ಣನ ದಾರೀ ಕಾಯುತ್ತಲೇ ಇದ್ದ. ಹಾದಿಯಲ್ಲಿ ದೊರಕಿದಾಗ ಇತ್ತಿತ್ತಲಾಗಿ ಬಾಬಣ್ಣ

ನನ್ನು ಮಾತಾಡಿಸುತ್ತಲೂ ಕ್ಷೇಮಸಮಾಚಾರವನ್ನು ಕೇಳುತ್ತಲೂ ಇದ್ದ. ಆದರೂ ಬಾಬಣ್ಣ ಸಾಲ ಕೇಳಲಿಕ್ಕೆ ಹೋದಾಗ ಮಾತ್ರ ಕಲ್ಲಪ್ಪ ಒಮ್ಮೆಲೇ ಒಪ್ಪಲಿಲ್ಲ. ಮೆಲ್ಲಗೆ ನುಡಿದ,—

"ನೋಡು ಬಾಬು. ಊರೊಳಗ ಸೋದರಮಾವ ಇದ್ದಾನ. ನಾಲ್ಕೆಂಟ ಹರದಾರಿಮೇಲೆ ಹೆಣ್ಣುಕೊಟ್ಟ ಹುಲಿಅಂಥಾ ಆಪ್ತರ ಇದ್ದಾರ. ಅವರನ್ನೆಲ್ಲ ಬಿಟ್ಟು ಈಗ ನಾನೇಕೆ ನೆನಪ ಆದಿನೆಪ್ಪ ನಿನಗ? ಮಗನನ್ನ ಹಡದಿ, ಅಕ್ಕನ ಬುತ್ತರೊಟ್ಟಿ ಮಾಡಿದಿ. ಆಗ ನೆನಪ ಆಗಲಿಲ್ಲ ನಾವು ಅಣ್ಣತಮ್ಮರು ಈಗ ರೂಪಾಯಿ ಬೇಕಾದಾಗ ನೆನಪ ಆದೆವೇನು? ಎಷ್ಟಾದರೂ ವೇಳೆ ಹೊತ್ತಿಗೆ ನಾವೇ ಆಗುವವರೇ ಹೊರತಾಗಿ ಹೊರಗಿನವರು ಆಗುವದಿಲ್ಲ."

ಈ ಮಾತಿನ ಅರ್ಥವೆಲ್ಲ ಬಾಬಣ್ಣನಿಗೆ ಆಯಿತು ಹೇಗೆಂದರೂ ಕಲ್ಲಪ್ಪ ಸಾಲ ಕೊಡುವನೆಂಬುದೂ ಹೊಳೆಯಿತು. ಹಿಂದಕ್ಕೆ ಕೊಟ್ಟಹೊಲ ವನ್ನು ತಿರುಗಿಕೇಳಲಿಕ್ಕೆ ಹೋದುದಕ್ಕೆ ಈ ಎಲ್ಲ ಬಿರುಸುಮಾತುಗಳು ಎಂಬು ದನ್ನು ಬಲ್ಲ. ಆದರೂ ಆದೇಕೊ ಅವನ ಅಭಿಮಾನ ಜಾಗೃತವಾಯಿತು ಇಷ್ಟು ಅನ್ನಿಸಿಕೊಂಡು ಇವನಲ್ಲಿಯೇ ಹಣಒಯ್ಯಲು ಏನು? ಇವನೇನು ಬಡ್ಡಿಯಿಲ್ಲದೆ ಕೊಡುವನೇ? ಎಂದುಕೊಂಡು ಹೆಚ್ಚಿಗೆ ಮಾತಾಡದೆ ಮರಳಿ ಬಂದನು.

ಅದೊಂದು ದಿನ ಕಳೆಯಿತು. ಮರುದಿನ ಚೆನ್ನಪ್ಪಸೆಟ್ಟಿಯು ಹತ್ತರ ಹಣ ಕೇಳಲು ಹೋಗವದಕ್ಕಿಂತೆ ಮುಂಚೆ ಚಂದ್ರವ್ವಅಬಚಿಯು ಸಲಹೆ ಯನ್ನೊಮ್ಮೆ ಕೇಳಿನೋಡೋಣ ಎಂದು ಬಾಬಣ್ಣ ವಿಚಾರಿಸಿದ. ಆದರಿಂದ ಆದಿನ ಸಾಯಂಕಾಲದವರೆಗೆ ತಡೆದು ಅವರ ಮನೆಗೆ ಹೋದ. ಪಡಸಾಲೆಯಲ್ಲಿ ಚಂದ್ರವ್ವ ಹಾಗೂ ಅವಳ ಮಗ ಆದಪ್ಪ ಮಾಸ್ತರ ಮಾತಾಡುತ್ತ ಕುಳಿ ತಿದ್ದರು. ಮಾಸ್ತರರ ತಂದೆ ಮನೆಯಲ್ಲಿ ಇರಲಿಲ್ಲ.

ಬಾಬಣ್ಣ ಬಂದುದನ್ನುಕಂಡು ಚಂದ್ರವ್ವ ಸ್ವಾಗತಿಸಿದಳು.

ಬಾಬಣ್ಣ ಪಡಸಾಲೆಯಲ್ಲಿ ಕುಳಿತ. ಮೊದಲು ಆ ಮಾತು ಈ ಮಾತು ಆಡುತ್ತ ಇರುವಾಗ ಅವನಿಗೆ ವಿಚಾರವೊಂದು ಬಂತು. ನೂರಾರು ರೂಪಾ ಯಿಗಳನ್ನು ಸುಗ್ಗಿಯವರೆಗೆ ಮಾಸ್ತರರನ್ನೇ ಏಕೆ ಕೇಳಬಾರದೆಂದು. ಅದೇ ಅರ್ಥದ ಧ್ವನಿಯಲ್ಲಿ ಮೆಲ್ಲನೆ ಮಾತು ತೆಗೆದ,—

“ ಮುಂದಿನ ವಾರ ಬಾಳವ್ವ ಅಕ್ಕನ ಕಳಿಸಬೇಕಂತ ಮಾಡೇನಿ. ”

“ ತೊಟ್ಟಿಲದ ವ್ಯವಸ್ಥೆ ಏನು ಮಾಡಿರುವಿರಿ ? ”

ಚಂದ್ರವ್ವ ಹೆಂಗುಸಿನ ಸ್ವಭಾವಕ್ಕನುಸರಿಸಿ ಸಹಜ ಕೇಳಿದಳು.

“ ಏನು ಮಾಡೋದು ಅಂತ ಕೇಳಲಿಕ್ಕೇ ಬಂದೇನೆ. ”

“ ಈಗ ಮಾಡಿಸಲಿಕ್ಕೆ ಹೋದರೆ ತುಟ್ಟಿ ಬೀಳುವವು. ನಾಳಿನ ರವಿವಾರ ಸಂತೆಯೊಳಗ ತಯಾರ ಇದ್ದದ್ದು ಮಾರಲಿಕ್ಕೆ ಬಂದರೆ ನೋಡಬೇಕು.”

“ ಅದೆಲ್ಲ ಆಯ್ತು. ರೂಪಾಯಿಯ ವ್ಯವಸ್ಥೆ ಒಂದ ಆಗಬೇಕಲ್ಲ. ಅದು ಆದ ಮ್ಯಾಲೇ ಮುಂದ ಎಲ್ಲ ಅಂತs—”

ಬಾಬಣ್ಣನ ಮಾತಿನ ಧ್ವನಿಯನ್ನು ಗುರುತಿಸಿಯೇ ಮಾಸ್ತರರು ನಡುವೆ ನುಡಿದರು,—

“ ಈ ದಿನದೊಳಗ ರೂಪಾಯಿ ಸಿಗೋದು ಸ್ವಲ್ಪ ಕಠಿಣ. ”

“ ನೋಡು ಬಾಬು. ಇದ್ದರ ನಾವ ಇಲ್ಲ ಅನ್ನುವವರಲ್ಲ. ಈಗ ಏರಿದ ಧಾರಣಿಗಂದರ ಏನೂ ಸಾಲುವದಿಲ್ಲ. ಮನೆಯು ಕಾಳಕಡಿ ಆದರೇನಾತು ? ಆದಪ್ಪನ ಪಗಾರ ಎಣ್ಣಿ ಉಪ್ಪಿಗೂ ಸಾಲುವದಿಲ್ಲ. ” ಚಂದ್ರವ್ವ ಮಾತೆತ್ತಿದಳು.

“ ನೀವೂ ಹೀಗಂದರ ಹ್ಯಾಗರಿ ? ” ಬಾಬಣ್ಣ ನಗಲು ಯತ್ನಿಸಿ ನುಡಿದ.

“ ಯಾರೇನ ಬಾಬು ? ನೀನೇ ನೋಡುವಿಯಲ್ಲ. ಈ ಯುದ್ಧದಿಂದ ಧಾರಣಿ ಒಂದಕ್ಕ ಆರ ಆಗೇದ. ನಮ್ಮ ಪಗಾರೇನ ಏರೇದ ? ”

ಮಾಸ್ತರರ ಲೆಕ್ಕದ ಮಾತನ್ನು ಲಕ್ಷಿಸಿ ಇನ್ನು ಈ ದಿಸೆಯಲ್ಲಿ ಮಾತಾಡಿ ಅರ್ಥವಿಲ್ಲೆಂದು ಬಾಬಣ್ಣ ಭಾವಿಸಿದ. ಆಮೇಲೆ ಮೆಲ್ಲನೆ ಮಾತನ್ನು ಹೊರಳಿಸಿದ,—

“ ಹೀಗಂದ ಮ್ಯಾಲೆ ಉಪಾಯವಿಲ್ಲ. ಇನ್ನ ಆ ಚೆನ್ನಪ್ಪ ಸೆಟ್ಟರ ಹತ್ತರವೇ ಹೊಗಲಿಕ್ಕೆ ಬೇಕು. ”

ಎಂದು ಏಳತೊಡಗಿದ. ಮೊದಲು ತಾನು ಕೇವಲ ಸಲಹೆ ಕೇಳಲಿಕ್ಕೆಂದೇ ಬಂದಿದ್ದರೂ ದುಡ್ಡಿಗೆ ಬಾಯಿತೆರೆದು, ಸಿಗದಿರಲು ತುಸು ಬಿಗುವಿನಿಂದಲೇ ಹೊರಟುನಿಂತ. ಅದನ್ನು ಕಂಡು ಚಂದ್ರವ್ವ ನುಡಿದಳು,—

"ಇನ್ನೂ ಹೊಟ್ಟಿಗೆ ಜೋಳ ಕಡಿಮೆ ಬೀಳತಾವ ಅಂದರೆ ಒಂದ ಚೀಲ ಒಯ್ದು ತಿನ್ನು, ಸುಗ್ಗಿ ಆದಮೇಲೆ ಕೊಟ್ಟೀಯಂತೆ, ಅನ್ನಬಲ್ಲೆವು ನಾವು ರೂಪಾಯಿ ಕೊಡು ಅಂದರ ಎಲ್ಲಿಂದ ತರುವುದು?" ಸ್ವಲ್ಪ ತಡೆದು "ಒಮ್ಮೆ ನೋಡಿದೆ, ಎರಡು ಸಲ ನೋಡಿದೆ ಇನ್ನು ನಿನ್ನಷ್ಟಕ್ಕೆ ನೀನೇ ಸುಧಾರಿಸಿಕೊಂಡು ಹೋಗಬೇಕಪ್ಪ. ಪ್ರತಿಯೊಂದ ಮಾತಿಗೆ ಇನ್ನೊಬ್ಬರ ಮೇಲೆ ಅವಲಂಬಿಸಿ ಹೇಗೆ ಬದುಕೋದು? ಮುಂದಿನ ಯೋಚನಾ ಮಾಡಿ ಜನ್ಮ ಮಾಡಬೇಕು. ಇದ್ದ ಕಾಲಕ್ಕೂ ಹಾಗೇ ಇಲ್ಲದ ಕಾಲಕ್ಕೂ ಹಾಗೇ ಮಾಡಿದರೆ ಹೇಗೆ ನಡೆಯೋದು?" ಚಂದ್ರವ್ವನ ಮಾತು ಕಟುವಾಗಿದ್ದರೂ ಸವಿಯಾದ ಸ್ವರದಲ್ಲಿ ಇತ್ತು.

ಮಗನಿಗೆ ಬುದ್ಧಿಯನ್ನು ಬೋಧಿಸುವ ತಾಯಿಯ ಮಾತಿನಂತೆ ಈ ನುಡಿಗಳಿದ್ದುದರಿಂದ ಬಾಬಣ್ಣನ ಸಿಟ್ಟು ಇಳಿಯಿತು. ಕೆಳಗೆ ಕೂಡುತ್ತ ಕೇಳಿದ,—

"ಈಗ ಏನ ಮಾಡನ್ನುವಿ, ನೀನೇ ಹೇಳ ಚಂದ್ರವ್ವ ಅಬಚಿ?"

"ಹೀಗೆ ತಿರುಗಿ ಮರುಗಿ ಸಾವ್ಕಾರರ ಮನೆಗೆ ಹೋದರೆ ಹೇಗೆ? ಸಾವಿರ ಕೂರಿಗೆ ಅಡವಿ ಇದ್ದರೂ ತಾಳಲಿಕ್ಕಿಲ್ಲ."

"ಆಮೇಲೆ ಏನ ಮಾಡೋದು?"

"ಮೊದಲ ಎಚ್ಚರದಿಂದ ನಡೆಯಬೇಕು. ಪ್ರಪಂಚದೊಳಗ ಒಮ್ಮೆ ಕಾಲಜಾರಿತು ಅಂದರ ತಿರುಗಿ ಎದ್ದು ನಿಲ್ಲೋದು ಬಹಳ ಕಷ್ಟ. ದುಡ್ಡಿನ ಕೆಲಸ. ಏನ ಮಾಡೋದ ವಿಚಾರ ಮಾಡಿ ಮಾಡು. ಕಳಕೊಂಡ ಮೇಲೆ ಹುಡುಕಿದರೆ ಸಿಗುವದಿಲ್ಲ. ಮೊದಲೇ ಮುಳುಗುವವರ ಕಾಲ ಕೆಳಕೆಳಗೇ ಅಂತಾರಲ್ಲ ಹಾಗೆ."

ಚಂದ್ರವ್ವ ಎಚ್ಚರವನ್ನೇನೋ ಕೊಟ್ಟಳು. ಆದರೆ ಉಪಾಯವನ್ನು ಬೋಧಿಸಲಿಲ್ಲ. ಇಲ್ಲಿಯವರೆಗೆ ವಿಚಾರದಲ್ಲಿ ಕುಳಿತ ಮಾಸ್ತರರು ಮಾತ್ರ ಈಗ ಕೇಳಿದರು,—

"ಈಗ ನಿನಗ ಎಷ್ಟು ರೂಪಾಯಿ ಬೇಕು ಬಾಬು?"

"ನೂರು ಒಂದುವರಿ ನೂರು ಆದರೆ ಸುಗ್ಗಿ ಕಾಣತೀನಲ್ಲಿ!"

ಆಶೆಯಿಂದ ಮಾಸ್ತರರ ಮುಖದ ಕಡೆಗೆ ನೋಡುತ್ತ ಬಾಬಣ್ಣ ಹೇಳಿದ

" ಹಾಗಾದರೆ ನಿನ್ನ ಎತ್ತಿನ ಅಷ್ಟು ಬರಕ್ಕಿಲ್ಲ? " ಮಾಸ್ತರರ ಪ್ರಶ್ನೆ.

" ನಾಳೆ ಅಡವಿಯ ಕೆಲಸಕ್ಕ ಏನು ಮಾಡಲಿ? "

ಮಾಸ್ತರರು ವಿಚಾರದಲ್ಲಿ ಬಿದ್ದರು. ಆದರೆ ಚಂದ್ರವ್ವ ತಟ್ಟನೆ ಉತ್ತರ ಹೇಳಿದಳು,—

" ಈಗ ಅನಕ ಮಾರು. ಇನ್ನೂ ಅಡವಿಯ ಕೆಲಸಕ್ಕ ಅವಕಾಶ ಅದ. ಈಗ ಹೊಲದ ಮೇಲೆ ಮತ್ತೆ ಸಾಲ ತೆಗೆಯುವದಕ್ಕಿಂತ ಹೀಗೆ ಮಾಡುವದೇ ನೆಟ್ಟಗ. ನಾಳೆ ಎಮ್ಮೆ ಹಯನು ಅದ. ತಿಂದುಂಡ ಹಾಲ ಹಾಕಿದರ ನಾಲ್ಕ ದುಡ್ಡ ಉಳಿದರ ಬಾಡಿಗೆ ಹಚ್ಚಿ ಮಾಡಿಸಿದರಾಯಿತು. ಈ ವರ್ಷ ಒಂದು ಎತ್ತ ಇಲ್ಲದ ಸಾಗಿಸೋದು. "

ಈ ವಿಚಾರ ಬಾಬಣ್ಣನಿಗೆ ಸರಿಯೆನಿಸಿತು. ಅದರಂತೆ ಮರುವಾರ ಎತ್ತನ್ನು ಸಂತೆಗೆ ಹೊಡೆದ. ಅದನ್ನು ಮುಂಚಿತ ತಾತಪ್ಪನಿಗೂ ತಿಳಿಸಿಟ್ಟ. ಅವನಿಗೂ ಅದು ಹಿತವೆನಿಸಿತು. ಆತ ಮೊದಲೇ ದನಗಳ ವ್ಯವಹಾರಿ. ಸಂತೆಯಲ್ಲಿ ತುಂಬ ಪ್ರಯತ್ನ ಮಾಡಿ ಒಳ್ಳೆಯ ಗಿರಾಕಿಯನ್ನು ತಂದು, ಎತ್ತನ್ನು ಮಾರಾಟ ಮಾಡಿಸಿದ. ಅಳಿಯನಿಗೆ ನಾಲ್ಕು ದುಡ್ಡುಗಳು ಹೆಚ್ಚಿಗೆ ಸಿಗುವಂತೆ ಮಾಡಿದ.

ಇದರಿಂದ ಬಾಬಣ್ಣನ ಸದ್ಯಕ್ಕಿನ ಸಮಸ್ಯೆ ಬಿಟ್ಟಂತಾಯಿತು. ಹೆಂಡತಿಯ ಹೆರಿಗೆಯ ವ್ಯವಸ್ಥೆಯೂ ಆಯಿತು. ಅಕ್ಕನನ್ನು ಗಂಡನ ಮನೆಗೆ ಕಳಿಸಿಕೊಡುವ ಸಲಕರಣೆಗಳೂ ಒದಗಿದವು. ಅಂತೂ ನಾಲ್ಕು ತಿಂಗಳು ಸುಸೂತ್ರ ಪ್ರಪಂಚ ರಥ ಮುನ್ನಡೆಯಿತು. ಈ ದುಡ್ಡಿನಲ್ಲಿಯೇ ಅತ್ತೆಯೂ ಕೂಡ ಮಗಳ ಹೆರಿಗೆ ಮಾಡಿ, ಹೊಸ ಸೀರೆ ಉಟ್ಟು ತಮ್ಮೂರಿಗೆ ತೆರಳಿದಳು.

ಅತ್ತೆ ಊರಿಗೆ ಮರಳುವಾಗ ಬರೆ ಸೀರೆಯೊಂದನ್ನೆ ಮಾತ್ರ ಉಟ್ಟುಕೊಂಡು ಹೋಗಲಿಲ್ಲ. ಸಂಗಡ ತಾವು ಕೊಟ್ಟ ಎಮ್ಮೆಯನ್ನೂ ಹೊಡೆದುಕೊಂಡು ಹೋಗಿಬಿಟ್ಟಳು. ಇದಕ್ಕೆ ಕಾರಣವೂ ಇಲ್ಲದಿಲ್ಲ. ಅವಳು ಹೊರಡುವ ಮುಂಚೆ ಎರಡು ವಾರದಿಂದ ಅದು ಹಾಲು ಹಿಂಡುವದನ್ನು ನಿಲ್ಲಿಸಿತ್ತು. ಅದು ಪುನಃ ಈಯಲಿಕ್ಕೆ ಆರು ಏಳು ತಿಂಗಳುಗಳು ಬೇಕು. ಅಲ್ಲಿಯವರೆಗೆ ಅದು ಕೇವಲ ಖರ್ಚಿನ ಬಾಬು. ಅದಕ್ಕಾಗಿ ಎಮ್ಮೆಯನ್ನು ಮಾರಿ ಎತ್ತನ್ನೊಂದು ಕೊಳ್ಳಬೇಕೆಂದು ಬಾಬಣ್ಣ ವಿಚಾರ ಎತ್ತಿದ. ಆಗ

ಅವನತ್ತ " ನಮ್ಮ ಮನೆಯಲ್ಲಿ ಹುಟ್ಟಿಬೆಳೆದ ಎಮ್ಮೆ. ಮೇಲಾಗಿ ದೇವರಿಗೆ ಜನಗಿಬಿಟ್ಟದ್ದು. ನಮ್ಮ ಮನೆಯಲ್ಲಿ ಇರುವತನಕ ಇದರ ಹಾಲನ್ನೂ ಮಾರತಿರಲಿಲ್ಲ ನಾವು. ತುಪ್ಪ ಹೆಚ್ಚಾದರ ದೇವರಿಗೆ ದೀಪ ಹಚ್ಚಿಬಿಡತಿದ್ದೆವು. ಬಡಬಗ್ಗರಿಗೆ ಮಜ್ಜಿಗೆ ಮೊಸರ ಹಾಗೇ ತಿನಲಿಕ್ಕೆ ಕೊಡತಿದ್ದೆವು. ನೀವೇನೋ ನಿಮ್ಮ ಮನೆ ಸಾಗಿದಾಯಿತಂತ ಹಾಲ ಮಾರಲಿಕ್ಕೆ ಹತ್ತಿದಿರಿ. ಇರಲಿ ಅಂತ ಸುಮ್ಮನಾದೆ. ಈಗ ಅದನ್ನೇ ಪೇಟಿಗೆ ಹೊಡೆದರೆ ನಾ ಹೇಗೆ ಸುಮ್ಮನಿರಲಿ? ಮನೆಯಲ್ಲಿ ನನ್ನ ಮಕ್ಕಳ ಇದನ್ನ ಕೇಳಿದರ ಏನಂದಾರು? ಈಗನಕ ನಾ ಒಯ್ಯತೇನೆ. ನಾಳೆ ಈಯಿತೆಂದರೆ ಮತ್ತೆ ನೀವೇ ತರುವಿರಂತೆ ಒಮ್ಮೆ ಮಗಳಿಗೆ ಕೊಟ್ಟದ್ದನ್ನೇನ ತಿರುಗಿ ತಕ್ಕೊಳ್ಳುವದದೆ?" ಎಂದು ಅಳಿಯನಿಗೆ ಸಮಾಧಾನ ಹೇಳಿ, ಎಮ್ಮೆಯನ್ನು ಒಯ್ದಳು.

" ಅವರ ಎಮ್ಮೆ ಅವರು ಒಯ್ಯುವವರು. ಯಾರು ಕೊಟ್ಟರೆ ನಮ್ಮ ಜನ್ಮ ದಂಡಿಗೆ ಹತ್ತತದ ಏನು?"

ಎಂದು ಬಾಬಣ್ಣ ಪದ್ಮಾವತಿಯ ಮುಂದೆ ಅಂದ. ಪತಿಯ ಮಾತಿನ ಭಾವ ಅವಳಿಗೆ ಹೊಳೆಯಿತು. ಅಲ್ಲದೆ ತಾಯಿಯ ನಡತೆಯು ಅವಳಿಗೆ ಸೇರಿರಲಿಲ್ಲ. ಆದರೂ ಹಾಲು ಕೊಡದ ಎಮ್ಮೆಯನ್ನು ಈಗ ಇಟ್ಟುಕೊಂಡಾದರೂ ಮಾಡುವದೇನೆಂದು ಬಗೆದು ಸುಮ್ಮನಿದ್ದಳು.

ಮನೆಯಲ್ಲಿಯ ಎರಡೂ ದನಗಳು ಹೋದುವು. ಅಡವಿಯ ಕೆಲಸ ಕುಂಠಿತವಾಯಿತು. ಈಗ ಎತ್ತುಗಳ ಬಾಡಿಗೆಯ ದರವೂ ಏರಿದೆ. ಹೊಲದ ಕೆಲಸವನ್ನೆಲ್ಲ ಮಾಡಿಸಬೇಕಾದರೆ ಕಡಿಮೆ ಎಂದರೆ ಐವತ್ತು ರೂಪಾಯಿಗಳಾದರೂ ಬೇಕು. ಇದಕ್ಕೆ ಉಪಾಯವೇನು? ಎಂದು ಬಾಬಣ್ಣ ವಿಚಾರಿಸತೊಡಗಿದ. ಅವನಿಗೆ ಒಂದು ಯುಕ್ತಿಯೂ ಹೊಳೆಯಿತು. ದನಗಳಿಲ್ಲದಾಗ ಹೊಟ್ಟು ಕಣಿಕೆಗಳನ್ನು ಇಟ್ಟುಕೊಂಡು ಮಾಡುವದೇನು? ಅದನ್ನೇ ಮಾರಿ ಹೊಲದ ಕಷ್ಟ ಮಾಡಿದರಾಯಿತು, ಎಂದುಕೊಂಡು ಕೆಲವು ಜನರಿಗೆ ಕೇಳಿದ. ಒಕ್ಕಲಿಗರಾರೂ ಕೊಳ್ಳಲು ಒಪ್ಪಲಿಲ್ಲ. ಹೊಟ್ಟು ಕಣಿಕೆಗಳನ್ನೆಲ್ಲ ತಕ್ಕೊಂಡು ಇವನ ಹೊಲವನ್ನೆಲ್ಲ ಒಮ್ಮೆ ಕುಂಟೆ ಹೊಡೆದು ಕೊಡಲಿಕ್ಕೆ ಕೆಲವರು ಒಪ್ಪಿದರು. ಆದರೆ ಅಷ್ಟರಿಂದ ಹೊಲಗಳ ಕೆಲಸ ಪೂರ್ತಿಯಾದಂತಾಗಲಿಲ್ಲ. ಈ ಸಲ ಕೆರೆಯ ಹೊಲಕ್ಕಂತೂ ರೆಂಟೆ ಹೊಡೆಯಲೇಬೇಕು. ಐದು ವರ್ಷ

ಗಳಿಂದ ಭೂಮಿ ಗೊಬ್ಬರ ಕಂಡಿಲ್ಲ. ಹಿತ್ತಲದೊಳಗಿನ ತಿಪ್ಪೆ ಬೆಳೆದು ನಿಂತಿದೆ. ಒಯ್ದು ಹಾಕಬೇಕಾದರೆ ಬಂಡಿಯ ಬಾಡಿಗೆಗೆ ಹಣವಿಲ್ಲ. ಏನು ಮಾಡ ಬೇಕೆಂಬ ಪೇಚಿನಲ್ಲಿ ಬಾಬಣ್ಣ ಬಿದ್ದ.

ಹೊಟ್ಟೆ ಕಣಿಕೆಯಿದೆ, ಇನ್ನೊಂದು ಎತ್ತನ್ನು ಕೊಳ್ಳಲೇ ಎಂದ ಒಂದು ಕ್ಷಣ. ಮರುಕ್ಷಣದಲ್ಲಿ ಈಗ ಮುನ್ನೂರು ನಾನೂರು ರೂಪಾಯಿಗಳಿ ಗೊಂದು ಎತ್ತು. ಯುದ್ಧದಿಂದ ದನಗಳ ಧಾರಣಿ ಏರಿತು. ನಾನು ಮಾಂ ವಾಗ ಇಷ್ಟು ಇರಲಿಲ್ಲ. ಯಾವಾಗಾದರೂ ಬಡವರಿಗೆ ಧಾರಣಿ ಸಿಕ್ಕುವುದು ಇಂಥದೇ. ಏನು ಮಾಡುವುದೆಂದು ಹೆಂಡತಿಗೆ ಕೇಳಿದಾಗ ಅವಳು 'ಎತ್ತು ಕೊಳ್ಳುವುದು ಬೇಡ, ಎಮ್ಮೆ ಬೇಕಾದರೆ ಕೊಂಡುಕೊಡಿರಿ. ನಾನು ಹಾಲು ಮಾರಿ ಮನೆಯ ಖರ್ಚನ್ನು ನಡೆಯಿಸುವೆ. ಹೊಲದ ಕೆಲಸಕ್ಕೂ ನಾಲ್ಕೆಂಟು ರೂಪಾಯಿಗಳನ್ನು ಕೊಡುವೆ. ಮನೆಯಲ್ಲಿ ಮಕ್ಕಳ ಹೊಟ್ಟೆಯೂ ತಣ್ಣ ಗಾಗುವದು.' ಎಂದು ಸೂಚಿಸಿದಳು. ಈ ವಿಚಾರವೂ ಬಾಬಣ್ಣನಿಗೆ ಸರಿ ಯೆನಿಸಿತು. ಮೊದಲೇ ಅವನು ತಿನಸುಗಾರ. ಎಮ್ಮೆ ಕೊಳ್ಳುವದೆಂದರೆ ಉಬ್ಬಿದ. ಇನ್ನು ಹಣದ ವ್ಯವಸ್ಥೆಗೆ ತೊಡುಗುವದೆಂದುಕೊಂಡ. ತಂದರೆ ಒಳ್ಳೆಯ ಎಮ್ಮೆಯನ್ನು ತರಬೇಕು. ತಿಂದುಂಡು ತಿಂಗಳಿಗೆ ಹತ್ತೆಂಟು ರೂಪಾಯಿಗಳ ಹಾಲನ್ನಾದರೂ ಮಾರಲಿಕ್ಕೆ ಸಿಕ್ಕಿರಬೇಕು. ಅಂಥ ಎಮ್ಮೆಗೆ ಮುನ್ನೂರು ರೂಪಾಯಿ ಬೇಕು. ಈಗಾಗಲೇ ಐನೂರರವರೆಗೆ ಸಾಲವಿದೆ. ಇದೊಂದು ಮುನ್ನೂರೆಂದರೆ ಇನ್ನೊಂದು ಕೂರಿಗೆ ಹೊಲ ಹೇಳ ಹೆಸರಿಲ್ಲದೆ ಹೋಗುವುದು. ಈ ವಿಚಾರ ಬಂದಾಗ ಎದೆ ಜುಮ್ಮೆನ್ನುವುದು. ಎಮ್ಮೆ ಕೊಳ್ಳುವುದೂ ಬೇಡ, ಸಾವುಕಾರರ ಮನೆಗೆ ಹೋಗುವುದೂ ಬೇಡ ಎನಿಸು ವುದು. ಮರುಕ್ಷಣದಲ್ಲಿ,—

ಹೊಲದ ಕೆಲಸ ?

ಮನೆಯ ಖರ್ಚು ?

ಎಂಬೆರಡು ಪ್ರಶ್ನೆಗಳು ಅವನ ಎದುರಿಗೆ ರಾಕ್ಷಸಗಳಂತೆ ನಿಲ್ಲುವವು. ಇವುಗಳಿಗೆ ಆಹುತಿಕೊಡಲಿಕ್ಕೆ ಏನು ತರಬೇಕು ? ಏನೂ ತರುವದಾಗದಿದ್ದರೆ ನನ್ನನ್ನೇ ನುಂಗುವವು, ನಾನೇ ಆಹುತಿಯಾಗಲೇ ? ಎಂದಾಗ ಎದೆ ನಡುಗುವುದು, ಮೈ ಬೆವರೊಡೆಯುವುದು

ಹೀಗಿರುವಾಗ ಒಂದು ದಿನ ಮಧ್ಯಾಹ್ನ ಹೊಲದಿಂದ ಬರುವಾಗ ದಾರಿಯಲ್ಲಿ ಚಂದ್ರವ್ವ ದೊರಕಿದಳು. ಅವಳೇ ಹೊಲದಲ್ಲಿ ಏನೇನು ಕೆಲಸ ನಡೆಯಿಸಿರುವೆ, ನಾಳೆ ಬೇಗಾದರೆ ಬಿತ್ತಿಗೆಯ ದಿನಗಳು ಬಂದುವು, ಎಂದು ಮಾತು ತೆಗೆದಳು. ಬಾಬಣ್ಣ ಎರಡು ಮಕ್ಕಳ ತಂದೆಯಾದರೇನಾಯಿತು? ಇನ್ನೂ ಸಣ್ಣವ. ಅವನ ಪ್ರಪಂಚದ ಕಡೆಗೆ ಆಗಾಗ ಲಕ್ಷ್ಯಹಾಕುವದು ಒಳಿತು. ಅವನ ತಾಯಿ ಸಾಯುವಾಗ ಮಗನ ಕಡೆಗೆ ಲಕ್ಷ್ಯವಿರಲಿ, ಎಂದು ಹೇಳಿ ಜೀವ ಬಿಟ್ಟಿರುವಳು. ಎಂಬುದನ್ನು ನೆನೆದು ಚಂದ್ರವ್ವ ಆಗಾಗ ಬಾಬಣ್ಣನಿಗೆ ಹಿತವಚನಗಳನ್ನು ಹೇಳುತ್ತಿದ್ದಳು.

ಇಂದು ಬಾಬಣ್ಣನು ಎಮ್ಮೆ ಕೊಳ್ಳುವ ವಿಚಾರವನ್ನು ಪ್ರಕಟಿಸಲು ಅದಕ್ಕೆ ಅವಳು ಸ್ಪಷ್ಟವಾಗಿ ವಿರೋಧಿಸಿ ನುಡಿದಳು,—

“ದನಗಳೇನು ಧನವಲ್ಲ. ದವಲತ್ತೂ ಅಲ್ಲ. ಹೋಗಿ ಹಾಕಿ ಎಮ್ಮೆ ಕೊಳ್ಳುವುದು ಬೇಡ. ಇನ್ನೂ ದನಕರುಗಳನ್ನು ಮಾರಿ ಹೊಲ ಮನೆಗಳನ್ನು ಕೊಳ್ಳಬೇಕು. ಅದನ್ನು ಬಿಟ್ಟು ಹೊಲ ಕಳೆದು ಎಮ್ಮೆ ಎತ್ತು ಕೊಳ್ಳುವೆ ನೆನ್ನುವಿ. ನಿನಗೆ ಹುಚ್ಚನೆನ್ನಬೇಕೋ ಏನೆನ್ನಬೇಕೋ ತಿಳಿಯದು. ಇನ್ನೂ ಒಬ್ಬರಲ್ಲಿ ಕೂಲಿ ಹೋಗು, ದುಡಿ. ಅವರ ಎತ್ತುಗಳನ್ನು ತಂದ ನಿನ್ನ ಹೊಲಗಳನ್ನ ಹರಗು. ಮತ್ತೆ ಅವರ ಮೇಲೆ ಆಳಿನ ಬೇರೀಜು ಮಾಡು. ಬೇಕಾದಾಗ ಎತ್ತುಗಳನ್ನು ತರಲಿಕ್ಕೆ ಬರುವದು, ದುಡಿಸಿಕೊಳ್ಳಲಿಕ್ಕೆ ಬರುವದು.”

ಚಂದ್ರವ್ವ ಸಹಜ ಯುಕ್ತಿಯನ್ನು ಸೂಚಿಸಿ ತನ್ನ ಮನೆಯ ದಾರೀ ಹಿಡಿದು ಹೋದಳು. ಆದರೆ ಬಾಬಣ್ಣನಿಗೆ ಈ ವಿಚಾರ ಸರಿಬರಲಿಲ್ಲ. ಅಲ್ಲದೆ ಚಂದ್ರವ್ವ ಅಬಚಿ ತನಗೆ ಅನ್ಯರಲ್ಲಿ ಕೂಲಿಗೆ ಹೋಗೆಂದು ಹೇಳಿದಳಲ್ಲ! ನಾನು ಅವಳಿಗೆ ಅಷ್ಟು ಕಿರುಕುಳ ಕಾಣಿಸಿದೆನೇ? ಎಂದು ನೊಂದುಕೊಂಡ. ಆದಿನ ಸಾಯಂಕಾಲದ ವರೆಗೆ ಮುಖ ಸಪ್ಪಗೆ ಮಾಡಿಕೊಂಡೇ ತಿರುಗಾಡಿದ. ಮನಸ್ಸಿನ ತೂಗಾಟದಲ್ಲಿ ಸೆಟ್ಟರ ಅಂಗಡಿಯವರೆಗೂ ಹೋಗಿ ಬಂದ. ಅವರೇನೂ ಮಾತು ತೆಗೆಯಲಿಲ್ಲ. ಇವನೂ ಕೇಳಲಿಲ್ಲ. ಬರುವಾಗ ಮಾತ್ರ ಗೌಡರ ಅಂಗಡಿಯ ಕಟ್ಟೆಯಮೇಲೆ ಸ್ವಲ್ಪ ಹೊತ್ತು ಬೇಸರದಿಂದ ಕುಳಿತ. ಎಷ್ಟಾದರೂ ಗೌಡರು ಸತ್ಯವಯಿಗಳು. ಬಾಬಣ್ಣನಿಗೆ ಹೇಳಿದರು,—

"ಏನಾದರೂ ಅಗತ್ಯಬಿದ್ದರೆ ಒಯ್ಯುತಿರು ಬಾಬು. ನಿಮ್ಮ ಅಪ್ಪ ನಮ್ಮಲ್ಲಿ ಹಗಲಿ ರಾತ್ರಿ ಇರತಿದ್ದ, ದುಡಿತಿದ್ದ."

ಗೌಡರ ಮಾತುಗಳನ್ನು ಕೇಳಿ ಬಾಬಣ್ಣನಿಗೆ ಸ್ವಲ್ಪ ಸಮಾಧಾನ ವಾಯಿತು. ಉಸುಬಿನ ಅರಣ್ಯದಲ್ಲಿ ತಿರುಗುವವನು ನೀರು ಕಂಡಂತಾಯಿತು. ತನ್ನ ಮನೆತನದ ಸ್ಥಿತಿಯನ್ನೆಲ್ಲ ವಿವರಿಸಿದ. ಗೌಡರು ಶಾಂತರೀತಿಯಿಂದ ಕೇಳಿಕೊಂಡು,—

"ನಮ್ಮ ಎತ್ತುಗಳನ್ನು ಒಯ್ಯು, ಅಡವಿ ಕೆಲಸ ಮಾಡಿಕೋ, ಏನು ಬೇಕಾದರೂ ನಮ್ಮ ಅಂಗಡಿಯೊಳಗಿನ ಸಾಮಾನ ಒಯ್ಯುತ್ತಿರು."

ಎಂದು ಹೇಳಿದರು. ಅದರಂತೆ ಮರುದಿನ ಎತ್ತುಗಳನ್ನೂ ಕೊಟ್ಟರು. ನಾಲ್ಕು ದಿನ ಕಳೆಯಿತು. ಬಾಬಣ್ಣ ಹೊಲದಲ್ಲಿ ಕುಂಟೆಯನ್ನಷ್ಟು ಹೊಡೆದುಕೊಂಡ. ಸವಿಹತ್ತಿದರೆ ಬೇರು ಸಹಿತ ತಿನ್ನುವುದು ಒಳಿತಲ್ಲವೆಂದು ಕೊಂಡು ರೆಂಟೆ ಹೂಡುವ ಯೋಚನೆಗೇನೂ ಇಳಿಯಲಿಲ್ಲ. ಮುಂದಿನ ವರ್ಷ ಹೊಡೆದರಾಯಿತು ಎಂದು ಬಿಟ್ಟ. ಮೃಗದ ಮಳೆ ಆರಂಭವಾದಾಗ ಮತ್ತೆ ನಾಲ್ಕು ದಿನ ಎತ್ತು ಬಂಡಿಗಳನ್ನು ಬೇಡಿ ತಂದು ಗೊಬ್ಬರವನ್ನಿಷ್ಟು ಹಾಕಿದರೆ ಸಾಕೆಂದು ಬಗೆದ. ಸಂಸಾರದಲ್ಲಿ ತುಸು ಸುಖವಿದ್ದಂತೆನಿಸಿತು. ಎಲ್ಲರೂ ಚಂದ್ರಪ್ಪನಂಥವರೇ ಇರುವದಿಲ್ಲ. ಗೌಡರಂಥವರೂ ಇದ್ದಾ ರಂತಲೇ ಜಗತ್ತು ನಡೆದಿದೆ ಎಂದುಕೊಂಡ. ಈ ಮನೋವೃತ್ತಿಯಲ್ಲಿರು ವಾಗ ಗೌಡರು 'ಆಳು ನಾಲ್ಕೆಂಟು ದಿನ ಊರಿಗೆ ಹೋಗಿರುವ. ಹಿತ್ತಲ ದೊಳಗಿನ ಬಾವಿಯಿಂದ ಹತ್ತೆಂಟು ಕೊಡ ನೀರು ಜಗ್ಗಿ ಹೌದಿಗೆ ಸುರಿಯು ತ್ತಿರು.' ಎಂದು ಹೇಳಿದ ಕೆಲಸ ಅವನಿಗೇನೂ ಜಡವೆನಿಸಲಿಲ್ಲ. ಅಪಮಾನ ಕರವೂ ಎನಿಸಲಿಲ್ಲ. ಹೇಳುವಾಗ ಹತ್ತೆಂಟು ಕೊಡವೆಂದಿದ್ದರೂ ಮನೆ ಯಲ್ಲಿ ಹೆಂಗಸರು ಜಗ್ಗಿಸಿಕೊಳ್ಳುವುದು ಕ್ರಮೇಣ ನಲವತ್ತು ಐವತ್ತು ಕೊಡಗಳಿಗೆ ಏರಿತು. ನಾಲ್ಕೆಂಟು ದಿನ ಊರಿಗೆ ಹೋದ ಆಳು ತಿಂಗಳೆರಡು ತಿಂಗಳಾದರೂ ತಿರುಗಿ ಬರುವ ಲಕ್ಷಣ ತೋರಲಿಲ್ಲ. ಆದರೂ ಗೌಡತಿ ಒಳ್ಳೆಯವಳು. ನೀರು ಜಗ್ಗಿಯಾದ ನಂತರ ಬಾಬಣ್ಣನಿಗೆ ಏನಾದರೂ ಸವಿಯಾದ ತಿಂಡಿಯನ್ನು ತಿನ್ನಲು ಕೊಡುವಳು. ಸಲಿಗೆಯಿಂದ ಮಾತ ನಾಡುವಳು. ಮನೆಯ ಸುಖದುಃಖ ಕೇಳಿಕೊಳ್ಳುವಳು. ಅವಳಿಂದ

ನೆರವು ಸಿಕ್ಕಲಿ ಸಿಗದಿರಲಿ. ಈ ಸವಿನುಡಿ ಸವಿತಿನಿಸುಗಳು ಬಾಬಣ್ಣನ ಮನಸ್ಸನ್ನು ಸೆಳೆದುವು. ದಿನಾಲು ನೀರು ತರಲು ಹೋಗುತ್ತಿದ್ದ. ನಾಲ್ಕು ಗೋಡೆಗಳ ಆವಾರದಲ್ಲಿರುವ ಹಿತ್ತಲ ಬಾವಿಯಿಂದ ನೀರು ಸೇದಿ ಹಾಕುವುದನ್ನು ಯಾರೂ ಕಂಡಿಲ್ಲವೆಂದೂ ಭಾವಿಸಿದ.

ಈಗೀಗ ಬಾಬಣ್ಣನ ಸಂಸಾರ ಸುಸೂತ್ರವಾಗಿ ಸಾಗಿತ್ತು. ಮನಸ್ಸೂ ಸಮಾಧಾನವಾಗಿತ್ತು. ಅವನಿಗೆ ತಿಳಿಯದೇನೇ ಗೌಡರ ಅಂಗಡಿಯಲ್ಲಿ ತನ್ನ ಖಾತೆಗೆ ಲೆಕ್ಕವೇರುತ್ತಿದ್ದುದು ಅವನ ಗಮನಕ್ಕೆ ಬರಲಿಲ್ಲ. ಆದರೂ ದಿನಾಲು ತನ್ನಮೇಲೆ ಬೀಳುವ ಕೆಲಸದ ಭಾರ ಹೆಚ್ಚು ಹೆಚ್ಚಾಗುತ್ತಿದೆ ಎಂಬ ಅರಿವು ಮಾತ್ರ ಉಂಟಾಗಿತ್ತು. ದಿನಾಲು ಅರವತ್ತು ಕೊಡ ನೀರನ್ನು ಆಳವಾದ ಬಾವಿಯಿಂದ ಸೇದುವುದು, ಮೇಲೆ ಹೊಲದ ಕೆಲಸ, ತಿನ್ನಲಿಕ್ಕೆ ಒಳ್ಳೆಯ ಆಹಾರವಿಲ್ಲ. ಹೀಗಾಗಿ ಸೋತುಹೋದ.

ಒಂದು ದಿನ ಮುಂಜಾನೆ ಗೌಡರ ಮನೆಯಲ್ಲಿ ನೀರು ಸೇದಿದ. ಸಾಯಂಕಾಲದವರೆಗೆ ಹೊಲದಲ್ಲಿ ಹರಗಿ ಬಂದ. ಮಳೆಯಲ್ಲಿ ತೊಯ್ಸಿಕೊಂಡ. ಸಂಜೆಗೆ ಆದೇಕೋ ದಣಿಪಿಸಿಂದ ಮೈ ಬೆಚ್ಚಗಾಯಿತು. ಸೋತು ಬಂದು ಮಲಗಿದ್ದ. ಮನೆಯಲ್ಲಿ ಪದ್ಮಾವತಿಗೆ ಎರಡು ಕೂಸುಗಳು, ಅಡಿಗೆ ಅಂಬಲಿ ಅಂದರೆ ಸಾಕುಬೇಕಾಗಿ ಹೋಗುವುದು. ಮನೆಗೆ ಹತ್ತುವ ನೀರು ಉರುವಲಗಳ ವ್ಯವಸ್ಥೆಯೆಲ್ಲ ಆವಳ ಕಡೆಗೆ. ಆದುದರಿಂದ ಅವಳಿಗೂ ಗಂಡನ ಪ್ರಕೃತಿಯ ಕಡೆಗೆ ಅಷ್ಟು ಮನಸ್ಸು ಹಾಕಲು ಆಗುತ್ತಿರಲಿಲ್ಲ. ಅಡಿಗೆಮಾಡಿ, ಕೂಸಿಗೆ ಮೊಲೆಯೂಡಿಸಿ ಮಲಗಿಸಿದನಂತರ ಪತಿಯನ್ನು ಊಟಕ್ಕೆ ಎಬ್ಬಿಸಿದಳು.

ಬಾಬಣ್ಣನ ಬಾಯಿ ಕಹಿಯಾಗಿದ್ದಿತು. ಊಟ ಹೋಗಲಿಲ್ಲ. ಹಾಗೇ ನೀರೊಂದಿಷ್ಟನ್ನು ಕುಡಿದು ಬಂದು ಹಾಸಿಗೆಯ ಮೇಲೆ ಅಡ್ಡಾದ. ಮೈ ಹುಣು ಹುಣು ನೋಯುತ್ತಿದ್ದಿತು, ಕಣ್ಣುಗಳು ಉರಿಯುತ್ತಿದ್ದುವು. ಅಷ್ಟರಲ್ಲಿ ತಾತಪ್ಪ ಊಟಕ್ಕೆ ಬಂದ.

" ಏಕೆ ಮೆತ್ತಗ ಆದಂತೆ ಕಾಣುವಿಯೊ? " ಎಂದು ಕೇಳಿದ.

" ಏನಿಲ್ಲ, ಮಳೆಯಲ್ಲಿ ತೊಯ್ಸಿಕೊಂಡು ಬಂದೆ, ದಣಿವು, ಕಾಸು ಕೈಕಾಲು ಹರಿಯುತ್ತಿವೆ " ಎಂದು ಬಾಬಣ್ಣ ನರಳುತ್ತ ನುಡಿದ.

" ಇಂದ ಏನೂ ಊಟಾನೂ ಮಾಡಿಲ್ಲ " ಎಂದಳು ಪದ್ಮಾವತಿ.

" ಇದೊಂದ ದಿವಸ ಹಾಗೇ ಮಲಗಲಿ. "

ಎಂದು ಹೇಳಿ ತಾತಪ್ಪ ಊಟ ಮಾಡಿದ. ಹೋಗುವಾಗ ಬಾಬಣ್ಣನ ಮೈ ಮುಟ್ಟಿ ನೋಡಿ ಪದ್ಮಾವತಿಗೆ ಹೇಳಿದ,—

" ಏನೋ ಮೈ ಬೆಚ್ಚಗಾಗಿದೆ. ಪಿತ್ತಿನ ಜ್ವರವಿರಬೇಕು. ಹೊಲದೊಳಗ ಬೇಕಾದ ಹಳ್ಳದ ನೀರು ಕುಡಿಯುವರು ದನಗಳ ಹಾಗೆ. ಹೊಸ ನೀರು ಹೇಗೆ ತಡೆದಾವು? ಈಗ ನಾನು ಅಪ್ಪಣ್ಣನ ಕೈಯಲ್ಲಿ 'ಮಿನಿಟ ಕ್ಯುಅರ' ಪುಡಿ ಕೊಟ್ಟು ಕಳಸತೇನಿ, ಅದನ್ನಿಷ್ಟು ಕೊಡು. ಮೇಲೆ ಒಂದು ಕಪ್ಪು ಚಹ ಮಾಡಿಕೊಡು. "

ಇಷ್ಟು ಹೇಳಿ ತಾತಪ್ಪ ಹೋಗಿಬಿಟ್ಟ. ಆವನು ಸ್ವಲ್ಪ ದೂರ ಹೋಗಿರಬೇಕು. ಅಷ್ಟರಲ್ಲಿಯೇ ಸೆಟ್ಟರ ಆಳು ಬಾಬಣ್ಣನನ್ನು ಕರೆಯಲಿಕ್ಕೆ ಬಂದ. ಬಾಬಣ್ಣ ಮರುದಿನ ಬರುವೆನೆಂದು ಎಷ್ಟು ಅಂಗಲಾಚಿ ಹೇಳಿ ಕೊಂಡರೂ ಕೇಳಲಿಲ್ಲ. ಕುಳಿತು ಕರೆದುಕೊಂಡೇ ಹೋದ.

ಸೆಟ್ಟರು ಈಗಾಗಲೇ ಬಾಬಣ್ಣನಮೇಲೆ ಸಿಟ್ಟಾಗಿದ್ದರು. ತಮ್ಮ ಅಂಗಡಿಯನ್ನು ಬಿಟ್ಟು ಗೌಡರಲ್ಲಿ ಖಾತೆ ಇಟ್ಟುದೇ ಅದಕ್ಕೆ ಕಾರಣ ವಾಗಿದ್ದಿತು. ಅದರಿಂದ ಅವರು ಬಾಬಣ್ಣನನ್ನು ಕರೆದೊಯ್ದು ಬಿರುಸಾಗಿ ಮಾತನಾಡಿದರು.

" ನಮ್ಮ ರೂಪಾಯಿ ತಂದ ಕೊಡು. ಸುಗ್ಗಿ ಆಗಿಹೋಗಿ ತಿರುಗಿ ಬಿತ್ತಿಗೆ ನಡೆದರೂ ಗಂಟೂ ಇಲ್ಲ, ಬಡ್ಡಿಯೂ ಇಲ್ಲ. ನಮ್ಮ ಹಣ ಕೊಟ್ಟು ನೀ ಬೇಕಾದಲ್ಲಿ ಹೋಗು. ಮಂದಿಯ ಮನೆಯೊಳಗ ನೀರೇಕೆ ತರವಲ್ಲಿ, ಮುಸುರೆ ಏಕೆ ತಿಕ್ಕವಲ್ಲಿ; ನಮ್ಮದೇನ ಹೋಗ್ತದ. ನಾವು ಕೊಟ್ಟ ದುಡ್ಡಿನ ಪೂರ್ತೆಯವರು. "

ಎಂದು ಗದರಿಸಿದರು. ಬಾಬಣ್ಣನ ಎದೆಗೆ ಬರೆಕೊಟ್ಟಂತಾಯಿತು. ಏನಾದರೂ ಮಾಡುವೆನೆಂದು ಹೇಳಿ ಮನೆಗೆ ಬಂದ. ಮನೆಗೆ ಬರಬೇಕಾದರೆ ಸಾಕುಬೇಕಾಗಿ ಹೋಯಿತು. ದಾರಿಯಲ್ಲಿ ಎರಡು ಸಲ ಕುಳಿತು, ಎದ್ದು ಬಂದು ಹಾಸಿಗೆ ಹಿಡಿದ. ರಾತ್ರಿ ಜ್ವರ ಏರಿದುವು. ಬೆಳತನಕ ಜತ

ಬಡಿಸತೊಡಗಿದ. ಗಂಡನ ಮೈಮೇಲೆ ಪದ್ಮಾವತಿ ಕೈಯಿಟ್ಟರೆ ಕೆಂಡದ ಮೇಲೆ ಕೈಯಿಟ್ಟಂತೆನಿಸುವುದು.

ಮುಂಜಾನೆ ತಾತಪ್ಪ ಮನೆಗೆ ಬರುವಷ್ಟರಲ್ಲಿ ಬಾಬಣ್ಣನ "ಸುದ್ದಿ" ಹಾರಿದ್ದಿತು. ಪದ್ಮಾವತಿ ಗಾಬರಿಯಾಗಿ ಹಾಸಿಗೆಯ ಹತ್ತರ ಕುಳಿತಿದ್ದಳು ಒಂದು ಹುಡುಗ ಅಲ್ಲೇ ಕಾಲ ಬದಿಗೆ ಆಡುತ್ತ ಇತ್ತು. ಇನ್ನೊಂದು ಕೂಸು ತಾಯಿಯ ಮಗ್ಗುಲಲ್ಲಿ ಕೂತು ಮೊಲೆ ಕುಡಿಯುತ್ತಲಿತ್ತು. ಮನೆಯಲ್ಲೆಲ್ಲ ಕಸ ಮುಸುರಿ ಬಿದ್ದಂತೆಯೇ ಇತ್ತು. ತಾತಪ್ಪ ಬಂದು ಬಾಬಣ್ಣನ ಅವಸ್ಥೆ ನೋಡಿದ. ಅವನೂ ಸ್ವಲ್ಪ ಗಾಬರಿಯೇ ಆದ. ಮಾವ ಬಂದುದನ್ನು ಕಂಡು ಪದ್ಮಾವತಿ ಎದ್ದು ಮನೆಯ ಕೆಲಸಕ್ಕೆ ತೊಡಗಿದಳು.

ತಾಸೆರಡು ತಾಸು ಹೊತ್ತೇರಿತು. ಗೌಡರ ಮನೆಯ ಹತ್ತು ವರ್ಷದ ಹೆಣ್ಣುಮಗಳೊಬ್ಬಳು ಬಾಬಣ್ಣನನ್ನು ನೀರು ಜಗ್ಗಲಿಕ್ಕೆ ಕರೆಯ ಬಂದಳು. ತಾತಪ್ಪ ಹೇಳಿದ,—

"ಅವನು ಮಲಕೊಂಡಿದ್ದಾನೆ"

"ಮಲಕೊಂಡರ? ಅವ್ವಾ ಕರಕೊಂಡ ಬಾ ಅಂದಾಳ."

"ಅಂದಿರಬೇಕು. ಆದರೆ ಅವನಿಗೆ ಉರಿ ಬಂದಾವು."

"ಉರಿ ಬಂದರೆ ನಾವು ನೀರಿಗೇನ ಮಾಡಬೇಕು? ಈಗ ಜಳಕಕ್ಕ ನೀರಿಲ್ಲ ಮನೆಯೊಳಗ."

"ನಾವೇನ ಸುಳ್ಳ ಹೇಳುವದಿಲ್ಲ ಎದ್ದರ ಕರಕೊಂಡ ಹೋಗು."

ಎಂದು ಹೇಳಿ, ತಾತಪ್ಪ ಬಾಬಣ್ಣನ ಹತ್ತರದಿಂದ ಎದ್ದು ಜಳಕದ ಮನೆಯತ್ತ ಹೋದ. ಗೌಡರ ಹುಡುಗೆ ಸ್ವಲ್ಪ ಹೊತ್ತು ನಿಂತಲ್ಲಿಯೇ ನಿಂತಿತು. ಆ ಮೇಲೆ ಸಿಡುಕಿನಿಂದ ಪಟಗುಡುತ್ತ ಹೋಯಿತು.

"ನಮಗ ಮೊದಲೇ ಹೇಳುವದಿಲ್ಲ ಬಿಡುವದಿಲ್ಲ. ಈಗ ಏನ ಮಾಡ ಬೇಕು ನಾವು?"

ಮಧ್ಯಾಹ್ನ ಸೆಟ್ಟರ ಆಳು ಹಣದ ನೆನಪು ಕೊಡಲು ಬಂದ. ತಾತಪ್ಪ ಅವನಿಂದ ವಿವರವನ್ನೆಲ್ಲ ಕೇಳಿಕೊಂಡ. ರಾತ್ರಿ ಕರೆಯಿಸಿದುದನ್ನು ಪದ್ಮಾವತಿ ಹೇಳಿದಳು. ಎಲ್ಲವನ್ನೂ ವಿಚಾರಿಸಿ ತಾತಪ್ಪ ಆಳಿಗೆ ಹೇಳಿಕಳುಹಿದ. 'ಸಂಜೆ ಸೆಟ್ಟರಿಗೆ ತಾನೇ ಭೆಟ್ಟಿಯಾಗುವೆ'ನೆಂದೂ ಆಶ್ವಾಸನವಿತ್ತ. ಅದರೊಡನೆಯೇ

ಬಾಬಣ್ಣನ ಇಂಥ ಅವಸ್ಥೆಯ ಕಾರಣವನ್ನೂ ಊಹಿಸಿ, ಅಳಿಯನಿಗೆ ಸಮಾಧಾನ ಹೇಳಿದ,—

" ನೀ ನೆಟ್ಟಗಾಗಿ ಏಳು. ಹಣದ ಚಿಂತೆ ಮಾಡಬೇಡ. ನಾ ಬೇಕಾದ್ದನ್ನ ಮಾಡಿ ತೀರಸ್ತೇನೆ. ಆಯ್ತಿಲ್ಲೋ ? "

" ಹೂಂ!" ಎಂದ ಬಾಬಣ್ಣ. ಅಂಜಬೇಡಂದರೆ ಆನೆಯ ಶಕ್ತಿಯಂತೆ. ಅವನ ಮುಖವೂ ಸ್ವಲ್ಪ ಅರಳಿತು.

ಎರಡು ದಿನ ಕಳೆದರೂ ಜ್ವರ ಆರಲಿಲ್ಲ. ಚಿಕ್ಕಪುಟ್ಟ ಉಪಾಯಗಳೆಲ್ಲ ತೀರಿದುವು. ನಿರುಪಾಯನಾಗಿ ತಾತಪ್ಪ ಡಾಕ್ಟರರನ್ನು ಕರೆದು ತಂದು ತೋರಿಸಿದ. ಅವರು ವಿಷಮಶೀತಜ್ವರವೆಂದು ನಿದಾನ ಮಾಡಿದರು. ಯುದ್ಧ ಕಾಲದಲ್ಲಿ ಚುಚ್ಚುಮದ್ದಿನ ಔಷಧಗಳೂ ಸಿಕ್ಕುವದಿಲ್ಲ, ಎಲ್ಲವೂ ಬಹಳ ತುಟ್ಟಿ, ಕಳ್ಳಪೇಟೆಯಿಂದ ತರಬೇಕು, ಎಂದು ವಿವರಿಸಿದರು. ಇದನ್ನು ಕೇಳಿ ಗಂಗವ್ವ ಕನಿಕರಿಸಿದಳು. ಹಣವಿತ್ತು ನೆರವಾದಳು. ಉಪಚಾರ ನಡೆಯಿತು. ತಾತಪ್ಪ ಗಂಗವ್ವನ ಮನೆಯನ್ನೂ ಮರೆತು ಆರೈಕೆಗೆ ನಿಂತ. ಡಾಕ್ಟರರು ದಿನಕ್ಕೆ ಎರಡು ಸಲ ಬಂದು ಬಾಬಣ್ಣನ ಪ್ರಕೃತಿಯನ್ನು ನೋಡಿಕೊಂಡು ಹೋಗುವರು. ಹಣವು ಧಾರಾಳವಾಗಿ ಅವರ ಕೈಗೆ ಸೇರುತ್ತಿದ್ದುದೇ ಅದಕ್ಕೆ ಕಾರಣ.

ಬಾಬಣ್ಣನಿಗೆ ಈ ತರದ ಬೇನೆಯೆಂಬುದನ್ನು ಕೇಳಿ ಎಕಸಂಬಿಯಿಂದಲೂ ಅವನ ಅತ್ತೆ ಹಾಗೂ ಬೀಗ ಬಂದರು. ಬೀಗ ಎರಡು ದಿನ ನಿಂತು ನೋಡಿಕೊಂಡು ಹೋದ. ಅತ್ತೆ ಇಲ್ಲೇ ಆರೈಕೆಗೆ ಉಳಿದಳು. ಚಂದ್ರವ್ವ ದಿವಸದಲ್ಲಿ ಒಪ್ಪತ್ತು ಬಾಬಣ್ಣನ ಹಾಸಿಗೆಯ ಹತ್ತರವೇ ಕಳೆಯುತ್ತಿದ್ದಳು. ಗಂಗವ್ವ ಸುಂದರಾ ಇವರೂ ದಿನಕ್ಕೊಮ್ಮೆ ಬಂದು ನೋಡಿಕೊಂಡು ಹೋಗುತ್ತಿದ್ದರು. ರೇಶನ್ ದಿನವಾದುದರಿಂದ ಬಾಬಣ್ಣನ ಮನೆಯಲ್ಲಿ ಸಕ್ಕರೆಯ ಕೊರತೆಯೆಂದು ತಮ್ಮ ಮನೆಯಲ್ಲಿಯೇ ಚಹ ಮಾಡಿ ಅಪ್ಪಣ್ಣನ ಕೈಯಲ್ಲಿ ಕೊಟ್ಟು ಕಳಿಸುವರು. ಹಾಲು ಮಜ್ಜಿಗೆ ಅಲ್ಲಿಂದಲೇ ಬರುವವು. ಅಪ್ಪಣ್ಣ ಚಹದ ತಂಬಿಗೆಯನ್ನು ತಕ್ಕೊಂಡು ಬಂದು,—

" ಬಾಬಣ್ಣನಿಗೆ ಚಹ ಹಾಕ ಅಂದಾರೆ. ಜಾಗರಣೆ ಆಗ್ತದ ನಿನಗೂ ಒಂದು ಕಪ್ಪು ಕುಡಿಯಲು ಹೇಳಿದ್ದಾರೆ. "

ಎಂದು ತಾತಪ್ಪನಿಗೆ ಹೇಳಿ ಕೊಡುವನು. ಬಾಬಣ್ಣನನ್ನು ನೋಡಲಿಕ್ಕೆಂದು ಬಂದ ನೆರೆಮನೆಯ ಹೆಂಗಸರು ಅಪ್ಪಣ್ಣನಿಗೆ ಕೇಳುವರು, ನಗೆಯ ಸ್ವರದಿಂದ,—

" ಯಾರ ಹೇಳಿರುವರು ಅಪ್ಪಣ್ಣ ? "

" ಮತ್ತ್ಯಾರ ಹೇಳತಾರೆ ? "

" ಗಂಗೂ ಹೇಳಿದಾಳ ಹೌದ ? "

ಅಪ್ಪಣ್ಣ ಸುಮ್ಮನಾಗುವನು. ದೂರ ಸರಿದು ಒತ್ತಟ್ಟಿಗೆ ಕುಳಿತುಕೊಳ್ಳುವ. ಅದನ್ನು ಕಂಡು ತಾತಪ್ಪ ಹೇಳುವ,—

" ಯಾಕ ಕುಳಿತಿ ? ಮನೆಯೊಳಗ ದನಗಳ ಮೇವು ನೀರು ನೋಡಬೇಕಿಲ್ಲ ! "

" ತಂಬಿಗೆ ತೆರವ ಮಾಡಿ ಕೊಡತೀರಿ ಅಂತ ಕುಳಿತೆ. "

ಎಂದು ಹೇಳಿ ಏಳಹತ್ತುವ. ಅಷ್ಟರಲ್ಲಿ ಪದ್ಮಾವತಿ ತಂಬಿಗೆ ತೆರವು ಮಾಡಿ ತಂದು, ಕೃತಜ್ಞತೆಯಿಂದ ಅವನ ಕೈಯಲ್ಲಿ ಕೊಡುವಳು.

ಹೀಗೆ ಎಲ್ಲರ ನೆರವು, ಸಹಕಾರಗಳಿಂದ ಬಾಬಣ್ಣನ ಜ್ವರ ಇಪ್ಪತ್ತೊಂದನೆಯ ದಿನಕ್ಕ ಇಳಿದುವು. ತುಸು ಚೇತರಿಸಿದ. ಆಗ ಅವನನ್ನು ನೋಡಲಿಕ್ಕೆ ಬಂದ ಕಲ್ಲಪ್ಪ ಸಹಜ ಅಂದ,—

" ಹೊಲ ಹೆಚ್ಚಿನದೋ ನಿನ್ನ ಜೀವ ಹೆಚ್ಚಿನದೋ ? ನೀ ನೆಟ್ಟಗಾಗಿ ಏಳ ಮೊದಲ. ಆಮೇಲೆ ಏನಾದರೂ ಮಾಡೀಯಂತೆ. ಹೊಲವನ್ನಾದರೂ ಕೊಟ್ಟ ತೀರಿಸೀಯಂತೆ. ಇಲ್ಲಾದರೇ ಮತ್ತೇನಾದರೂ ಮಾಡುವಿಯಂತೆ. "

ಇಷ್ಟು ದಿನ ಬಾಬಣ್ಣನನ್ನು ನೋಡಲಿಕ್ಕೆ ಬಾರದ ಕಲ್ಲಪ್ಪ ಈಗ ಬಂದು ಹೀಗೆ ಹೇಳುವುದರ ಅರ್ಥ ತಾತಪ್ಪನಿಗೆ ಹೊಳೆಯದಿರಲಿಲ್ಲ. ಅಂತಲೇ ಆತ ಸ್ಪಷ್ಟವಾಗಿ ಹೇಳಿದ,—

" ಈಗ ಅಂಥ ಮಾತನ್ನೇನ ಅವನ ಮುಂದ ಎತ್ತಬೇಡ ಕಲ್ಲಾ. ಸುಮ್ನ ಬಂದಂತೆ ನೋಡಿ ಹೋಗಿಬಿಡು. ಹೆಚ್ಚಿನ ಸಂಗತಿ ನಿನಗೇಕೆ ಬೇಕು ? "

ಕಲ್ಲಪ್ಪ ಸಿಟ್ಟಿನಿಂದ ಚಟ್ಟನೆ ಎದ್ದು ಹೋಗಿಬಿಟ್ಟ. ಮುಂದೇನೂ ಮಾತನಾಡಲಿಲ್ಲ.

೯

ಬಾಬಣ್ಣ ಅಸಹಾಯನಾಗಿ ಹಾಸಿಗೆ ಹಿಡಿದಾಗ ಗಂಗವ್ವ ಎಲ್ಲ ದೃಷ್ಟಿಯಿಂದಲೂ ನೆರವಾಗಿದ್ದಳು. ಡಾಕ್ಟರರ ಬಿಲ್ಲು ತೀರಿಸಿದ್ದಳು. ಹಣ್ಣು ಹಂಪಲಗಳನ್ನು ತರಿಸಿಕೊಟ್ಟಿದ್ದಳು. ಹಾಲು ಪೂರೈಸಿದ್ದಳು. ಅವಳು ಸಾಲದ ಹಣದ ಸಂಖ್ಯೆಯನ್ನು ಎಷ್ಟೇ ಏರಿಸಿದ್ದರೂ ಬಾಬಣ್ಣ ಅವಳಿಗೆ ತುಂಬ ಋಣಿಯಾಗಿದ್ದ. ಪದ್ಮಾವತಿಯಂತೂ ಗಂಗವ್ವನ ಗುಣಕ್ಕೆ ಮಾರುಹೋಗಿದ್ದಳು.

ಇಂಥವರು ಹೊಲವನ್ನು ಮಾರಲಿಕ್ಕೆ ತೆಗೆದಾಗ ತಾನು ಬಾಯಿ ಹಾಕಿದರೆ ಇಲ್ಲೆನ್ನಲಿಕ್ಕಿಲ್ಲವೆಂದು ಗಂಗವ್ವನಿಗೆ ವಿಶ್ವಾಸ. ಅವಳಿಗೆ ಆ ಹೊಲ ಕೊಳ್ಳುವುದರಲ್ಲಿ ಒಂದಿಷ್ಟು ಹಟ. ಹಿಂದೆ ಕೈತೋರಿಸಿ ಅವಲಕ್ಷಣ ತೆಗೆಯಿಸಿಕೊಂಡಂತಾಗಿದ್ದಿತು. ಕಲ್ಲಪ್ಪ ಗೆದ್ದಿದ್ದ. ಒಂದೆರಡು ಸಲ ಹಂಗಿಸಿಯೂ ತೋರಿಸಿದ್ದ. ಆ ಸೇಡು ತೀರಿಸಿಕೊಳ್ಳಲಿಕ್ಕೆಂದು ಗಂಗವ್ವ ಯತ್ನಮಾಡದೆ ಇರಲಿಲ್ಲ. ಬಾಬಣ್ಣನ ಮಾವನು ಹಣ ತಕ್ಕೊಂಡು ಬಂದಾಗ ಕಲ್ಲಪ್ಪನ ಕಡೆಗೆ ಹೋಗುವಂತೆಯೂ ತಾತಪ್ಪನ ಮುಖಾಂತರ ಪ್ರೋತ್ಸಾಹಿಸಿದ್ದಳು. ಆದರೂ ಯಾವ ಆಟವೂ ಸಾಗಿರಲಿಲ್ಲ. ಮತ್ತೆ ಕಲ್ಲಪ್ಪ “ಹೀಗೆ ಹೆಂಗಸರೆಲ್ಲ ವ್ಯವಹಾರ ಮಾಡಿದರೆ ಊರೊಳಗಿನ ನಾಯಿಗಳೇಕೆ ಬತ್ತಲೆ ತಿರಗತಿದ್ದವು?” ಎಂದು ಹಂಗಿಸುವಂತೆಯೇ ಆಗಿದ್ದಿತು. ಈ ಎಲ್ಲ ಸಂಗತಿಗಳು ಗಂಗವ್ವನ ಭಾವನೆಗಳನ್ನು ಹುರಿಗೊಳಿಸಿದ್ದುವು. ಒಮ್ಮೆ ಹೊಲ ಕೊಂಡು ತೋರಿಸಬೇಕು, ಕಲ್ಲಪ್ಪನನ್ನು ನಿಂದಿಸಿಬಿಡಬೇಕು, ಎಂದು ಅವಳ ಒಳಗಿನ ಆಸೆ. ಅದಕ್ಕಾಗಿಯೇ ಅವಳು ಬಾಬಣ್ಣನನ್ನು ಮತ್ತೆ ಇಷ್ಟು ಹಚ್ಚಿಕೊಂಡುದು.

ಬಾಬಣ್ಣನನ್ನು ನೋಡಲಿಕ್ಕೆ ಬಂದು, ಕಲ್ಲಪ್ಪ ಹೊಲದ ವಿಷಯಕ್ಕೆ ಮಾತನಾಡಿದುದೂ ತಾತಪ್ಪನಿಂದ ‘ಛೀ !’ ಅನ್ನಿಸಿಕೊಂಡು ಹೋದುದೂ ಗಂಗವ್ವನಿಗೆ ತಿಳಿಯಿತು. ಆದರಿಂದ ಅವಳು ಮತ್ತಿಷ್ಟು ಚೇತರಿಸಿದಳು. ಬಾಬಣ್ಣ ಎದ್ದು ತಿರುಗಾಡುವಷ್ಟರಲ್ಲಿ ಸೆಟ್ಟರನ್ನು ಸಂಧಿಸಿ ಅವರ ವಿಚಾರ ತಿಳಿದುಕೊಳ್ಳಬೇಕೆಂದು ನಿರ್ಣಯಿಸಿದಳು. ಹೊಲ ಬರೆಯಿಸಿಕೊಂಡವರು ಅವರು. ಅವರ ನೆರವಿಲ್ಲದೆ ಹೊಲ ಸಿಗದು. ಸಿಕ್ಕರೂ ಬೆಲೆ ಹೆಚ್ಚು ಕೊಡಬೇಕಾಗುವದು. ಆದಕ್ಕಾಗಿ ಅವರನ್ನು ಒಳಗೆ ಕೆಡವಿಕೊಂಡೇ ಮುಂದೆ ಸಾಗಬೇಕೆಂದು ಯೋಚಿಸಿ ತನ್ನ ಗಂಡನಿಗೆ ಸೆಟ್ಟರ ಕಡೆಗೆ ಹೋಗಲಿಕ್ಕೆ ಹೇಳಿದಳು.

"ನಾ ಹೋಗಿ ಏನ ಮಾಡನ್ನುವಿ? ನೀ ಏನೋ ಅವರೇನೋ. ಇಂಥದಕ್ಕೆಲ್ಲ ನನ್ನ ಮುಂದ ಮಾಡಬೇಡ." ಅಪ್ಪಣ್ಣ ಸ್ಪಷ್ಟವಾಗಿ ಹೆಂಡತಿಗೆ ಹೇಳಿದ.

"ಅಲ್ಲs, ಮನೆಯೊಳಗ ಗಂಡಸರಿದ್ದ ನಾ ಮುಂದ ಮುಂದ ಹೋಗೋದ ಹ್ಯಾಗ?"

"ಹಾಗಾದರ ನಾಲ್ಕ ದಿನ ತಡೀ ಅಲ್ಲ. ಬಾಬಣ್ಣ ಎದ್ದು ತಿರುಗಾಡ ಲಿಕ್ಕೆ ಹತ್ತಲಿ. ಹೇಗಾದರೂ ತಾತಪ್ಪ ಇಲ್ಲೇ ಬರತಾನು. ಅವನೇ ಎಲ್ಲಾನೂ ಮಾಡತಾನ. ಸುಮ್ಮನೆ ಉಡು ಬುಡು ನಾವೇಕೆ ನಡುವ ಓಡಾಡಬೇಕು?" ಬೇಸರದಿಂದ ಅಪ್ಪಣ್ಣ ಹೆಂಡತಿಗೆ ಕೇಳಿದ.

"ಅಷ್ಟ ತಿಳಿಯೂತಿದ್ದರ ನಮ್ಮ ಜನ್ಮ ಹೀಗೇಕೆ ಆಗತಿದ್ದಿತು?"

"ಏನಾಗೇದ ಈಗ?"

"ಊರೊಳಗ ನಾಯಿನೂ ಕೇಳುವದಿಲ್ಲ ಹೋಗ."

ಗಂಗವ್ವ ಸ್ವಲ್ಪ ಗಂಡನ ಮೇಲೆ ಸಿಟ್ಟಿಗೆ ಬಂದು ಮಾತನಾಡಿ ದಳು.

"ಇರಲಿ, ನೀ ಹೇಳಿದಂತೆಯೇ ಕೇಳುವೆ. ಏನ ಮಾಡನ್ನುವಿ ಹೇಳೊಮ್ಮೆ."

"ನೀ ಏನ ಹೆಚ್ಚಿಗೆ ಮಾಡೋದು ಬೇಡ. ನಾ ಸೆಟ್ಟರ ಭೆಟ್ಟಿಗೆ ಬರತೇನಿ. ಯಾವಾಗ ಮನೆಯೊಳಗ ಇರತಾರ ಕೇಳಿ ಬಾ."

"ಇಷ್ಟ ಹೇಳಲ್ಲ!"

"ಅದೇ ನಾ ಹೇಳೋದು. ಎಲ್ಲಾ ಕೇಳಿಕೊಳ್ಳದ ಎತ್ತಿನಕಿಂತ ಮುಟ್ಟಿ ಮೊದಲ ಹಾರಸತಿದಿಯಲ್ಲ."

ಅಪ್ಪಣ್ಣ ಮುಂದೆ ಏನೂ ಹೇಳದೆ ಸೆಟ್ಟರ ಕಡೆಗೆ ಹೋಗಿಬಿಟ್ಟ. ಸೆಟ್ಟರು ಊಟದ ಹೊತ್ತಿಗೆ ಗಂಗವ್ವನನ್ನು ಕಾಣಲಿಕ್ಕೆ ಸಿದ್ಧರಿದ್ದಾರೆಂದು ತಿಳಿದುಕೊಂಡೂ ಬಂದ. ಆದರಂತೆ ಗಂಗವ್ವ ಹೋಗಿ ಸೆಟ್ಟರ ಚೆನ್ನಪ್ಪ ನನ್ನು ಕಂಡು ಮಾತನಾಡಿ ಬಂದಳು.

ಸೆಟ್ಟರಿಗೆ ಕೈಯೊಳಗೆ ಸಿಕ್ಕ ಹೊಲ ಬಿಡಬೇಕೆಂದೇನೂ ಮನಸ್ಸು ಇರಲಿಲ್ಲ. ಆದರೆ ಅವರಿಗೆ ಹೊಲ ತಮ್ಮ ಕೈಸೇರುವುದು ಕಠಿಣವೆಂದೂ

ಗೊತ್ತಿತ್ತು. ಬಾಬಣ್ಣ ಗೌಡರ ಬಲೆಯಲ್ಲಿ ಸಂಪೂರ್ಣವಾಗಿ ಸಿಕ್ಕವನು. ಅವರ ಅಂಗಡಿಯ ಬಾಕಿಯೂ ಅವನ ಮೇಲಿದೆ. ಅವರು ಸ್ವತಃ ಹೊಲವನ್ನು ಒಂದು ವೇಳೆ ಕೊಳ್ಳದಿದ್ದರೂ ಕಲ್ಲಪ್ಪನಿಗೆ ಕೊಡಿಸತಕ್ಕವರು. ಕಲ್ಲಪ್ಪನಂತೂ ಈಗ ಗೌಡನ ಮನೆ ಬಿಟ್ಟು ಏಳುವಂತಿಲ್ಲ. ಅವನಿಗೆ ಅನುಕೂಲವಿರುವ ಹೊಲ, ಕೈಯೊಳಗಿಂದ ಬಿಡಲಿಕ್ಕೆ ಒಲ್ಲ. ಗೌಡರಿಗೆ ಲಂಚಕೊಟ್ಟಾದರೂ ಕೊಳ್ಳುವವ. ಇದೆಲ್ಲವನ್ನೂ ಸೆಟ್ಟರು ಅರಿತವರು. ಅದರಿಂದ ಗಂಗವ್ವ ತಾನಾಗಿಯೇ ಬಂದ ಮೇಲೆ ಅವರಿಗೆ ಅನುಕೂಲವೇ ಆಯಿತು. ಇವಳು ಹೊಲ ಕೊಳ್ಳಬೇಕೆನ್ನುವಳು. ಇವಳ ವರ್ಚಸ್ಸು ಬಾಬಣ್ಣನಮೇಲೆ ಎಂಥದೆಂಬುದನ್ನೂ ಆತ ಬಲ್ಲ. ಗಂಗವ್ವನಿಂದ ಕಲ್ಲಪ್ಪನನ್ನು ತಣ್ಣಗೆ ಕುಳ್ಳಿರಿಸಿದರೆ ಸಾಕು. ಆಮೇಲೆ ಗಂಗವ್ವನನ್ನು ನೂಕುವುದೇನು ಕಠಿಣ ಕೆಲಸವಲ್ಲೆಂದು ಸೆಟ್ಟರು ಯೋಚಿಸಿಯೇ ಗಂಗವ್ವನಿಗೆ ಹೇಳಿದರು,—

"ನನಗೇನ ಹೊಲದ ಆಶೆ ಇಲ್ಲ, ಏನವ್ವ ಗಂಗವ್ವ. ನೀ ತಗೊಂಡರೇನ ಯಾರ ತಗೊಂಡರೇನ ಅಷ್ಟೇ ನನಗ. ನನ್ನ ದುಡ್ಡ ನನಗ ಬರಬೇಕು. ವ್ಯಾಪಾರಸ್ಥರು ನಾವು. ಹೊಲ ಮನೆ ತಕ್ಕೊಂಡ ಏನ ಮಾಡೋವು? ಅದೇ ವ್ಯಾಪಾರದಲ್ಲಿ ಹಾಕಿದರೆ ನಾಲ್ಕು ದುಡ್ಡ ಹೆಚ್ಚಿಗೆ ಹುಟ್ಟುತದ. ದುಡ್ಡಿನಿಂದ ದುಡ್ಡು ಹುಟ್ಟಿಸುವ ಜನ ನಾವು. ಆದರೆ ಗೌಡರ ಕಣ್ಣಿಗೆ ಊರ ಪಗ್ಗಾಗಳಲ್ಲಿ ಕಡಿದಾಡಿ ಸತ್ತಂತೆ ಆಗಬಾರದು. ಅತ್ತ ಕಲ್ಲಪ್ಪ ಬೇರೆ ಗೌಡರ ಮನೆಗೆ ಎಡತಾಕಲಿಕ್ಕೆ ಹತ್ತಿದಾನ. ಕಾಲೊಳಗಿನ ಕೆರವ ಸವದಿತ ಬೇಕು ಅವನೂ. ನಿನ್ನ ಅಳಿಯ ಬಾಬಣ್ಣನಾದರೂ ನಿನ್ನ ಕೈಯೊಳಗ ಇದಾನು: ಆತ ಗೌಡರ ಮೂಗಿನೊಳಗಿನ ಕೂದಲ. ಇಂಥದರೊಳಗ ನಿನ್ನ ಕೈಗೆ ಹೊಲ ಹೇಗೆ ಬಂದೀತವ್ವ ?"

"ಅದನ್ನ ನೋಡಿಕೊಳ್ಳತೇನ ಚೆನ್ನಪ್ಪಣ್ಣ ನಾ. ನೀವು ಮಾತ್ರ...."

"ನಾ ಹೇಳಿದೆನಲ್ಲ! ನನ್ನ ದುಡ್ಡ ಬಡ್ಡಿ ಸಹಿತ ಬಂದರಾಯಿತು. ಆ ಹೊಲ ಹಳ್ಳಾ ಕೂಡವಲ್ತು ಏಕೆ!"

ಚೆನ್ನಪ್ಪಸೆಟ್ಟರು ಬೇಕೆಂತಲೇ ಗಂಟಲು ಸಡಿಲು ಬಿಟ್ಟು ಮಾತನಾಡಿದರು. ಮನದಲ್ಲಿ, "ನಡೆಯಲಿ ಟಗರುಗಳ ಕಾದಾಟವೊಮ್ಮೆ. ಯಾವುದಾದರೂ ಸೋತು ತನ್ನ ಕಡೆಗೇ ಬರುವದಲ್ಲ" ಎಂದು ಬಗೆದರು.

ಗಂಗವ್ವನಿಗೆ ಹಗಲಿರುಳೂ ಕಣ್ಣಿಗೆ ನಿದ್ರೆಯಿಲ್ಲ. ಹೊಲ ಕೊಳ್ಳದ ಹೊರತಾಗಿ ಮನಸ್ಸಿಗೆ ಸಮಾಧಾನವಿಲ್ಲ. ಬಾಬಣ್ಣನಿಗೆ ಒಳ್ಳೆಯದೆನಿಸಿ ತಾತಪ್ಪ ತಮ್ಮ ಮನೆಗೆ ಬಂದು ಹೋಗಲಿಕ್ಕೆ ಆರಂಭಿಸಿದ ಕೂಡಲೇ ಮಾತನ್ನೆತ್ತಿದಳು.—

" ಹನ್ನೆರಡ ಮಂದೆಲ್ಲ ಹರಿಯುವವರು, ಹುಡುಗ ದುಡ್ಡಿಗೆ ಏನ ಮಾಡತಾನೋ ಇನ್ನ ? "

" ನಿನಗ ಎಷ್ಟ ಕೊಡಬೇಕು ಅತ ? " ತಾತಪ್ಪ ಕೇಳಿದ

" ನನ್ನ ಹಣದ್ದ ಕೇಳಲಿಲ್ಲ ನಾ. "

" ಇರಲಿ. ಬರಬೇಕಾದದ್ದ ಎಷ್ಟು ? "

" ಎಲ್ಲಾನೂ ಕೂಡಿ ಒಂದೂವರಿ ನೂರರ ತನಕ ಆದೀತಲ್ಲ. "

" ಹುಡುಗನಿಗೂ ತಿಳಿಯುವದಿಲ್ಲ. ಅಲ್ಲಿ ಗೌಡರ ಅಂಗಡಿಯೊಳಗೆ ಕೊಡೋದ ಮಾಡಿದಾನ. ಅತ್ತ ಸೆಟ್ಟರ ಸಾಲಾ ಹರಿಯಬೇಕು. ಇಲ್ಲಿ ನಿನ್ನದು ಕೊಡಬೇಕು. ಈಗ ಮನೆಯೊಳಗಂದರ ನಾಳಿಗೆ ತಿನ್ನಲಿಕ್ಕೆ ಏನಿಲ್ಲ. "

" ಅದನ್ನೇ ಅನ್ನುವೆ ನಾನೂ. "

" ಇನ್ನೊಂದ ಕೂರಿಗೆ ಹೊಲಾ ಹೋಗತದ ಅಯ್ತು. ನಾವಾದರೂ ಏನ ಮಾಡೋದು ? "

" ಹಾಗೇನಾದರ ಅನತಿದ್ದ ಏನು ? "

" ಅನಲಿಕ್ಕೆ ಏನು ? ಮೋಟಾರಿನೊಳಗ ಕುಳಿತ ತಾಲೂಕಿಗೆ ಹೋಗುವಂತೆ ಆದ ಮೇಲೆ ಏನಾದರೊಂದ ಮಾಡಲಿಕ್ಕೇ ಬೇಕಲ್ಲ. ಹೀಗೆ ಸುತ್ತೆಲ್ಲ ಹದ್ದು ಹರಿಗಂಗ ಹರಿಲಿಕ್ಕೆ ಹತ್ತಿದ ಮೇಲೆ ಹೇಗೆ ? "

" ಯಾವ ವ್ಯವಹಾರ ಮಾಡಿದರೂ ನನಗ ತಿಳಿಸದೆ ಮಾಡಬೇಡಿರಿ. "

ಗಂಗವ್ವ ಎಳೆತೆಗೆದಳು.

" ಏಕೆ, ನೀ ತಗೋಬೇಕು ಅನ್ನುವಿ ಏನು? "

" ಯಾರಾದರೂ ತಕ್ಕೊಳ್ಳುವವರೇ. ಅಂದ ಮೇಲೆ ಯಾಕ ? "

" ಆದರೂ ನೀ ತಗೋಬೇಡ. " ಖಂಡಿತ ಸ್ವರದಲ್ಲಿ ತಾತಪ್ಪ ಹೇಳಿದ

" ಅದಕೇನ ಆಗ್ತದ ? "

" ಆಗಲಿ ಬಿಡಲಿ, ಆ ಉದ್ಯೋಗ ಬೇಡ. ನಿನ್ನ ರೂಪಾಯಿ ಅಷ್ಟ ನಿನಗ ಬಂದರ ಆಯ್ತು. ನಾಲ್ಕು ರೂಪಾಯಿ ಹೆಚ್ಚ ತಗೋ ಇನ್ನೂ ಹೊಲದ ಸುದ್ದಿ ನಮಗೆ ಬೇಡ." ತಾನೂ ಗಂಗವ್ವನ ಕಡೆಗೆ ಆಗಿ ಹೇಳಿದ.

" ಆ ಸಲನೂ ಹಾಗೇ ಹೇಳಿದಿ. ಈಗೂ ಹೀಗೇ. ಕಲ್ಲಪ್ಪ ಗಿಲ್ಲಪ್ಪ ಹೆಚ್ಚ ದುಡ್ಡ ಕೊಡತೇನಂತ ಹೇಳಿರಬೇಕು ಆಯ್ತು. ಯಾರೆಲ್ಲ ತಮ್ಮವರ ಹಿತವನ್ನೇ ನೋಡತಕ್ಕವರು. ಇತ್ತಿನವರ ಸತ್ತರೇನ ಇದ್ದರೇನು?" ಗಂಗವ್ವ ನಸುಮುನಿಸಿನಿಂದ ತಾತಪ್ಪನಿಗೆ ನುಡಿದಳು.

" ಸಾಯಲಿಕ್ಕೇನ ಆಯ್ತು ಇದರೊಳಗೆ? ಊರೊಳಗೇನ ಮತ್ತೆ ಹೊಲಗಳ ಸಿಗುವದಿಲ್ಲೋ ಬಿಡುವದಿಲ್ಲೋ. ಅದೇ ಹೊಲಕ್ಕ ಏನ ಹತ್ತೇದ? ಅದರೊಳಗೇನ ಮುತ್ತಗಿತ್ತ ಬೆಳಿತದ ಏನು ? "

" ನಿಮಗಾದರೂ ಆ ಕಲ್ಲಪ್ಪನಿಗೇ ಕೊಡಬೇಕೆನ್ನುವದರೊಳಗ ಹಟ ವೇನು ? "

" ಕಲ್ಲಪ್ಪನಿಗಂತೂ ಕೊಡಿಸುವುದೇ ಇಲ್ಲ. ಆದರೆ ನಮಗೆ ಬೇಡ. ಜನ ನನಗ ಏನಂದಾರು ? ಮುಖದ ಮೇಲೆ ಉಗಳಬಹುದಲ್ಲ ನಾಳೆ, ನೋಡ ರಾಯನ ಹೊಲ ನಿನಗ ಖರೀದಿ ಮಾಡಿಸಿಕೊಟ್ಟೆನೆಂದರೆ...."

" ಏನ .ದುಡ್ಡ ಇಲ್ಲದೆ ಮಾಡಿಸಿಕೊಡತೀರಿ ಏನು ? ಇಲ್ಲದೊಂದ ಸಂಶಯ ತೆಗೆಯುವವರು ನೀವು."

" ದುಡ್ಡ ಕೊಟ್ಟರೂ ಬೇಡ. ಜನರಿಗೆ ಅನ್ನಲಿಕ್ಕೆ ಏಕೆ ಹಾದಿ ಮಾಡಿ ಕೊಡಬೇಕು ? "

ಈ ವಿಷಯಕ್ಕೆ ತಾತಪ್ಪನಿಗೂ ಗಂಗವ್ವನಿಗೂ ಮೂರು ನಾಲ್ಕು ದಿನ ಜಗಳ ನಡೆಯಿತು. ತಾತಪ್ಪ ತನ್ನ ಮಾತನ್ನು ಹಿಂದೆ ತಕ್ಕೊಳ್ಳಲಿಲ್ಲ. ಗಂಗ ವ್ವನಿಗೆ ಅನೇಕ ರೀತಿಯಿಂದ ತಿಳಿವಳಿಕೆ ಹೇಳಿದ. ಒಪ್ಪಿಸಿದ. ಇಷ್ಟು ಮಾಡ ಬೇಕಾದರೆ ತಾತಪ್ಪನು ಮಾತ್ರ, ಕಲ್ಲಪ್ಪನಿಗೆ ಹೊಲ ಕೊಡಿಸುವದಿಲ್ಲೆಂದು ಗಂಗವ್ವನಿಗೆ ವಚನ ಕೊಡಬೇಕಾಯಿತು.

ಇಷ್ಟಾಗಿಯೂ ಗಂಗವ್ವನಿಗೊಂದು ಸಮಸ್ಯೆಯುಂಟಾಯಿತು. ತಾನು ಹೊಲ ಕೊಳ್ಳುವಂತಿಲ್ಲ. ಸೆಟ್ಟಿಗೆ ಬಿಡಿಯಿಲ್ಲ. ಅಂದ ಮೇಲೆ ಬಾಬಣ್ಣನ

ಹೊಲಕ್ಕೆ ಕಲ್ಲಪ್ಪನೇ ಗಿರಾಕಿಯಾದಂತಾಯಿತಲ್ಲ. ಇದಕ್ಕೇನು ಮಾಡು ವುದು ? ಯೋಚಿಸಿ, ಯೋಚಿಸಿ ಮತ್ತೆ ಸೆಟ್ಟರ ಮನೆಗೆ ಹೋದಳು

" ಅಣ್ಣಾ, ನಮ್ಮದಂತೂ ಹೊಲ ತಗೊಳ್ಳುವುದು ನಿಂತಿತು. ದುಡ್ಡಿನ ವ್ಯವಸ್ಥೆ ಆಗುವಂತೆ ತೋರುವದಿಲ್ಲ. ಮನೆಯೊಳಗಿನ ಗಂಡಸರು ಮನಸ್ಸು ಮಾಡದಿದ್ದರ ನಾ ಏನು ಮಾಡಬೇಕು? ನೀವೇ ಏನಾದರ ಮಾಡಿರಿ ಹೊಲ ಮಾತ್ರ ಕೈಯೊಳಗಿಂದ ಬಿಡಬೇಡಿರಿ ನನ್ನ ಜೀವ ಹರಿಯುವದಾದರೂ ಏನು ಮಾಡಲಿ ? ನನ್ನ ಕೈ ಸಾಗದಾಗೇದ ಹೆಂಗಸಬಾಲಿ ನಾ '' ಎಂದು ಹೇಳಿದಳು.

" ನೀ ಹೊಲ ಕೊಳ್ಳುವಿ ಅನ್ನೋಣ, ನನಗ ದುಡ್ಡ ಸುಸೂತ್ರ ಬರತಾವಂತ ತಿಳಿದಿದ್ದೆ ನಾ. ಇದೇನ ಮಾಡಿದಿ ಮತ್ತ ?"

ಬೇಕಂತಲೇ ಸೆಟ್ಟಿ ಮಾತೊಗೆದ.

" ದುಡ್ಡ ಯಾತಕ್ಕ ಬೇಕು ? ಹೊಲಾನು ಬರತದ ತಗೊಳ್ಳರಿ ಅಲ್ಲ !"

" ಏನ ಮಾಡೋದ ಜಡವೀ ತಕ್ಕೊಂಡ ? ನಿನಗ ಹಣ ಕಡಿಮೆ ಬಿದ್ದಿದ್ದರೆ ನನ್ನ ಸ್ಟಾಂಪ ಬರಿದುಕೊಡತೇನ. ನೀನೇ ತಗೋಬೇಕಾದರ. ಸಾವಕಾಶ ನನ್ನ ರೂಪಾಯಿ ಕೊಟ್ಟೇಯಂತ. ನಿನ್ನಮೇಲೆ ಇದ್ದಮೇಲೆ ಏನು ?" ಸೆಟ್ಟಿ ಮತ್ತೂ ಮುಂದೆ ಜಾಲ ಬೀಸಿದ.

" ತಗೊಳ್ಳೋದ ಆದರ ನೀವೇ ತಗೊಳ್ಳರಿ. ಇನ್ನೂ ನಾ ಮಾಡಿಸಿ ಕೊಡತೇನ. ಇನ್ನೊಬ್ಬರಿಗೆ ಹೋಗುವುದು ಬೇಡ. ನಿಮ್ಮ ಕಡೆಗೆ ಇದ್ದರ ನನಗ ಉಪಯೋಗಕ್ಕ ಬಂದೀತು. ನನ್ನ ಕಡೆಗೆ ಇದ್ದರ ನಿಮಗ ಬಂದೀತು ''

" ನೀ ಏನ ಮಾಡಿಸಿ ಕೊಡುವಿ, ನಿನ್ನ ತಲೆ ಹೋಗು. ಅಲ್ಲಿ ಗೌಡ, ಕಲ್ಲಪ್ಪ ಕತ್ತಿ ಮಸೆದಕೊಂಡ ಕೂತಾರ. ಕೈಲಾಗದಕ್ಕ ಇಲ್ಲಿ ಬಂದೀದಿ ಓಡಿ." ಸೆಟ್ಟಿ ಗಂಗವ್ವನನ್ನು ಕೆರಳಿಸಿದ.

" ನಾ ಕೊಳ್ಳದಿರುವುದಕ್ಕೆ ಬೇರೆ ಕಾರಣ ಅದ. ನೀವು ಕೊಳ್ಳಲಿಕ್ಕೆ ಸಿದ್ಧ ಆಗಿರಿ. ನಿಮಗ ಮಾಡಿಸಿಕೊಡದಿದ್ದರೆ ನನಗ ಗಂಗವ್ವ ಅಂತ ಕರೆಯಬೇಡಿರಿ, ಆಯ್ತಿಲ್ಲೋ? ಇನ್ನೇನ ಅನ್ನೋದ ಅದ ನಿಮ್ಮದು? '' ಗಂಗವ್ವ ಜಿದ್ದಿನಿಂದಲೇ ಕೇಳಿದಳು.

" ಏನ ಮಾಡುವಿ ಮಾಡೋಗ ನೀನೇ. ''

ಎಂದು ಸೆಟ್ಟಿ ನಿರಾಸಕ್ತ ಸ್ವರದಲ್ಲಿ ಒಪ್ಪಿಬಿಟ್ಟ.

ಅತ್ತ ಕಲ್ಲಪ್ಪನಂತೂ ಗೌಡನಿಗೆ ಸ್ಪಷ್ಟವಾಗಿ ಹೇಳಿದ್ದ, ಹೇಗಾದರೂ ಮಾಡಿ ಬಾಬಣ್ಣನ ಹೊಲವನ್ನು ತನಗೆ ಮಾಡಿಸಿಕೊಟ್ಟರೆ ನೂರು ರೂಪಾಯಿ ಎಲೆ ಅಡಿಕೆಗೆಂದು ಕೊಡುವೆನೆಂದು. ಅದಕ್ಕೆ ಒಪ್ಪಿ ಗೌಡನೂ ಕಲ್ಲಪ್ಪನಿಗೆ ಆಶ್ವಾಸನ ಕೊಟ್ಟಿದ್ದ.

" ಎಲ್ಲಿ ಹೋಗತದ ಬಿಡು ಹೊಲ. ಇಷ್ಟೇಕೆ ಗಡಬಿಡಿ ಮಾಡತಿ! ತಾನೇ ಬರತದ "

" ಇಲ್ಲರೀ ಗೌಡರ ಪರಿಸ್ಥಿತಿ ಹಾಗಿಲ್ಲ. "

" ಹೆಚ್ಚಿಗೆ ಮಾತಾಡಬೇಡ ಹೋಗಿನ್ನ. ನನ್ನ ಕಡೆಗೆ ಹತ್ತಿತದು. "

ಕಲ್ಲಪ್ಪನಿಗೆ ಇಷ್ಟು ಆಶ್ವಾಸನವಿತ್ತ ಗೌಡನು ಸುಮ್ಮನೆ ಕೂಡುವಂತಿರಲಿಲ್ಲ. ಬಾಬಣ್ಣ ನೆಟ್ಟಗಾಗಿ ಹೊರಗೆ ಬರುವದನ್ನೇ ಕಾಯುತ್ತಿದ್ದ. ಬಾಬಣ್ಣ ಅಲ್ಲಿ ಇಲ್ಲಿ ತಿರುಗಾಡುವನು. ಬೇನೆಯಿಂದ ಎದ್ದಿರುವನೆಂದು ಚಂದ್ರಪ್ಪನ ಮನೆಗೆ ಒಂದು ದಿನ ಊಟಕ್ಕೆ ಹೋಗಿದ್ದ. ಬಾಯಿಗೆ ರುಚಿ ಬರಲೆಂದು ಗಂಗವ್ವನೂ ಒಂದು ದಿನ ಅಡಿಗೆಮಾಡಿ ಕಳಿಸಿದ್ದಳು. ಎಂಬುದನ್ನೆಲ್ಲ ಗೌಡ ಜನರಿಂದ ಕೇಳಿ ತಿಳಿದ ಆಮೇಲೆ ಒಂದುದಿನ ಬಾಬಣ್ಣನನ್ನು ಕರೆಯ ಕಳುಹಿದ. ಬಾಬಣ್ಣನ ಮೈಯಲ್ಲಿ ಇನ್ನೂ ಅಷ್ಟು ಶಕ್ತಿ ಬಂದಿರಲಿಲ್ಲ. ಆದರೂ ಗೌಡರು ಕರೆದಿರುವರೆಂದು ಮೆಲ್ಲನೆ ಅವರ ಮನೆಗೆ ಹೋದ.

" ಏನ ಬಾಬು, ಬೇನೆ ನಿನ್ನಾ ಹಣ್ಣಮಾಡೇ ಒಗೆಯಿತಲ್ಲೋ! " ಗೌಡರು ಸಹಾನುಭೂತಿಯನ್ನು ತೋರಿದರು.

" ಹೌದರೀ. ಸತ್ತ ಸತ್ತ ಉಳಿದೆ. "

" ಈಗ ಎಲ್ಲಾ ಒಳ್ಳೇದ ಅನಸತದಲ್ಲ? "

" ಅನಸತದ. ಆದರೆ ಇನ್ನೂ ಮೈಯೊಳಗ ಶಕ್ತಿಯೇ ಇಲ್ಲ. ಬಾಯಿಗೆ ಅಡಿಗೆ ರುಚಿ ಹತ್ತುವದಿಲ್ಲ. ಇದ ನೋಡರಿ ನಾಲಿಗೆ. "

ಬೆಳೆದ ಕರೀ ಗಡ್ಡದೊಳಗೆ ನಡುವಿರುವ ಕೆಂಬಾಯಿಯನ್ನು ತೆರೆದು ಬಿಳಿಯ ನಾಲಿಗೆಯನ್ನು ಹೊರಗೆ ತೆಗೆದು ತೋರಿಸಿದ.

" ಅದಕ್ಕs ಏನಾದರೂ ತಿಂದ ಹೋದೀ ಅಂತ ಕರೆಯಿಸಿದ್ದೆ. "

ಆಯಿತು ಬಾಬಣ್ಣನಿಗೆ ಗೌಡರ ಮನೆಯ ಉಪ್ಪಿನಕಾಯಿ ರೊಟ್ಟಿಯ ಪ್ರಸಾದ ಸಿಕ್ಕಿತು. ಮನಸ್ಸು ಒಲಿಯಿತು. ಗೌಡರ ಬಗ್ಗೆ ತುಂಬ ಕೃತಜ್ಞತೆಯನ್ನೂ ಸೂಚಿಸಿದ. ಆಮೇಲೆ ಮಾತಿಗೆ ಮಾತು ಆರಂಭಿಸಿ ಗೌಡರು ಅಂದರು,—

“ಏನು ದುಡ್ಡಿನ ತಾಪತ್ರಯ ಬಹಳ ಆಗೇದ?”

“ಏನ ನಿಮ್ಮದಿಷ್ಟು, ಗಂಗವ್ವನದಿಷ್ಟು ಕೊಡೋದ ಅದ, ಇಷ್ಟೇ. ಏಕೆ?”

“ಏಕಿಲ್ಲ, ಸೆಟ್ಟಿ ಬೇರೆ ಬೆನ್ನ ಹತ್ಯಾನಂತಲ್ಲ?”

“ಅವನಿಗೆ ಹೊಲ ತೋರಸ್ತಿ ಹಚ್ಚಿ ಕಾಗದವನ್ನೇ ಮಾಡಿ ಕೊಟ್ಟಿರುವೆನಲ್ಲ!”

“ಅದೇ ಹೊಲ ಖರೀದಿ ಕೇಳತಾನಂತಲ್ಲ?”

“ನನಗೇನ ಗೊತ್ತಿಲ್ಲ ಇದು!”

ಬಾಬಣ್ಣ ಬೆರಗಿನಿಂದ ಉದ್ಗರಿಸಿದ. ನಿಜವಾಗಿ ಅವನಿಗೆ ಇದೇನೂ ಗೊತ್ತಿರಲಿಲ್ಲ. ಹೊರಗಿನವರೇ ಇಷ್ಟೆಲ್ಲ ಕೆಲಸ ನಡೆಯಿಸಿದ್ದರು.

“ನನಗಾದರೂ ಏನು ಗೊತ್ತು? ಮುಂಜಾನೆ ಯಾರೋ ಬಂದ ಹೇಳಿದ ರಾತ್ರೆ, ಅದಕ್ಕ ಕರೆದ ಕೇಳಿದೆ. ಈಗ ಹೊಲ ಗಿಲ ಕೊಟ್ಟೀ ಮತ್ತ!” ಎಚ್ಚರಿಸಿದಂತೆ ಗೌಡರು ನುಡಿದರು.

“ನಿಮ್ಮನ್ನ ಕೇಳದ ಯಾವದ ಮಾಡಿದೇನ ಗೌಡರ?”

“ಅಲ್ಲೋ, ಹುರುಟ ಹುಡುಗರು ನೀವು, ಅದಕ್ಕೆ ಹೇಳಿದೆ. ಕೊಡೋದೇ ಆದರ ಒಳ್ಳೆಯ ಗಿರಾಕಿಯನ್ನ ನೋಡೋಣಲ್ಲ. ನಾಲ್ಕು ದುಡ್ಡು ಹೆಚ್ಚಿಗೆ ಸಿಕ್ಕಿರಬೇಕು. ಹಿಂಪಕ್ಕ ಯಾರನ್ನ ಕೇಳದೆ ಕಲ್ಲಪ್ಪನಿಗೆ ಕೊಟ್ಟೆಯಲ್ಲ ಹಾಗೆ ಆಗುವದು ಬೇಡ, ತಿಳದವರು ನಾವೆಲ್ಲ ಇರಲಿಕ್ಕಾಗಿ. ಯಾಕೋ?”

ಬಾಬಣ್ಣನಿಗೆ ನಿಜವಾಗಿಯೂ ಇನ್ನೂ ಹೊಲ ಮಾರುವ ವಿಚಾರ ತಲೆಯಲ್ಲಿ ಉದ್ಭವಿಸಿರಲಿಲ್ಲ. ಆದರೆ ಗೌಡನ ಮಾತು ಮಾತ್ರ ಆ ವಿಚಾರಕ್ಕೆ ಎಡೆಮಾಡಿಕೊಟ್ಟಿತು. ಸೆಟ್ಟರ ಸಾಲ, ಗೌಡರ ಅಂಗಡಿಯ ಲೆಕ್ಕ, ಗಂಗವ್ವನ ಹಣ, ಇವೆಲ್ಲವುಗಳನ್ನೂ ತೀರಿಸಬೇಕಾದರೆ ಇನ್ನೊಂದು ಕೂರಿಗೆ ಹೊಲ ಕೊಡದೆ ಗತಿಯಿಲ್ಲವೆಂಬುದು ಅವನಿಗೆ ಹೊಳೆಯಿತು. ಬಿತ್ತಿಗೆಯ

ಕಾಲಕ್ಕೇನೇ ಬೇನೆ ಬಿದ್ದುದರಿಂದ ಅನ್ಯರು ಹೇಗೋ ಬಿತ್ತಿದ್ದರು. ಹೊಲ ಗಳಲ್ಲಿ ಬೆಳೆ ಚನ್ನಾಗಿರಲಿಲ್ಲ. ಎತ್ತುಗಳು ಇಲ್ಲದುದರಿಂದ ಬೇಸಿಗೆಯಲ್ಲಿ ಅಡವಿಯ ಕೆಲಸವೂ ಒಳ್ಳೆಯದಾಗಿರಲಿಲ್ಲ. ಈ ಕಾರಣವೂ ಒಂದು ಸೇರಿತ್ತು. ಆದುದರಿಂದ ಬರುವ ಸುಗ್ಗಿಗೆ ಬೆಳೆ ಬರುವುದು ಅಷ್ಟಕ್ಕಷ್ಟೇ. ಅಂದ ಮೇಲೆ ಸಾಲ ತೀರಿಸುವ ಬಗೆಯೆಂತು? ಬಾಬಣ್ಣ ಈ ವಿಚಾರದಲ್ಲಿರುವಾಗಲೇ ತಾತಪ್ಪ ಹೊಲ ಕೊಟ್ಟು ಸಾಲವನ್ನೆಲ್ಲ ತೀರಿಸುವುದು ಒಳ್ಳೆಯದೆಂದು ಸೂಚಿ ಸಿದ. ಅವನೆಂದೂ ಹಾಗೆ ಸೂಚಿಸುವವನಲ್ಲ. ಆದರೆ ಬಾಬಣ್ಣನಿಗೆ ನೆರ ವಾಗಬೇಕೆಂದು ಲವಲವಿಕೆಯುಳ್ಳ ಏಕಸಂಬಿಯ ಮಾವ ಕೆಲ ದಿನಗಳ ಹಿಂದೆ ಆಕಸ್ಮಾತ್ ತೀರಿಕೊಂಡಿದ್ದ. ಅತ್ತಕಡೆಯ ಸಹಾಯದ ಆಶೆ ಹಿಂಗಿ ದಂತಾಗಿತ್ತು. ಇನ್ನು ಹೀಗೆಯೇ ಬಿಟ್ಟರೆ ಬಡ್ಡಿಯು ಏರುವುದು. ಮುಂದೆ ಒಂದು ಕೂರಿಗೆ ಏಕೆ ಎರಡು ಕೂರಿಗೆ ಕೊಟ್ಟರೂ ಆ ಸಾಲ ಕಳೆಯಲಿಕ್ಕಿಲ್ಲ. ಮೇಲಾಗಿ ಈಗ ಬಾಬಣ್ಣನ ಮನೆಯಲ್ಲಿ ಏನೂ ಇಲ್ಲ. ಚಂದ್ರವ್ವ ಒಂದರ್ಧ ಚೀಲ ಜೋಳ ಕಡ ಕೊಟ್ಟಿರುವಳೆಂದೇ ಉಪಜೀವನ ಸಾಗಿದೆ. ನಾಳೆ ಇನ್ನೊಬ್ಬರ ಬಾಗಿಲಿಗೆ ಹೋಗದೆ ಗತಿಯಿಲ್ಲ. ನನ್ನಿಂದಾದರೂ ಇಂಥ ಸಹಾಯ ಏನಾದೀತು? ಅಂದ ಮೇಲೆ ಹೊಲ ಕೊಡಿಸಿ ಸಾಲ ತೀರಿಸು ವದೇ ಒಳಿತು. ಉಳಿದ ಎರಡು ಕೂರಿಗೆಯಾದರೂ ಚೊಕ್ಕ ಉಳಿಯುವುದು. ಯಾರ ಹಂಗೂ ಇಲ್ಲದೆ ದುಡಿದು ತಿಂದು ಇರಬಹುದು, ಎಂದುಕೊಂಡು ಅಳಿಯನಿಗೆ ಸಲಹೆಕೊಟ್ಟ. ಮಾವ ಅಳಿಯಂದಿರಿಬ್ಬರೂ ಕೂಡಿ ಹೊಲ ಮಾರುವದೆಂದು ನಿಶ್ಚಯಿಸಿದರು.

ಈ ನಿಶ್ಚಯಕ್ಕೆ ಬಂದೊಡನೆಯೇ ತಾತಪ್ಪ ಅಳಿಯನಿಗೆ ಒಂದು ಮಾತನ್ನು ಸೂಚಿಸಿದ,—

“ಏನಾದರೂ ಹೊಲ ಕಲ್ಲಪ್ಪನಿಗೆ ಮಾತ್ರ ಕೊಡಬೇಡ.”

ಬಾಬಣ್ಣ ಸುಮ್ಮನೆ ಇದ್ದ. ಸೋದರ ಮಾವ ಮುಂದೆ ಹೇಳಲಿಕ್ಕೆ ಆರಂಭಿಸಿದ,—

“ಯಾಕೆ ಅಂತ ಕೇಳು. ನಾ ಹೇಳುವೆ. ಸೆಟ್ಟಿ ಹೊಲ ಕೊಂಡರೆ ಇಂದಿಲ್ಲ ನಾಳೆ ಅವನು ಅದನ್ನು ಕೊಟ್ಟು ಹೋಗುವವ. ಆ ಕಾಲಕ್ಕೆ— ಯಾರು ಹೇಳಬೇಕು? ನಮಗೇ ಕೊಳ್ಳುವಷ್ಟು ಶಕ್ತಿ ಬರಲಿಕ್ಕಿಲ್ಲೆಂದು ಏತರ

ಮೇಲಿಂದ? ಅದೊಂದು ಕೂರಿಗೆಯ ತುಂಡಿನಲ್ಲಿ, ಅಲ್ಲಿ ಶೆಟ್ಟಿ ಏನು ಮಾಡ ಬೇಕಾಗಿದೆ? ನಮ್ಮ ಹೊಲ ನಮಗೆ ತಿರುಗಿ ಸಿಗುವುದು. ಅದೇ ಕಲ್ಲನ ಕಡೆಗೆ ಹೋದರೆ ಮಾತ್ರ ತಿರುಗಿ ಬರಲಿಕ್ಕೆ ಸಾಧ್ಯವಿಲ್ಲ. ಇದನ್ನು ಕೊಂಡು ತನ್ನ ಹೊಲದಲ್ಲಿ ಕೂಡಿಸಿಕೊಂಡು ಬಿಡುವನಾತ. ಆಗ ಹೊಲ ಕಬ್ಬಿಣ ನೀರು ಕುಡಿದಂತೆಯೇ."

"ಇನ್ನೇನ ತಿರುಗಿ ನಾವು ಹೊಲ ಕೊಳ್ಳತೇವ!" ಬಾಬಣ್ಣ ಸಿಟ್ಟು ಸುರು ಬಿಟ್ಟ.

"ಹಾಗೆ ತಿಳಿಯಬೇಡ ನೀ. ಏನು ಮಾಡಿದರೂ ಮುಂದಿನ ದಾರಿ ಕಾಯ್ದುಕೊಂಡೇ ಮಾಡಬೇಕು, ತಿಳಿಯಿತು?"

"ಸೆಟ್ಟಿ ಹೊಲ ತಗೋಲಿಕ್ಕೆ ಒಂದ ಒಪ್ಪಬೇಕಲ್ಲ?"

"ನೋಡೋಣ. ಆ ಮಾತ ಇನ್ನ ಮೇಲೆ. ಆದರೆ ಕಲ್ಲಪ್ಪನಿಗೆ ಹೊಲ ಕೊಡತಕ್ಕದ್ದಲ್ಲ, ಈ ಮಾತ ಮೊದಲ ಗಟ್ಟಿ ಹಿಡಿಯೋದು."

ಬಾಬಣ್ಣನೂ ಒಪ್ಪಿದ. ಮಾವನ ಮಾತು ಸರಿಯೆನಿಸಿತು. ಈ ಮಾತು ಮೊದಲು ಮಾವನಿಂದ ಬಂದಾಗ ಹೊಲವನ್ನು ಗಂಗವ್ವನಿಗೆ ಕೊಡಲಿಕ್ಕೆ ಹೇಳಬಹುದೆಂದು ಆತ ಬಗೆದಿದ್ದ. ಮಾವನ ಮಾತು ಆ ದಿಶೆಯಲ್ಲಿ ಮುಂದರಿ ಯಲಿಲ್ಲ. ಅದಕ್ಕಾಗಿಯೇ ಬಾಬಣ್ಣ ನಂಬಿದ್ದು.

ಇದೆಲ್ಲ ಆಯಿತು. ಇನ್ನು ಹೆಂಡತಿಯನ್ನು ಒಪ್ಪಿಸುವ ಭಾರವೊಂದು ಉಳಿಯಿತಲ್ಲ. ಅವಳಿಗೆ ಏನೆಂದು ಹೇಳುವುದು, ಹೇಗೆ ಹೇಳುವುದು, ಎಂದು ಇಡೀ ಒಂದು ದಿನ ವಿಚಾರಿಸಿದ. ಕೊನೆಗೆ ಸಾಯಂಕಾಲ ಊಟಕ್ಕೆ ಕುಳಿ ತಾಗ ಮೆಲ್ಲನೆ ಮಾತಿಗೆ ಆರಂಭಿಸಿದ,—

"ಜನರ ಹೊಲ ಮಾರ ಕೇಳಲಿಕ್ಕೆ ಹತ್ತಿದ್ದಾರೆ."

"ನೀವು ಗಿರಾಕಿಗೆ ಹಚ್ಚಿರಬೇಕು. ಇಲ್ಲಾದರ ಮಂದಿಗೇನ ಕನಸ ಬೀಳತದ ಏನು?" ಬಿಗುಹಿನಿಂದ ಉತ್ತರ ಕೊಟ್ಟಳು ಪದ್ಮಾವತಿ.

ಬಾಬಣ್ಣನ ಎದೆ ತತ್ತರಿಸಿತು. ಮೌನವಾಗಿಯೇ ಸ್ವಲ್ಪ ಹೊತ್ತು ಊಟ ಮಾಡಿದ. ಆ ಮೇಲೆ ನಡುವೊಮ್ಮೆ ನೀರು ಕುಡಿದ. ಗಂಟಲು ಸರಿ ಪಡಿಸಿಕೊಂಡ. ಹಾಗೆಯೇ ಏನೋ ಹೇಳಬೇಕೆಂದಿದ್ದ. ಅಷ್ಟರಲ್ಲಿಯೇ ಪದ್ಮಾವತಿ ಅಂದಳು. ಅವಳ ಗಂಟಲ ಸಿರಗಳು ಬಿಗಿದು ಬಂದಿದ್ದುವು.

" ಕೊಡುವಂತಹ ಸ್ಥಿತಿ ಬಂದ ಮೇಲೆ ಎಲ್ಲರೂ ಕೇಳುವವರೇ ಅಲ್ಲ."

" ಅಂದರೆ ? "

" ಹನ್ನೆರಡ ಕಡೆಗೆ ಸಾಲ. ಹೊಲಗಳ ಬೆಳೆ ಹೀಗೆ. ಯಾರಿಗಾದರೂ ಮೇಲೆಯೇ ಕಾಣತದ, ಹೊಲ ಮಾರದ ಗತಿ ಇಲ್ಲಂಬೂದು. "

" ಇರಲಿ, ಕೇಳತಾರಂತ ನಾವೇನ ಕೂಡಲೆ ಕೊಡೋದ ಅದ ಏನು ? ಆದರ ನಮ್ಮ ನಮ್ಮೊಳಗಾದರೂ ವಿಚಾರ ಒಂದ ಬೇಕಲ್ಲ. "

ಪದ್ಮಾವತಿಯ ಒಪ್ಪಿಗೆ ಪಡೆಯುವ ಮಾರ್ಗದಲ್ಲಿ ಬಾಬಣ್ಣ ಮಾತನ್ನು ಮುಂದರಿಸಿದ. ಆದರೆ ಅವಳು ನುಡಿದುದು ಹೀಗೆ.

" ಕೇಳತಾರ ಕೇಳತಾರ ಅನಲಿಕ್ಕೆ ಕಲ್ಲಪ್ಪನ ಹೊರತಾಗಿ ಯಾರಿದ್ದಾರ ಕೇಳುವವರು ? " ಸ್ವಲ್ಪ ರಭಸದ ಸ್ವರದಲ್ಲಿತ್ತು ಮಾತು.

" ಅವನೇಕೆ ಕೇಳಬೇಕು ? " ಬೆರಗಿನಿಂದ ಕೇಳಿದ ಬಾಬಣ್ಣ.

" ನೀವು ಬೇನೆ ಬಿದ್ದಾಗಲೇ ಕೇಳಲಿಕ್ಕೆ ಬಂದಂಥವ, ಈಗ ಸಹಜ ಕೇಳ್ಯಾನಲ್ಲ ? "

ಬಾಬಣ್ಣನಿಗೆ ಈಗ ಲಕ್ಷ್ಯದಲ್ಲಿ ಬಂತು. ತಾತಪ್ಪನ ಮಾತಿನ ಅರ್ಥ ಇನ್ನಷ್ಟು ವಿಶಾಲವಾಯಿತು. ಅಂತಲೇ ಆತ ಹೆಂಡತಿಗೆ ಸ್ಪಷ್ಟವಾಗಿ ಹೇಳಿದ.

" ಅವನಿಗಂತೂ ಹೊಲ ಕೊಡುವದೇ ಇಲ್ಲ. "

" ಅವನೆಲ್ಲಿ ಬಿಡತಾನ. ನಮ್ಮ ಸುತ್ತ ಕೈತೊಳಕೊಂಡೇ ಬೆನ್ನ ಹತ್ತಿರುವ. ಹೆಣ ಹೋಗಲಿ ಅವನದು. ನನ್ನ ಮಕ್ಕಳ ಕೈಯೊಳಗ ಪರಟಿಕೊಟ್ಟ ತಿರಗಿಸೇನಂತ ಹರಕೆ ಹೊತ್ತ ಕುಳತಾನ ಏನೋ. ಮದುವಿಯೊಳಗಿಂದೂ ಕಾಡೋದ ಅಂದರ. "

" ಯಾಕ ಇನ್ನೊಬ್ಬರಿಗೆ ಅನ್ನೋದು? ನಮಗೇ ವೇಳೆ ಕೆಟ್ಟ ಹತ್ತಿದ." ಬಾಬಣ್ಣ ಹೆಂಡತಿಯನ್ನು ಸಮಾಧಾನಗೊಳಿಸಲು ಹೋದ.

" ಅವನ ಹೊಟ್ಟೆಯಿಂದೂ ಹೆಣ್ಣು ಮಕ್ಕಳ ಹುಟ್ಟಿದಾರಲ್ಲ. ಅವರಿಗೂ ನನ್ನ ಸ್ಥಿತೀನs ದೇವರ ತಂದಿಡಲಿ. ಕಾಣತಾ ಕಾಣತಾ. ಮದುವೆಯೊಳಗ ಎರಡ ನೂರ ರೂಪಾಯಿ ಎತ್ತಿ ಹಾಕಿ, ಹೊಲ ಬರಕೊಂಡ. ಕಡೆಗೆ ಖರೀದೀನೂ ತಗೊಂಡ ಬಿಡಬೇಕಂದರ? ನೀವ ಆದರೂ ಎಂಥವರು ? ಈಗ ಕೇಳಿದಂತೆ ಆಗ ಕೇಳಿದ್ದರ ಈ ಗತಿ ಯಾಕ ಬರತಿತ್ತು ? "

" ಆದದ್ದ ಆಗಿ ಹೋಯ್ತಲ್ಲ ! "

" ಎಲ್ಲಾ ಹೋದರೂ ಕೇಳುವದಿಲ್ಲ ನಾ. ಆ ಕಲ್ಲಪ್ಪಗ ಮಾತ್ರ ಹೊಲ ಕೊಡಬೇಡಿರಿ. ಹಿಂದಿನ ಸಲ ತಗೋಬೇಕಂತ ಮಾಡಿದ್ದಳು ಅನತಿದ್ದರಿ, ಆ ಗಂಗವ್ವ ತಗೊಂಡರೂ ಕೊಡಿರಿ ಇನ್ನೂ. ನನ್ನ ಕುಂಕುಮ ಉಳಿಸಿದ ಗರತಿಯ ಮಗಳ ಆಕೇ. ನಾಲ್ಕ ರೂಪಾಯಿ ಬಿಟ್ಟಕೊಡರಿ ಆಕೆಗಿನ್ನೂ. "

ಅಂತೂ ಬಾಬಣ್ಣನಿಗೆ ಹೆಂಡತಿಯ ಒಪ್ಪಿಗೆ ಈ ರೀತಿ ಸಿಕ್ಕಿತು. ಆದರೆ ಅವಳ ಕರುಳು ಎಷ್ಟು ಹುರಿಬಿದ್ದುವು ಎಂಬುದು ಅವನಿಗೆ ತಿಳಿಯದಿರಲಿಲ್ಲ. ಅವನ ಸ್ಥಿತಿಯೂ ಹಾಗೇ. ಆದರೂ ಮಾಡುವನೇನು ? ಪರಿಸ್ಥಿತಿಗೆ ಬಾಗಿ ಹೋಗಲೇ ಬೇಕಷ್ಟೇ ?

ನಾಲ್ಕು ದಿನಗಳಲ್ಲಿ ಬಾಬಣ್ಣ ಹೊಲವನ್ನು ಮಾರಾಟಕ್ಕೆ ತೆಗೆದಿರುವ ನೆಂಬ ಸುದ್ದಿ ಊರೆಲ್ಲ ಹಬ್ಬಿತು. ಪದ್ಮಾವತಿ ಸ್ವತಃ ಹೋಗಿ ಗಂಗವ್ವನಿಗೆ ಹೊಲ ಕೊಳ್ಳಲಿಕ್ಕೆ ತಿಳಿಸಿ ಬಂದಳು. ಅವಳಿಗಾದರೆ ನಾಲ್ಕು ರೂಪಾಯಿ ಕಡಿಮೆಗೂ ತಾವು ಹಿಂಜರಿಯುವದಿಲ್ಲವೆಂದು ಹೇಳಿದಳು. ಪದ್ಮಾವತಿ ಮನೆ ಮುಟ್ಟಿ ಬಂದುದಕ್ಕೆ ಗಂಗವ್ವನಿಗೂ ಮತ್ತೊಮ್ಮೆ ಹೊಲ ಕೊಳ್ಳಬೇಕೆಂಬ ಉತ್ಸಾಹ ಉಕ್ಕಿತು. ಪದ್ಮಾವತಿಯೇ ಹೀಗೆನ್ನುವಾಗ ತಾತಪ್ಪನ ಸಂಶಯಕ್ಕೆ ಅರ್ಥವೇನಿದೆ ? ಎಂದುಕೊಂಡಳು.

ಚಂದ್ರವ್ವನಿಗೂ ಅವಳ ಮಗ ಆದಪ್ಪ ಮಾಸ್ತರರಿಗೂ ಈ ಸುದ್ದಿ ತಿಳಿದು ಕೆಡಕೆನಿಸಿತು. ಆದರೆ ಬಾಬಣ್ಣನ ಪ್ರಪಪಂಚ ಮುಗಿಲೇ ಹರಿದು ಬಿದ್ದಂತೆ, ಅದಕ್ಕೆ ತಮ್ಮಂಥವರು ಕೈ ಹಚ್ಚುವದು ಸಾಧ್ಯವಿಲ್ಲ. ಎಂದು ಅರಿತಿದ್ದಳಾದರೂ ಮಗನ ಮುಂದೆ ಚಂದ್ರವ್ವ ಮಾತು ತೆಗೆದಳು,—

" ಬಾಬು ಮತ್ತೂ ಒಂದ ಕೂರಿಗೆ ಹೊಲ ಕಳೆಯುವನು. "

" ಹೀಗೆ ಸಿಕ್ಕ ಸಿಕ್ಕ ಹಾಗೆ ಪ್ರಪಂಚ ಮಾಡಿದ ಮೇಲೆ ಹೋಗೋ ದಲ್ಲ ! "

" ಸಿಕ್ಕ ಸಿಕ್ಕಂತೆ ಅವನಾದರೂ ಏನ ಮಾಡಿದಾನು ? "

" ಏನಾದರೂ ಅವನು ಮೈಮುರಿಯುವಂತೆ ದುಡಿಯುವ ಮನುಷ್ಯ ಏನ ಅಲ್ಲ. ಇನ್ನ ಆ ಪದಮವ್ವ ಹೇಗೋ ಏನೋ ? "

"ಆಕೆ ಜನ್ಮಕ್ಕ ಹುಶ್ಯಾರ ಇದ್ದಾಳ. ಆದರ ಮೂರ ನಾಲ್ಕ ವರ್ಷ ಆಯ್ತು, ಲಕ್ಷ್ಮಿನೇ ಅವರ ಕೈ ಹಿಡಿಯವಲ್ಲಳು. ಭೂಮಿ ಬೆಳೆದರೆ ಎಲ್ಲ. ನಿನ್ನ ಪಗಾರ ಇಷ್ಟ ಬರತದ, ಏನ ಆಗತದ ಹೇಳು?" ಚಂದ್ರವ್ವ ಮಗನಿಗೆ ಕೇಳಿದಳು.

"ಈಗೊಂದ ಯುದ್ಧ ನಡೆದದಂತ ಹೀಗೆ. ಇಲ್ಲಾದರೆ ಏನಾಗಿತ್ತು?"

"ಅವನದೂ ಹಾಗೇ ಅಲ್ಲ. ಅವರವ್ವ ಈ ಹುಡುಗನ ಮೇಲೆ ತಪ ತೆಗೆದಿದ್ದಳು. ಆಕೆ ಇರುವ ತನಕ ಆ ಹೊಲದೊಳಗಿನ ಒಂದ ಗಿಡದ ಟೊಂಗೆ ಕಡಿಯಗೊಟ್ಟಿರಲಿಲ್ಲ. ಈತ ಮೂರ ವರ್ಷದೊಳಗ ಎರಡ ಕೂರಿಗೆ ಹೊಲಾ ಹಾಕಿದ."

"ಏನ ವೇಳೆ ಕೆಟ್ಟ. ಮತ್ತೇನಿಲ್ಲ. ಈ ಯುದ್ಧದಿಂದ ಶ್ರೀಮಂತರ ಆದವರೂ ಇಲ್ಲೇನ?"

ಎಂದು ಆದಪ್ಪ ಮಾಸ್ತರ ಎದ್ದು ಹೊರಗೆ ಹೋದ. ಬಾಬಣ್ಣನು ಹೊಲ ಕಳೆದುಕೊಳ್ಳುತ್ತಿರುವುದಕ್ಕೆ ಅವನ ಮನಸ್ಸು ನೊಂದಿರಲಿಲ್ಲವೆಂತಲ್ಲ. ಆದರೆ ಮಾಡುವದೇನು? ಸಹಾಯ ಮಾಡಬೇಕೆಂದರೆ ತನ್ನ ಕೈಯಲ್ಲಿ ಹಣ ಇಲ್ಲ. ತಂದೆ ತನ್ನ ಮಾತು ಕೇಳುವಂತಿಲ್ಲ. ಮೇಲಾಗಿ ಬಾಬಣ್ಣನೂ ತಾವು ಹೇಳಿದಂತೆ ಕೇಳಿ ನಡೆಯುವದಿಲ್ಲ. ದೊಡ್ಡಸ್ತಿಕೆ ಬೇಕು, ಖರ್ಚುಮಾಡ ಲಿಕ್ಕೆ ಬೇಕು, ದುಡಿಯಲಿಕ್ಕೆ ಬೇಡ. ಇನ್ನೊಬ್ಬರಲ್ಲಿ ಕೆಲಸಕ್ಕೆ ಹೋಗಲಿಕ್ಕೆ ಹಿಂಜರಿಯುವ. ಮಾನ ಮುಕ್ಕಾಗುವದೆನ್ನುವ. ಇಂಥವರಿಗೆ ನಾವೇನು ಮಾಡುವುದು? ಎಂದುಕೊಂಡು ಅವನ ವಿಚಾರವನ್ನೇ ಬಿಟ್ಟುಬಿಟ್ಟ.

ಬಾಬಣ್ಣ ಹೊಲ ಮಾರುವ ಸುದ್ದಿ ಊರಲ್ಲಿ ಹರಡುತ್ತಲೇ ಸೆಟ್ಟಿ ತಾನಾಗಿಯೇ ಎರಡು ಸಲ ಗಂಗವ್ವನ ಮನೆತನಕ ಬಂದು ಹೋದ. ಹೊಲ ಕೊಡುವ ಮಾಲಕನನ್ನು ಮಾತ್ರ ಮಾತಾಡಿಸಲಿಲ್ಲ. ತನ್ನ ಬಿಗುವಿನಲ್ಲಿಯೇ ಇದ್ದ. ಇಲ್ಲಿ ಸೂತ್ರ ತಿರುವಿದರೆ ನಾಕೆಂದು ಭಾವಿಸಿದ್ದ. ಅಂತಲೇ ಗಂಗವ್ವ ನನ್ನು ಆತ ಮೊರೆಹೊಕ್ಕುದು.

ಗೌಡ ನೇರವಾಗಿ ಬಾಬಣ್ಣನನ್ನು ಕರೆಯಿಸಿದ.

"ನನ್ನ ಕೇಳದ ಹೊಲದ ಮಾತ ಯಾರಿಗೂ ಕೊಡಬೇಡ." ಎಂದೂ ಹೇಳಿದ.

" ಗಂಗವ್ವನಿಗೆ ಕೊಟ್ಟಂತೆ ಆಗೇದ." ಎಂದು ಬಾಬಣ್ಣನೂ ಹೇಳಿದ.

ಇಷ್ಟು ಹೇಳಿದರೆ ಗೌಡರು ಹೊರಗಿನ ಗಿರಾಕಿಗಳ ಹೆಸರನ್ನು ಹೇಳ ಬಹುದೆಂದು ಯೋಚಿಸಿ ಹಾಗೆ ಹೇಳಿದ ಅದು ನಿಜವೂ ಆಯಿತು.

" ಆ ಅಪ್ಪಣ್ಣನ ಏನ ಸುಡತಿ. ನಿನಗ ಒಳ್ಳೇ ಗಿರಾಕಿ ಗಂಟ ಹಾಕಿ ಕೊಡತೇನಿ ಎಲ್ಲಾನೂ ಮಾಡಿಕೊಡತೇನ. "

" ನಿಮ್ಮ ಸ್ವಂತಕ್ಕೇನು ಅಲ್ಲ. ಅಲ್ಲವೇನು ? "

" ನನಗ ಅಂತ ತಿಳಿ ನೀ. "

" ಅಂದರ? " ಸ್ವಾಭಾವಿಕವಾಗಿ ಬಾಬಣ್ಣನ ಬಾಯಿಂದ ಮಾತು ಬಂತು.

" ಅವನೂ ಏನ ನಿನಗ ಹೊರಗಿನವನಲ್ಲ. ನಿಮ್ಮ ಕಕ್ಕನೇ. "

" ಕಲ್ಲಪ್ಪ ಕಕ್ಕನಿಗಲ್ಲ? ಹೊಲವನ್ನೇ ಕೊಡುವದಿಲ್ಲ ಬಿಡರಿ ನಾ ಅವನಿಗೆ. "

ಬಾಬಣ್ಣ ಸಷ್ಟವಾಗಿ ಹೇಳಿದ.

" ಯಾಕೋ? ಗಂಗಾ ಚಪಾತಿ ಸಕ್ಕರಿ ತಿನಸಿದಳೇನೋ ನಿನಗ? "

ಸ್ವಲ್ಪ ಬಿರುಸಾಗಿ ಗೌಡ ನುಡಿದ. ತಮ್ಮಲ್ಲಿ ನೀರು ತರುವ ಆಳು ಹೀಗೆ ತಮ್ಮ ಮಾತಿಗೆ ಎದುರು ಹೇಳಿದಮೇಲೆ ಅವರಿಗೆ ಸಹನವಾದೀತೆ? ಚೆನ್ನಾಗಿ ರಣಕಹಳೆಯನ್ನೇ ಊದಿದ.

" ಚಪಾತಿ ಗಿಪಾತಿ ತಿನಸಿದರೆ ಹೊಲ ಕೊಡತಾರ ಏನರಿ? " ಎಂದು ನಕ್ಕ ಬಾಬಣ್ಣ.

ವ್ಯವಹಾರ ಅರಿಯದ ಹುಡುಗ ಬಾಬಣ್ಣ. ಸಹಜ ಮಾತಾಡಿಬಿಟ್ಟ.

" ಆಮೇಲೇನ, ಆಕೆ ಮಗಳ ಮೇಲೆ ಕಣ್ಣು ಇಟ್ಟಿರುವಿ ಹೌದ? "

ಅಣಕದ ಸ್ವರದಲ್ಲಿ ಗೌಡ ಕೇಳಿದ. ಈಗ ಬಾಬಣ್ಣನ ತಲೆಯಲ್ಲಿ ಬೆಳಕು ಬಿತ್ತು. ವಿಚಾರಮಗ್ನನಾಗಿ ನಿಂತ. ತುಸು ಹೊತ್ತು ಸಂದಿಯಿತು. ಬಾಬಣ್ಣ ಮೆಲ್ಲನೆ ಎದ್ದು ನಡೆದ.

" ನಮ್ಮ ಅಂಗಡಿ ಲೆಕ್ಕಾ ತೀರಿಸಿ ಹೋಗು " ಗೌಡ ಆಜ್ಞಾಪಿಸಿದ.

" ಹೊಲ ಮಾರಿದ ಕೂಡಲೆ ತಂದ ಕೊಡತೇನೆ. "

"ಹೊಲ ಮಾರಿ ಕೊಡುವಿ? ಅದಾವ ತಗೋತಾನ ನೋಡೋದ ಅದ ನಿನ್ನ ಹೊಲಾ!" ವೀರಪ್ರತಿಜ್ಞೆಯನ್ನೇ ಗೌಡರು ಹೊತ್ತರು.

೧೦

ಸಾವಿನ ಹಾಸಿಗೆಯೊಳಗಿಂದ ಎದ್ದಿರುವೆ. ಇಷ್ಟು ಬೇನೆಯಿಂದ ಬಳಲಿದರೂ ಬಾಳವ್ವಕ್ಕ ನೋಡಲಿಕ್ಕೆ ಬರಲಿಲ್ಲ. ಹೊಲದ ವ್ಯವಹಾರದ ಗಡಬಡಿಯಲ್ಲಿ ಈ ಸಲ ನಾಗರ ಪಂಚಮಿಗೆ ಅವಳನ್ನು ಕರೆಯಿಸಲಿಕ್ಕೂ ಆಗಲಿಲ್ಲ. ಸತ್ತು ಬದುಕಿ ಉಳಿದಿರುವೆ. ನಾಳೆ ದೀಪಾವಳಿ ಹಬ್ಬ ಬಂದಿದೆ. ನಮ್ಮ ತಾಪತ್ರಯವೇನೋ ಹಾಗೇ ಇರುವುದು. ಅಕ್ಕನ ಕೈಯಿಂದ ಆರತಿಮಾಡಿಸಿಕೊಳ್ಳಲಿಕ್ಕೆ ಹೋಗಬೇಕು. ಎಂದೊಮ್ಮೆ ಬಾಬಣ್ಣ ವಿಚಾರಿಸಿದ.

ಮತ್ತೊಮ್ಮೆ ನಾನು ಹೋದರೂ ಹತ್ತಿಪ್ಪತ್ತು ರೂಪಾಯಿಗಳು ಬೇಕೇ ಬೇಕು. ಅದಕ್ಕಿಂತ ಹಬ್ಬಕ್ಕೆ ಅವಳನ್ನೇ ಇಲ್ಲಿಗೆ ಕರಕೊಂಡು ಬರುವುದು ಒಳಿತಲ್ಲವೆ? ಏನು, ನಾಲ್ಕೆಂಟು ದಿನಗಳಿದ್ದರೆ ಇನ್ನೊಂದು ನಾಲ್ಕು ಮಣ ಜೋಳವೇ ಹೆಚ್ಚಿಗೆ ಖರ್ಚಾದೀತು. ಜೋಳದ ಲೆಕ್ಕಹಾಕಿ ಅಕ್ಕನನ್ನು ಕರೆಯಲಿಕ್ಕೆ ಹೋಗದೆ ನಿಲ್ಲುವುದಿದೆಯೇ? ಹಬ್ಬದೊಳಗ ದೊಡ್ಡ ದೇವರಿಗೆ ಮಾಡತಕ್ಕ ವೆಚ್ಚ ಕಡಿಮೆ ಮಾಡಿದರಾಯಿತು. 'ದೇವರಿಗೆ ಮಾಡಿದ ಮನೆ ಕುಗ್ಗಿತು, ಹೆಣ್ಮಕ್ಕಳಿಗೆ ಮಾಡಿದ ಮನೆ ಏರಿತು' ಎಂದು ಹಿರಿಯರು ಹೇಳುವರಲ್ಲ. ಏನೇ ಇರಲಿ, ಅಕ್ಕನನ್ನು ದೀಪಾವಳಿಗೆ ಕರತರುವುದೆಂದೇ ನಿರ್ಣಯಿಸಿದ ಬಾಬಣ್ಣ. ಅದರಂತೆ ತನ್ನ ನಿರ್ಧಾರವನ್ನೂ ಹೆಂಡತಿಗೆ ತಿಳಿಸಿದ.

"ಇಷ್ಟು ಎರಡು ತಿಂಗಳ ಹಾಸಿಗೆಯೊಳಗ ಹೊರಳಾಡಿದಿರಿ. ಎರಡು ಕಾಗದ ಬರೆಯಿಸಿ ಹಾಕಿದೆವು. ಆದರೂ ನಿಮ್ಮ ಅಕ್ಕ ನೋಡಲಿಕ್ಕೆ ಬಂದಿಲ್ಲ. ಈಗ ನೀವೇ 'ನೆಟ್ಟಗಾಗಿ ಬಂದೆ ನೋಡು' ಎಂತ ಅವರ ಬಾಗಿಲಿಗೆ ಹೋಗತೀರಿ? ಅವರು ಮೊದಲ ಬರುವುದೋ ನೀವು ಮೊದಲ ಹೋಗುವುದೋ? ಕೂಸಿನಾಕೆ, ತನಗೆ ಬರಲಿಕ್ಕೆ ಆಗದಿದ್ದರೆ ತನ್ನ ಗಂಡನ ಕಳಿಸೋದಿತ್ತು?" ಎಂದು ಪದ್ಮಾವತಿ ಸ್ವಲ್ಪ ಹೆಚ್ಚಾಗಿಯೇ ಮಾತನಾಡಿದಳು.

"ಎಷ್ಟಾದರೂ ಅತ್ತೆಯ ಮನೆ ಸೊಸೆಯಾಕೆ. ಕಳಿಸಿದರೆ ಬರುವವಳು. ಅವಳ ಗಂಡ ಈಗ ಹೇಗೆ ಇದ್ದಾನೋ ಅವಳ ಕೂಡ. ಏನ ಗೊತ್ತು?"

“ನೆಟ್ಟಗ ಇರಲಿಕ್ಕೆ ಏನಾಗೇದ. ಆಗs ಈಕೆಗೆ ಮಕ್ಕಳ ಆಗಲಿಲ್ಲಂತ ವರ್ರವಸ್ಸ ಮಾಡತಿದ್ದ. ಮತ್ತೊಂದ ಮದುವೆ ಮಾಡಕೋಬೇಕಾಗಿತ್ತಂತ.”

“ಏನ ಹೇಳಲಿಕ್ಕೆ ಬರುವದಿಲ್ಲ ಆ ಜನರದ್ದು.” ಸ್ವಲ್ಪ ತಡೆದು ಮುಂದೆ ಹೇಳಿದ ಬಾಬಣ್ಣ. “ಯಾಕೋ ನನಗೂ ಮನಸ್ಸು ಹರಿಯಲಿಕ್ಕೆ ಹತ್ತೇದ. ಹಬ್ಬಕ್ಕ ದೇವರಿಗೂ ಮಾಡೋದ ಅದ. ಹಡೆದು ಹೋದಾಕೆ ಇನ್ನೂವರೆಗೆ ಬಂದಿಲ್ಲ ಬೇರೆ. ಇದೊಂದ ಸಲ ಕರಕೊಂಡ ಬರೋಣ.”

“ಇತ್ತಿನವರು? ಅವರಿಗೂ ತವರ ಮನೆ ಇದೆ. ಅವ್ವ ಇದ್ದಾಳ. ಅಣ್ಣಂದಿರ ಇದ್ದಾರ.” ಮುಖ ಸಪ್ಪಗೆ ಮಾಡಿ ಪದ್ಮಾವತಿ ಕೇಳಿದಳು.

“ಯಾಕೆ? ನಿನ್ನ ಯಾವಾಗ ಕಳಿಸುವದಿಲ್ಲ ಅಂದೇನ ನಾ?”

“ಕಳಸತೀರಿ ಅಲ್ಲ! ಇಂದ ಕಳಿಸಿದರ ಮರುದಿನ ಕರೆಯುಲಿಕ್ಕೆ ಬೆನ್ನ ಹಿಂದೇ ಬರತೀರಿ.”

“ಹೋಗ ಹಾಗಾದರೆ ಹಬ್ಬಕ್ಕ ನೀನೂ. ನಾನೂ ಅಕ್ಕನ ಮನೆಗೆ ಹೋಗಿ ಬರತೇನ.”

“ಕರೆಯಲಿಕ್ಕೆ ಬಾರದೆ ಹೋಗಲಿ?”

“ಅದಕ್ಕ ನಾ ಏನ ಮಾಡಲಿ ಹಾಗಾದರೆ?”

“ಕರೆಯಲಿಕ್ಕೆ ಬಾರದಂತೆ ಮಾಡಿ ಇಡತೀರಿ, ಮತ್ತ ನಾ ಏನ ಮಾಡಲಿ ಅಂತ ಕೇಳತೀರಿ ತಿರುಗಿ.”

“ನಾ ಏನ ಮಾಡಿದೆ?”

“ಹಿಂದ ಅಪ್ಪ ತೀರಕೊಂಡಾಗ ನಾಲ್ಕು ದಿನ ಹೆಚ್ಚಿಗೆ ನಿಲ್ಲುವದಕ್ಕೆ ಬಿಡಲಿಲ್ಲ. ಎಲ್ಲಿಯಾದರೂ ಕೊಂಡ ತಗೊಂಡಂತೆ ಮಾಡಿದಿರಿ. ಅದಕ್ಕೆ ಅವರು ಸಿಟ್ಟ ಆಗಿದ್ದಾರೆ. ಆಮೇಲೆ ನಮ್ಮ ಅಣ್ಣ ನಿಮ್ಮ ಕಟ್ಟಿಯ ಕಲ್ಲ ಏರಿದಾನ ಏನ? ಏನ ಹೇಳತೀರಿ ನೀವು. ಹಡೆದ ಕರಳು ಕೇಳುವದಿಲ್ಲ. ಅವ್ವ ಒಬ್ಬಾಕೆ ಛೀ ಅನ್ನಲಿ ಬೈಯಲಿ ಬರತಾಳ.” ಕಣ್ಣೀರು ತಂದು ನುಡಿದಳು ಪದ್ಮಾವತಿ.

“ಅವರು ನಮಗ ಎಮ್ಮಿ ಕೊಟ್ಟಂತೇನ ಮಾಡಿದರು? ತಿರುಗಿ ತಗೊಂಡ ಹೋದರೇನು? ನಮಗೊಂದ ಎಮ್ಮಿ ಹುಟ್ಟಿದವರಂತೆ.”

“ ಹುಟ್ಟುವದಿಲ್ಲಲಾ ಮತ್ತ! ”

“ ಕಟ್ಟಬೇಕಾದರೆ ಬೆಳಗಾಗಲಿಕ್ಕೆ ಹತ್ತ ಎಮ್ಮೆ ತಂದು ಕಟ್ಟೇನು. ”

“ ಒಂದಕ್ಕ ದಿಕ್ಕಿಲ್ಲ ಹತ್ತಕ್ಕ ಹೋಗತಾರ. ಅವಃ ಹೊಲದ ನಾಲ್ಕ ರೂಪಾಯಿ ಅವ. ದೇವರಿಗಿಷ್ಟು ಹಬ್ಬಕ್ಕಿಷ್ಟು ಮಾಡಿ ತೀರಿಸಿ ಬಿಡುವವ ರಾಯಿತು. ಮಕ್ಕಳ ಮೈಮೇಲೆ ಒಂದ ಗುಂಜಿ ಬಂಗಾರ ಇಲ್ಲ.” ನಿಜ ವಾದ ಕಾರಣಕ್ಕೆ ಈಗ ಪದ್ಮಾವತಿ ಬಂದಳು.

“ ಹೆಂಗಸರದೊಂದ ಬುದ್ಧಿನೇ. ಹೊಲಾ ಮಾರಿ ಮಕ್ಕಳ ಮೈಮೇಲಿ ಹೊನ್ನ ಇಡಸಲಿಕ್ಕೆ ಹೋಗತಾರ. ”

“ ಹೊನ್ನ ಇಟ್ಟರ ನಾಲ್ಕು ದಿನಾ ಇರತದ. ಕಾಗದ ಚೂರೇನ ಎರಡ ದಿನದೊಳಗ ಇದ್ದೂ ಇಲ್ಲದಾಂತೆ ಆಗಿ ಹೋಗತಾವ,—ತಿಂದಿರೋ ಉಂಡಿರೋ ಆಯ್ತು. ”

“ ಹಾಗಾದರೆ ದೇವರಿಗೇಕೆ ಹರಕೆ ಹೊರತಿದ್ದಿ ಸೀ? ”

ಬಾಬಣ್ಣ ಕೇಳಿದ. ತನ್ನ ಅಕ್ಕನನ್ನು ತರುವೆನೆನ್ನಲು ಈ ಎಲ್ಲ ಮಾತುಗಳನ್ನು ಆಡುವಳೆಂದು ಭಾವಿಸಿದ. ದನಿಯಲ್ಲಿ ಸ್ವಲ್ಪ ಹಟವೂ ಮೂಡಿತು.

“ ಹಾಸಿಗೆ ಹಿಡಿದಿದ್ದಿರಿ. ದೊಡ್ಡ ದೇವರಿಗೆ ಬೇಡಿಕೊಂಡೆ ನಾ. ನನ್ನ ಗುಳದಾಳಿ ಕಾಯಲಿ ಅಂತ. ನನ್ನ ಮರುಕಾ ಕೇಳಿ ನಿಮ್ಮನ್ನ ಉಳಿಸಿದ ಆತ. ನಿಮ್ಮ ಕೈಯಿಂದ ಆದರ ಮಾಡಿರಿ. ಇಲ್ಲಾದರ ನಾ ನನ್ನ ಮಂಗಳ ಸೂತ್ರಾ ಒತ್ತಿ ಇಟ್ಟ ಮಾಡಿ ತೀರಸತೇನಿ. ದೇವರ ಭಾರಾ ನಾನೇನ ಇಟ್ಟ ಕೊಳ್ಳಾಕೆ ಅಲ್ಲ. ”

ಮನೆಯಲ್ಲಿ ಇಷ್ಟು ತಿಕ್ಕಾಟ ನಡೆದೂ ಕೂಡ ಬಾಬಣ್ಣ ದೀಪಾವಳಿಗೆ ಅಕ್ಕನನ್ನು ಕರೆದು ಕೊಂಡೇ ಬಂದ. ಹಬ್ಬವನ್ನು ಸಡಗರದಿಂದಲೇ ಮಾಡಿದ. ತನ್ನ ಮಕ್ಕಳಿಗೂ ಹೊಸ ಅರಿವೆಗಳನ್ನು ಕೊಂಡ. ಅವರ ಜೊತೆಗೆ ಅಕ್ಕನ ಮಗನಿಗೂ ಕೊಂಡ. ಹೆಂಡತಿಗೂ ಅಕ್ಕನಿಗೂ ಸೀರೆ ತಂದ. ಕುಪ್ಪಸ ತಂದ. ಅಕ್ಕನ ಆರತಿಯಲ್ಲಿ ಐದು ರೂಪಾಯಿಗಳನ್ನು ಹಾಕಿದ. ತಾನು ಬೇನೆ ಬಿದ್ದಾಗ ನೆರವಾದವರೆಂದು ಗಂಗವ್ವ ಚಂದ್ರವ್ವನ ಮನೆಯವರನ್ನೆಲ್ಲ ಊಟಕ್ಕೆ ಕರೆದ. ದೇವರಿಗೂ ಮಾಡಿದ. ಹರುಷದಿಂದ

ಹಬ್ಬದಲ್ಲಿ ತಿರುಗಾಡಿದ. ಇರುವ ಕಾಲಕ್ಕೆ ಸುಖದಲ್ಲಿ ಇರೋಣ. ಇಲ್ಲದ ಕಾಲಕ್ಕೆ ಇಲ್ಲ. ಎಂದು ಭಾವಿಸಿದನೇನೋ!

ನಾಳಿನದನ್ನು ನೋಡಿಕೊಂಡು ನಮ್ಮ ಹಾಸಿಗೆಯಿದ್ದಷ್ಟು ಕಾಲು ಚಾಚಬೇಕೆನ್ನುವ ಪದ್ಮಾವತಿಯ ಆಟ ಏನೂ ಸಾಗಲಿಲ್ಲ. ನಿರುಪಾಯಳಾಗಿ ಅವಳೂ ಎಲ್ಲರೊಡನೆ ನಕ್ಕಳು, ನಲಿದಳು. ಅದೆಂಥ ನಗೆ? ಮಕ್ಕಳು ಎದುರಿಗೆ ಬಂದಾಗ ಇವರು ಒಂದೊಂದೇ ಕೂರಿಗೆಯ ಒಡೆಯರಾದರಲ್ಲ.—ಅದೂ ಇವರ ಕೈಯೊಳಗಿಂದ ಉಳಿದರೆ. ಇಲ್ಲವಾದರೆ ಗುದ್ದಲಿ ಹಿಡಿದು ಇನ್ನೊಬ್ಬರಲ್ಲಿ ಕೂಲಿಗೇನೇ ಹೋಗಿ ಹೊಟ್ಟೆ ತುಂಬಿಕೊಳ್ಳಬೇಕು ಎಂದುಕೊಳ್ಳುವಳು. ಬಿಸಿಯುಸಿರು ಅವಳಿಗೆ ಗೊತ್ತಿಲ್ಲದೇನೇ ಅವಳ ಮುಖದಿಂದ ಹೊರಟು ಹೋಗುವುದು. 'ಉಸ್ಸ!' ಎನ್ನುವಳು.

ನಾದಿನಿಯ ಈ ನಿರುತ್ಸಾಹದ ನಡತೆಯನ್ನು ನೋಡಿ ಬಾಳವ್ವನೂ ತವರುಮನೆಯನ್ನು ಬಿಡಲಿಕ್ಕೆ ಆತುರಗೊಂಡಳು. ಬೇನೆ ಬಿದ್ದಾಗ ತಮ್ಮನನ್ನು ನೋಡಲಿಕ್ಕೆ ಬರಲಾಗದಿದ್ದುದಕ್ಕೆ ಇದ್ದ ಅನೇಕ ತೊಂದರೆಗಳನ್ನು ವಿವರಿಸಿ ಹೇಳಿದಳು. ಪಶ್ಚಾತ್ತಾಪ ಪ್ರದರ್ಶಿಸಿದಳು. ಅದನ್ನೆಲ್ಲ ಕೇಳಿಕೊಂಡು ಪದ್ಮಾವತಿಯೂ ಆಗ ತಮ್ಮಮೇಲೆ ಒದಗಿದ ಸಂಕಟವನ್ನೂ, ಪತಿಯ ಬೇನೆಯ ಭಯಂಕರ ಸ್ಥಿತಿಯನ್ನೂ ವಿವರಿಸಿದಳು. ಅದರಂತೆ ಸೆಟ್ಟರಿಗೆ ಹೊಲ ಮಾರಿದ ಸಂಗತಿಯನ್ನೂ ಅದಕ್ಕಾಗಿ ಗೌಡರಿಗೂ ತಮಗೂ ಬಂದ ತಿಕ್ಕಾಟವನ್ನೂ ಕತೆಮಾಡಿ ಹೇಳಿದಳು. ಗಂಗವ್ವನ ನೆರವಿಗಾಗಿ ಅವಳನ್ನು ಅತ್ತಿಗೆಯ ಮುಂದೆ ಬಾಯಿತುಂಬ ಹೊಗಳದೆಯೂ ಇರಲಿಲ್ಲ.

ಈಸಲ ಬಾಬಣ್ಣನ ಹೊಲದ ಬಿತ್ತಿಗೆ ತಿಳುವಾಗಿದ್ದಿತು. ಸಣ್ಣಂದಿರುವಾಗ ಬೆಳೆ ಚನ್ನಾಗಿ ತೋರುತ್ತಿದ್ದಿಲ್ಲ. ಹರಹರಕು ಕಾಣುತ್ತಿದ್ದಿತು ಇದರೀಗ ಆರಿಸಿ ನೆಟ್ಟಂತೆ ನಿಲುವು ನಿಂತಿದೆ. ತೆನೆ ಚನ್ನಾಗಿ ಹಾಕಿದೆ. ಕಾಳೂ ತುಂಬಿದೆ. ಅಕ್ಕ ತಾನು ಹೆಂಡತಿ ಸಹ ಒಮ್ಮೆ ಹೊಲಕ್ಕೆ ಹೋಗಿ ನೋಡಿಕೊಂಡು ಬಂದರು. ಹಾಗೆಯೇ ಬೆಳಸೀ ತಿನ್ನುವ ಕಾರ್ಯಕ್ರಮವೂ ಆಯಿತು. ಆಗ ಅಕ್ಕ ಅಂದಳು.

"ಚನ್ನಾಗಿ ಬೆಳೆದರೆ ಈ ಎರಡು ಕೂರಿಗೆಯೊಳಗಿನ ಕಾಳುಗಳೇ ಮನೆಗೆ ಹೆಚ್ಚಾಗಿ ಉಳಿಯುವವು."

"ನೀ ಅನ್ನೋದೂ ನಿಜ. ಆದರೂ ನಾ ಬಂದ ಮೇಲೆ ಒಂದೂ ವರ್ಷ ಕಾಳಿನ ತಾಪತ್ರಯವೇನು ಬಿಟ್ಟಿಲ್ಲ ತಾಯಿ! ವರ್ಷಾ ಕಡಾ ಆಂತ ತರತೇವೆ. ಈ ವರ್ಷ ಆದರೂ ಏನು? ಕಣ್ಣಿಗೆ ದೊಡ್ಡ ದೊಡ್ಡ ತೆನೆ ಕಾಣಸತದ. ಹೊಲವೆಲ್ಲ ಕೊಯ್ದ್ರೂ ಒಂದ ಬಂಡಿ ಕಣಕಿ ಹೊರಡುವದಿಲ್ಲ. ಕಾಳ ಹುಟ್ಟಿ ಅಂದರ ಎಲ್ಲಿಂದ ಹುಟ್ಟ್ಯಾವು? ಆಟದ ಹರಳ ಒಗೆದಂತೆ ಅಲ್ಲೊಂದ ಇಲ್ಲೊಂದ ದಂಟ ಇದ್ದರೆ ಏನು ಆಗೋದು? ಒಂದು ಸಿವುಡ ಕೊಯ್ಯೋದರಲ್ಲಿ ಅಕ್ಕಡಿ ಮುಂದ ಓಡತದ. ಮನೆಯೊಳಗೆ ದನಗಳಿಲ್ಲಂತ ಚಂದ ಆಗೇದ. ಸೀತೆಸಿ ತಿನಲಿಕ್ಕೆ ಕಳ್ಳರ ನಾವು. ನಾಲ್ಕ ದಂಟ ಕಡಿಯುವಷ್ಟರಲ್ಲಿ ಕಣದಗಲ ನೆಲ ಆಗತದ." ಎಂದು ಪದ್ಮಾವತಿ ಮಾತು ಮುಗಿಸಿದಳು, ಸಹಜವಾಗಿ.

ಹೆಂಡತಿಗೆ ಯಾವಾಗ ಏನು ಮಾತಾಡಬೇಕೆಂಬುದೂ ತಿಳಿದಿಲ್ಲವೆಂದು ಭಾವಿಸಿದ ಬಾಬಣ್ಣ. ಬೆಳಸೀ ತಿನ್ನಲಿಕ್ಕೆ ಬಂದಾಗ ಹೇಗೆ ಮಾತಾಡುವದೆಂದರೆ ತಿನ್ನುವವರಾದರೂ ಮನಸ್ಸು ಸಡಿಲುಬಿಟ್ಟು ತಿನ್ನಬೇಕು ಹೇಗೆ ಎಂದು ವಿಚಾರಿಸಿ ನುಡಿದ,—

"ತೆಳ್ಳಗಾದರೂ ಅಷ್ಟೇ ಹೋಯಿತು. ನಾಲ್ಕ ತೆಸಿ ಬಡಿಯುವದರಲ್ಲಿ ಸೇರ ಜೋಳ ಆಗ್ತಾವ. ಈ ಸಾರೆ ಮಳೆ ಕಡಿಮೆ ಆಯ್ತು. ವಟ್ಟಿ ಆದರೆ ನಮ್ಮ ಹೊಲವೇ ಬೆಳೆಯುತ್ತಿರಲಿಲ್ಲ. ತಿಳಿತು?"

"ಎರಡನೆಯವರು ಬೆಳೆದಿಲ್ಲೇನ, ಹೇಳತೀರಿ ನೀವು? ವಟ್ಟಿ ಇದ್ದವರ ಕೈ ಸಡಿಲು ಬಿಟ್ಟ ಕಡಿಯಲಿಕ್ಕೆ ಬರತದ. ರಾಸಿಗಂತ ಮಂದಿಯ ಎತ್ತಗಳನ್ನು ತಂದರೆ ಮೇವು ಹಾಕಲಿಕ್ಕೆ ಬರತದ. ಇದರೊಳಗ ಏನು ಮಾಡಲಿಕ್ಕೆ ಬರುವಂತಿದೆ?" ಮತ್ತೂ ಪದ್ಮಾವತಿ ಅಸಮಾಧಾನ ಸೂಚಿಸಿದಳು.

"ಪದಮವ್ವ ಅನ್ನೋದ ಏನ ಸುಳ್ಳಲ್ಲ." ಬಾಳವ್ವನೂ ಒಪ್ಪಿದಳು.

ಆದರೆ ಬಾಬಣ್ಣ ಒಪ್ಪಲಿಲ್ಲ. ಮಾತನ್ನು ಮುಂದುವರಿಸಿದ:

"ದನ ತಿಂದರೆ ಜನ ತಿಂದರೆ ಕಡಿಮೆ ಆಗಲಿಕ್ಕೆ ಒಲ್ಲದೇನು? ಭೂಮಿ ತಾಯಿ ಕೊಡಲಿಕ್ಕೆ ನಿಂತ ಮೇಲೆ. ಯಾರ ತಿಂದರೇನ ಬಿಟ್ಟರೇನು? ಅವಳೇ ಮುನಿದರ ಮಾತ್ರ ನಮ್ಮ ಆಟ ಸಾಗುವಂತಿಲ್ಲ."

" ಆದರೂ ಬಂಪದ ಬೆಳೆ ವ್ಯವಸ್ಥಿತ ರಾಶಿ ಮಾಡಕೊಂಡ ಹೋಗಲಿ ಕ್ಕೊಂದ ಬೇಕಲ್ಲ. ಬಿದ್ದಲ್ಲಿ ಬಿತ್ತು ಎದ್ದಲ್ಲಿ ಎದ್ದಿತು ಮಾಡಿದರ ನಾಲ್ಕು ಚೀಲ ಆಗುವ ಸ್ಥಳದಲ್ಲಿ ಮೂರ ಚೀಲಕ್ಕ ಬಂದ ಕೂಡತಾವು."

ಬಾಳವ್ವ ತಮ್ಮನಿಗೆ ಬುದ್ಧಿ ಹೇಳಿದಳು.

" ಅದನ್ನೇ ಹೇಳಲಿಕ್ಕೆ ಹೋದರೆ ನನ್ನ ಮೇಲೆ ಸಿಟ್ಟಿಗೆ ಬರತಾರ ನೋಡ ಅಕ್ಕ. " ಎಂದು ಪದ್ಮಾವತಿ ದನಿಗೂಡಿಸಿದಳು

" ಈಗ ಹಕ್ಕಿನೂ ಕಾಳ ಕೂಡಿಸುವ ದಿನ. ಚಟ್ಟನೆ ನನ್ನ ಎರಡ ದಿನ ದೊಳಗ ಕಳಸಿ ಬಂದಿ ಅಂದರ ಹೊಲದೊಳಗ ನಿಂತ—ವಸ್ತಿ ಬಿದ್ದು ರಾಶಿ ಮಾಡಿಕೋ ನೋಡು. ರೂಪಾಯಿ ಕೊಟ್ಟರ ಒಂದ ಸೆರೆ ಜೋಳ ಬರುವದಿಲ್ಲ ಈಗ. ಮೊದಲಿನ ದಿನ ಇಲ್ಲ. ಹಾದಿಯ ಕಡೆಗೆ ಯಾರೋ ತೆನೆ ಮುರಿದಿದಾರ ನೋಡು. ಹರಿವತ್ತ ಮೂರು ಸಂಜೆ ನಿಂತ ನೆಟ್ಟಗ ಕಾಯಲಿಕ್ಕೆ ಬೇಕು ಆಯಗಾರ ಬರಲಿ ಯಾರೇ ಬರಲಿ, ಬಾಯ ಮಾಡಲಿಕ್ಕೆ ಬೇಕು. ಇಲ್ಲಾದರ ಸುಮ್ಮನೆ ಕೂಡಬಾರದು." ಅಕ್ಕ ತಮ್ಮನಿಗೆ ಬುದ್ಧಿಯ ಮಾತನ್ನೂ ಬಾಳಿನ ರೀತಿಯನ್ನೂ ಅರುಹಿ ಹೋದಳು.

" ಅಷ್ಟೆಲ್ಲ ನನಗ ತಿಳಿಯೂದಿಲ್ಲೇನು ? "

" ತಿಳಿತದ. ಆದರೂ ಹೆಂಗಸರ ಸ್ವಭಾವವೊಂದ ಇರತದಲ್ಲ ಹೇಳಿ ದರೆ 'ಖಿಸ್!' ಅಂತ ಸಿಟ್ಟಿಗೆ ಏಳಬಾರದು. "

" ಸಿಟ್ಟಿಗೇನ ಏಳತಾರೆ ? "

" ಅಲ್ಲೋ ಬಾಬು, ನಾ ಹೇಳೋದ ನಿನ್ನ ಹಿತಕ್ಕನs. ಗಂಗವ್ವಅತ್ತಿ ಹೇಗೆ ಬಂದು ಹಕ್ಕಿನಿಂದ ನಿನ್ನ ಮನೆಯೊಳಗಿನ ಯಾವುದಾದರೂ ಜಿನಸನ್ನ ಕೈ ಹಾಕಿ ಒಯ್ಯತಾಳೆ, ಆದರಂತೆ ನೀನೂ ಅವರಲ್ಲಿಂದ ತರಬೇಕು. ಈಗ ನಿನ್ನಲ್ಲಿ ಎತ್ತ ಇಲ್ಲ. ಅವರಲ್ಲಿಂದ ತಂದ ಸುಗ್ಗಿ ಮಾಡಕೊಂಡರಾತು. ನೆರವಿಗೆ ಅಪ್ಪಣ್ಣನನ್ನೂ ಎರಡ ದಿನ ಕರೆಯಬೇಕು. ನೀನೂ ಬೇಕಾದರ ಎರಡ ದಿನಾ ಅವರಲ್ಲಿ ಹೋದರಾಯಿತು. "

ಎಂದು ವಿವಿಧ ರೀತಿಯಿಂದ ಬಾಬಣ್ಣನಿಗೆ ಬೋಧಿಸಿದಳು. ಇದನ್ನು ಕಂಡು ಪದ್ಮವ್ವ ಹಿಗ್ಗಿದಳು. ಬಾಳವ್ವ ಬಂದಾಗಿನ ದುಗುಡ ಅವಳು ಹೋಗು ವಾಗ ಉಳಿಯಲಿಲ್ಲ. ಉಂಡಿ ಕಟ್ಟಿ, ಡಬ್ಬಿ ತುಂಬಿ ಕಳಿಸಿದಳು. ಮತ್ತೆ

ತವರ್ಮೂರ ಜಾತ್ರೆಗೆ ಕರೆಯಲಿಕ್ಕೆ ಕಳಿಸುವೆ, ನಾಲ್ಕು ದಿನ ಬಂದು ಹೋಗೆಂದೂ ಹೇಳಿದಳು. ಗಂಡನಿಗೆ ಅತ್ತಿಗೆಯನ್ನೂ ಕೂಸನ್ನೂ ಜಪ್ಪಿಸಿ ಕಳಿಸಿ ಬಿಡಲೂ ಪದ್ಮಾವತಿ ಸೂಚಿಸದೆ ಇರಲಿಲ್ಲ.

ಬಾಬಣ್ಣಾ ಬಾಳವ್ವನನ್ನು ಗಂಡನ ಮನೆಗೆ ಕಳಿಸಿ, ತಿರುಗಿ ಬರುವಷ್ಟ ರಲ್ಲಿ ಒಂದು ಘಟನೆ ಸಂಭವಿಸಿತು. ಯಾರೋ ಅವನ ಹೊಲದೊಳಗಿನ ತೆನೆ ಗಳನ್ನು ಕಳವು ಮಾಡಿಕೊಂಡು ಹೋಗಿದ್ದರು. ತಾತಪ್ಪನಿಂದ ಈ ಸುದ್ದಿ ಯನ್ನು ಕೇಳಿದೊಡನೆಯೇ ಹೊಲಕ್ಕೆ ಹೋಗಿ ನೋಡಿದ. ಅರ್ಧಚೀಲ ಜೋಳನಾಗುವಷ್ಟು ತೆನೆಗಳು ಇಲ್ಲವಾಗಿದ್ದುವು. ನಿಲುವಿನ ಮೇಲಿಯೇ ಕೊಯ್ದುಕೊಂಡು ಹೋಗಿದ್ದರು. ನೋಡಿ ಮರಮರ ಮರುಗಿದ ಬಾಬಣ್ಣಾ ಸಂಜೆ ಗಂಗವ್ವನ ಮನೆಯಲ್ಲಿ ಇದೇ ವಿಷಯಕ್ಕೆ ಮಾತು ಬಂತು. ತಾತಪ್ಪ ಸ್ವಚ್ಛವಾಗಿ ಹೇಳಿದ.—

“ಈ ಕೆಲಸ ಕಲ್ಲಪ್ಪನ ಹೊರತಾಗಿ ಇನ್ನೊಬ್ಬರಿಂದ ಆಗಿಲ್ಲ.”

“ಅವನೇ ಮಾಡಿರಬೇಕು?”

“ಮಾಡಿಲ್ಲ. ಮಾಡಿಸ್ಯಾನ ಇಷ್ಟೇ. ಹಿಂದ ಚೆನ್ನಸುಂ ಗೌಡರ ಇದ್ದಾರ.”

“ಅದೇ ಅಂಗಡಿಯ ಬಾಕಿಯ ಬಗ್ಗೆ ಸಿಟ್ಟು ಹಿಡದ ಮಾಡಿಸಿರಬೇಕು.”

ಗಂಗವ್ವ ಕಾರಣವನ್ನು ಸ್ಪಷ್ಟ ತಿಳಿದುಕೊಳ್ಳಲೆಂದು ನಡುವೆ ಮಾತು ಸೇರಿಸಿದಳು. ಗೌಡರ ಅಂಗಡಿಯ ಲೆಕ್ಕವನ್ನೇನೂ ಇನ್ನೂ ಬಾಬಣ್ಣಾ ತೀರಿ ಸಿರಲಿಲ್ಲ. ಹೊಲವನ್ನು ಕಲ್ಲಪ್ಪನಿಗೆ ಕೊಡಲಿಲ್ಲ ಎನ್ನುವ ನ್ಯಾಯಕ್ಕಾಗಿ ಗೌಡರು ತಮ್ಮ ಅಂಗಡಿಯಲ್ಲಿ ಲೆಕ್ಕವನ್ನು ಒಂದಕ್ಕೆ ಎರಡು ಬರೆದು ಕೇಳ ದರು. ಈ ವಿಷಯಕ್ಕೆ ತಾತಪ್ಪನಿಗೂ ಅವರಿಗೂ ಸ್ವಲ್ಪ ವಾಗ್ಯುದ್ಧವೇ ನಡೆಯಿತು. “ನಾನು ಬರೆದಷ್ಟು ಲೆಕ್ಕ ಸಿಗದೆ ಎಲ್ಲಿಗೆ ಹೋಗು ವುದು ನೋಡೋಣ. ನೀನಿಲ್ಲ ನಿಮ್ಮ ಅಪ್ಪ ತಂದ ಕೊಡತಾನೆ” ಎಂದೂ ಗೌಡ ಜಬರಿಸಿದ್ದ. ತಾತಪ್ಪನೂ ಮಾತಿನಲ್ಲಿ ಕಡಿಮೆಯವನಲ್ಲ. ಅವನೂ ಉತ್ತರ ಕೊಟ್ಟಿದ್ದ. “ನನಗೇನ ಹೆಂಡರೋ ಮಕ್ಕಳೋ. ಬಾಳಾ ಇಷ್ಟಾಂತ ನಾ ಏನ ಬರತದ ಬರಲಿ. ತಲೆ ತೆರದೇ ನಿಂತಿದೇನೆ. ಆದರೆ ನೀ ಹೇಳಿ ದಷ್ಟು ಲೆಕ್ಕ ಮಾತ್ರ ಸಿಗಲಿಕ್ಕಿಲ್ಲ. ನನ್ನ ವೈಯಲ್ಲಿಯೂ ಮದಭಾವಿ

ಗೌಡರ ರಕ್ತ ಹರಿದಾಡತದ ಇನ್ನೂ" ಅಷ್ಟಕ್ಕೆ ಆ ಮಾತು ಅಲ್ಲಿಗೇ ನಿಂತಿದ್ದಿತು. ಮುಂದೆ ಬಾಬಣ್ಣನೂ ಆ ಲೆಕ್ಕದ ಗೊಡವೆಗೆ ಹೋಗಿರಲಿಲ್ಲ. ಒಮ್ಮೆ ಮಾವನ ಕೈಯಲ್ಲಿ ವಿಷಯ ಹೋಗಿದೆಯೆಂದಮೇಲೆ ಅವನ ಕೈಯಿಂದಲೇ ತೀರುವುದು ಉಚಿತ ಎಂದುಕೊಂಡು ಸುಮ್ಮನಿದ್ದ.

"ಆ ಲೆಕ್ಕದ ಜಗಳ ಆಯ್ತು, ಆ ಹೊಲ ಕೊಡದ ಸಿಟ್ಟ ಆಯ್ತು, ಎಲ್ಲಾ ಕೂಡೇದ ಇದರೊಳಗ." ತಾತಪ್ಪ ಗಂಗವ್ವನಿಗೆ ಉತ್ತರ ಕೊಟ್ಟ.

"ನೀನೂ ಕಡದುಕೊಡು ನಡೆ ಅವರ ಹೊಲದೊಳಗಿಂದ. ನಾನ ಬಂಡಿ ತುಂಬಿ ತರತೇನೆ." ಅಪ್ಪಣ್ಣ ಆಶ್ವಾಸನವಿತ್ತ.

"ಇಂಥದಕ್ಕ ನಮ್ಮವ ಅಂದರ ಹೆತ್ತ ಹುಲಿ ಇದ್ದಂತನ"

ಗಂಗವ್ವ ಪ್ರೋತ್ಸಾಹ ಕೊಟ್ಟಳು. ಅದಕ್ಕೆ ಬಾಬಣ್ಣ ಸುಮ್ಮನಾದ. ತಾತಪ್ಪನೇ ಉತ್ತರ ಹೇಳಿದ,—

"ಈ ಹುಡುಗನ ಕೈಯಿಂದೇನೂ ಆಗುವದಿಲ್ಲ. ಕಡದ ಕೊಡಲಿಕ್ಕೆ ನಾ ಗಟ್ಟಿ ಇದ್ದೇನೆ. ಆದರ ಈಗ ಬೇಡ. ಇನ್ನೂ ಎಲ್ಲಿತನಕ ಬರತದ ನೋಡೋಣ. ಆಮೇಲೆ ತರೋಣಂತ ನಮ್ಮೂರ ಬೇಡರನ್ನ ಒಮ್ಮೆ. ಈ ಗೌಡ, ಈ ಕಲ್ಲಪ್ಪ ಎಷ್ಟ ಉದ್ದ ನೀರಿನವರ ಇದ್ದಾರ ನೋಡಿ ಬಿಡೋಣ."

"ಹೀಗೇ ಎಷ್ಟ ದಿನಾ ಅಂತ ಸುಮ್ಮನೆ ಕೂಡೋದು?"

ತಡಕೊಳ್ಳುವದಕ್ಕೆ ಆಗದುದಕ್ಕೆ ಅಪ್ಪಣ್ಣ ಕೇಳಿದ.

"ಕಾಲ ತುಳಿತ ಎಲ್ಲಿಯವರೆಗೆ ಬರತಾರ ಒರಲಿ. ಅವರ ಪಾಪದ ಕೊಡವೂ ಒಂದಿಷ್ಟ ತುಂಬಲಿ ಅಲ್ಲ!"

"ಈಗ ನಾನು ಸುಮ್ಮನಿರಲೋ ಏನ ಮಾಡಲಿ?" ಬಾಬಣ್ಣ ಕೇಳಿದ.

"ನೀ ಏನ ಮಾಡುವಿ ಈಗ? ಬೇಕಾದರೆ ಗೌಡನ ಕಿವಿಮೇಲೆ ಒಂದ ಮಾತ ಇಡು, ಹೀಗೀಗ ಆಗೇದ ಅಂತ. ಆಯ್ತು. ಹೊಲಾ ಚನ್ನಾಗಿ ಕಾಯ್ಕೊಂಡ ರಾಶಿ ಮಾಡಿಕೊಂಡ ಬಾ." ತಾತಪ್ಪ ಹೇಳಿದ.

"ಆ ಹುಡುಗ ಒಬ್ಬನೇ ಏನು ಕಾಯುವ?" ಗಂಗವ್ವ ದಯೆ ತೋರಿದಳು.

" ಇಲ್ಲೇನ ನಾವೆಲ್ಲ? " ಅಪ್ಪಣ್ಣ ತಾನಾಗಿಯೇ ಮುಂದೆ ಬಂದ.

ತಾತಪ್ಪನ ಹೇಳಿಕೆಯಂತೆ ಬಾಬಣ್ಣ ಗೌಡರಿಗೆ ಹೇಳಲಿಕ್ಕೆ ಹೋದ. ಗೌಡ ಎಲ್ಲವನ್ನೂ ಸಾವಧಾನದಿಂದ ಕೇಳಿಕೊಂಡ. ಆಮೇಲೆ ಸಹಜವಾಗಿ ಉತ್ತರ ಕೊಟ್ಟ,—

" ಈಗೇನ ಬಾಬು ಊರೊಳ ತಾಳ ಮೇಳ ಉಳದಿಲ್ಲ. ಯಾರಿಗಂತ ಹೇಳೋದ ಹೇಳು? ಒಬ್ಬರ ಮಾತ ಒಬ್ಬರ ಕೇಳತಾರೇನು? ನೀನೇ ನೋಡು, ನಿನ್ನಂತೆಯೇ ಇರುವವರಲ್ಲ ಎಲ್ಲರು. " ಧ್ವನಿ ತುಂಬ ವ್ಯಂಗ್ಯವಾಗಿದ್ದಿತು.

ಬಾಬಣ್ಣ ಅದಕ್ಕೇನೂ ಉತ್ತರ ಕೊಡದೆ ಮನೆಗೆ ಬಂದ. ನಡೆದ ಸಂಗತಿ ಯನ್ನು ಪದ್ಮಾವತಿಯ ಮುಂದೆ ಹೇಳಿದ. ಅವಳು ಸ್ವಲ್ಪ ಗಾಬರಿಯಾದಳು. ತುಸು ಹೊತ್ತು ವಿಚಾರಿಸಿ ಗಂಡನಿಗೆ ಸಲಹೆ ಇತ್ತಳು.

" ನಾವು ಊರೊಳಗ ಜನ್ಮ ಮಾಡುವವರು. ಏನಾದರೂ ಮಾಡಿ ಅವರ ಅಂಗಡಿ ಲೆಕ್ಕ ತೀರಿಸಿಬಿಡಿರಿ. ಅಪ್ಪಾ ಅಣ್ಣಾ ಅಂದ ಕಲ್ಲ ಬುಡ ದೊಳಗಿನ ಕೈ ಉಚ್ಚಿಕೊಳ್ಳುವುದು. ನೀವು ಮಾಡಿದ್ದಕ್ಕ ತಾತಪ್ಪ ಮಾವ ನನ್ನು ಮುಂದ ಮಾಡುವುದು ಏತಕ್ಕೆ? ದೊಡ್ಡವರ ಕೂಡ ವೈರಕಟ್ಟಿಕೊಂಡ ಬಾಳೋದು ಹೇಗೆ? "

ಆಗ ಬಾಬಣ್ಣ ಸುಮ್ಮನಾಗಿಬಿಟ್ಟ. ಹೆಂಡತಿಯ ಮಾತಿಗೆ ಪ್ರತಿ ಯಾಗಿ ಏನೂ ಹೇಳಲಿಲ್ಲ. ಅವನ ಮನಸ್ಸು ತಾತಪ್ಪನ ವಿಚಾರದ ದಾರಿ ಯಲ್ಲಿಯೇ ಮುನ್ನಡೆದಿದ್ದಿತು. ಇರುವೆಗಂದರೂ ತನ್ನ ಶಕ್ತಿಗೆ ತಕ್ಕಷ್ಟು ಸಿಟ್ಟು ಇರತಕ್ಕದ್ದೇ ಅಲ್ಲ. ಆದರೆ ಚಂದ್ರವ್ವನೂ ಎರಡು ದಿನಗಳ ನಂತರ ಬಾಬಣ್ಣನನ್ನು ಕರೆಯಿಸಿ ಇದೇ ಮಾತನ್ನು ಹೇಳಿದಳು. ತೆನೆ ಕೊಯ್ದುದರ ಬಗ್ಗೆ ಮಾಸ್ತರರೂ ಅವಳೂ ತುಂಬ ಹಳಹಳಿಸಿದರು. ಆದರೂ ಬಾಬಣ್ಣ ತನ್ನ ವಿಚಾರದ ಪಥವನ್ನು ಬದಲಿಸಲಿಲ್ಲ.

ಅಪ್ಪಣ್ಣನು ಹೊಲದ ಕಾವಲದಲ್ಲಿ ಬಾಬಣ್ಣನಿಗೆ ಸಹಕಾರ ನೀಡಿದ. ಇಬ್ಬರೂ ಕೂಡಿಯೇ ಹೆಸರು ಹುಟ್ಟಿಕೆಗಳ ಬಳ್ಳಿ ಕಿತ್ತು ಮೆದೆ ಮಾಡಿದರು. ಅಪ್ಪಣ್ಣ ತಮ್ಮ ಹೊಲದಲ್ಲಿ ಕೆಲಸಕ್ಕೆ ಬಂದಷ್ಟು ದಿನ ಬಾಬಣ್ಣನೂ ಅವರ ಹೊಲದಲ್ಲಿ ಕೆಲಸಕ್ಕೆ ಹೋದ ಹೀಗೆ ಸಹಕಾರದಿಂದ ಸುಗ್ಗಿಯ ಕೆಲಸಗಳು ಒಂದೊಂದೇ ಸಾಗಿದುವು.

ಬಾಬಣ್ಣನು ಅಪ್ಪಣ್ಣನ ಹೊಲದಲ್ಲಿ ಕೆಲಸಕ್ಕೆ ಹೋದ ದಿನ ಹಗಲು ಹೊಲವನ್ನು ಕಾಯಲಿಕ್ಕೆ ಪದ್ಮಾವತಿ ಹೋಗುವಳು. ಅಂದು ಬಾಬಣ್ಣನಿಗೆ ಬುತ್ತಿ ತಲಪುವುದು ಸುಂದರಿಯ ಮುಖಾಂತರ. ಸುಂದರವ್ವ ಮುಂಜಾನೆ ಒಂಭತ್ತು ಗಂಟೆಯ ಸುಮಾರಿಗೆ ಪದ್ಮಾವತಿಯ ಮನೆಗೆ ಬಂದು ಕೆಲವು ರೊಟ್ಟಿಗಳನ್ನೂ ಕಾಯಿಪಲ್ಲೆಯನ್ನೂ ತಕ್ಕೊಂಡು ಹೋಗುವಳು. ಆಮೇಲೆ ತನ್ನ ತಂದೆಯ ಬುತ್ತಿಯೊಡನೆ ಇದನ್ನೂ ಸೇರಿಸಿ ಒಯ್ಯುವಳು. ಹೊಲದಲ್ಲಿ ಇಬ್ಬರಿಗೂ ಕೂಡಿಯೇ ಬಡಿಸುವಳು. ಅಪ್ಪಣ್ಣನ ಬುತ್ತಿಯೊಳಗಿನ ಹಾಲು ಮೊಸರಿನಲ್ಲಿ ಬಾಬಣ್ಣನಿಗೆ ಸಹಜವಾಗಿ ಪಾಲು ಸಿಗುವುದು. ಊಟ ಸಿಹಿ ಹತ್ತುವದು. ಆದಕ್ಕಾಗಿ ಬಾಬಣ್ಣ ಹೆಚ್ಚುಹೆಚ್ಚಾಗಿ ಅವರಲ್ಲಿ ಕೆಲಸಕ್ಕೆ ಹೋಗಲಿಕ್ಕೆ ಆರಂಭಿಸಿದ.

ಪದ್ಮಾವತಿಯು ಮನಸ್ಸಿನಲ್ಲಿಯೇ ಅಂದುಕೊಳ್ಳುವಳು, 'ಅಪ್ಪಣ್ಣನ ಸಂಗತಿಯಿಂದ ಏನೋ ದುಡಿಯುತ್ತಿದ್ದಾನೆ ದುಡಿಯಲಿ. ಅವರಲ್ಲಿ ಕೆಲಸ ಮಾಡಿದ್ದು ಎಲ್ಲಿ ಹೋಗುವುದು? ನಮ್ಮವನು ಹತ್ತು ದಿನ ದುಡಿದದ್ದು ಅವರು ಎತ್ತು ಗಾಡಿಗಳನ್ನು ತಕ್ಕೊಂಡು ಒಂದು ದಿನ ಬಂದರೆ ಕಳೆದು ಹೋಗುವುದು.' ಇದಲ್ಲದೆ ಈಗ ಪದ್ಮಾವತಿ ಎರಡು ಮಕ್ಕಳ ತಾಯಿಯಾದುದರಿಂದ ಆವರ ಬಾಳಿನಲ್ಲಿ ಒಂದು ಹದ ಬಂದಿದ್ದಿತು. ಬಾಬಣ್ಣ ಎಲ್ಲಿದ್ದರೂ ತನ್ನವ, ಅವನ ಮೇಲೆ ಇನ್ನು ಯಾವ ಸಂಶಯಕ್ಕೂ ಎಡೆಯಿಲ್ಲ. ಎಲ್ಲಿ ಹೋದರೂ ಯಾರ ಸಂಗತಿಯಲ್ಲಿದ್ದರೂ ಗಟ್ಟಿ ಮುತ್ತಿನಂಥವ ಎಂದೂ ಆಕೆ ಅರಿತಿದ್ದಳು. ಅದಕ್ಕಾಗಿಯೇ ಅವಳು ಸುಂದರಿಯ ಕೈಯಲ್ಲಿ ಪತಿಗೆ ಬುತ್ತಿಯನ್ನು ಕಟ್ಟಿಕೊಡುತ್ತಿದ್ದಳು.

ಅಪ್ಪಣ್ಣನ ಹೊಲದಲ್ಲಿಯೇ ಕಣ ಮಾಡುವದೆಂದು ಗೊತ್ತಾಯಿತು. ಆ ಹೊಲಕ್ಕೆ ನೀರಿನ ಅನುಕೂಲತೆ ಇದ್ದುದೂ ಒಂದು ಅದಕ್ಕೆ ಕಾರಣ. ಕಣಕ್ಕೆ ಏನಿಲ್ಲೆಂದರೂ ಅರವತ್ತು ಕೊಡ ನೀರು ಹಾಕಲಿಕ್ಕೆ ಬೇಕು. ಅಷ್ಟನ್ನು ಹೆಗಲಿನಿಂದ ಹೊತ್ತು ಹಾಕುವದು ಕಷ್ಟಕರ. ಸಮೀಪದ ಬಾವಿಯಿಂದ ತರುವುದು ಸುಲಭ ಎಂದು ಯೋಚಿಸಿದರು. ಅದರಂತೆ ಆ ಒಂದೇ ಕಣದಲ್ಲಿ ಬಾಬಣ್ಣನ ಹೊಲದ ರಾಶಿಯನ್ನೂ ಮಾಡುವದೆಂದು ಗೊತ್ತುಪಡಿಸಿದರು. "ಎರಡೇ ಕೂರಿಗೆಯ ಬೆಳೆಗಾಗಿ ಇನ್ನೊಂದು ಕಣ ಮಾಡುವುದ

ರಲ್ಲಿ ಏನರ್ಥವಿದೆ ? ಇಲ್ಲೇ ಮಾಡಿಕೊಂಡು ಬಿಟ್ಟರೆ ದನಕರಗಳ ತಾಪ ತ್ರಯವೂ ಆಗದು ಹಂತಿ ಕಟ್ಟಲಿಕ್ಕೂ ಸುಲಭ. ಕಾವಲ ಚಿಂತೆಯೂ ಇಲ್ಲ'' ಎಂದು ಅಪ್ಪಣ್ಣ ಹೇಳಿದ. ಬಾಬಣ್ಣನಿಗೆ ಇದೆಲ್ಲ ಸರಿ ಎನಿಸಿತಾದರೂ ತಾನು ಎರಡೇ ಕೂರಿಗೆಯ ಒಕ್ಕಲಿಗನಾದೆನಲ್ಲ ಎಂದು ಕೆಡಕೆನಿಸಿತು. ಅಲ್ಲದೆ ತನ್ನ ಹೊಟ್ಟು ಅಪ್ಪಣ್ಣನ ಹೊಟ್ಟಿನಲ್ಲಿ ಕೂಡಿ ಹೋಗುವುದು. ತನಗೆ ದನ ಕರಗಳಿಲ್ಲ ಅದನ್ನು ಕೇಳಲಿಕ್ಕೂ ಬರುವದಿಲ್ಲ ಎತ್ತುಗಳನ್ನು ಕೊಟ್ಟು ನೆರವಾಗುವರು. ಅದರ ಮೇಲೆ ದುಡ್ಡು ಕೇಳಲಿಕ್ಕೂ ಬರುವದಿಲ್ಲ ಎಂದು ವಿಚಾರಿಸಿ ಅನುಮಾನಿಸತೊಡಗಿದ. ಇವನ್ನರಿತೋ ಏನೋ ಅಪ್ಪಣ್ಣ ನುಡಿದ,—

'' ಏನು ಹೊಟ್ಟಿನೊಳಗ ಹೊಟ್ಟು ಬಿದ್ದರೂ ನಾಲ್ಕೆಂಟ ರೂಪಾಯಿ ಆಕೆಯ ಹತ್ತರ ಇಸಿದು ಕೊಡತೇನಂತ. ನಮಗೂ ಈ ಸಾರೆ ಹೊಟ್ಟು ಕಡಿಮೆ ಅದೆ. ಎಲ್ಲಿಯಾದರೂ ಕೊಳ್ಳಲಿಕ್ಕೇ ಬೇಕಲ್ಲ? ''

'' ಅದೇನಿಲ್ಲ. ಹೊಟ್ಟು ಬಿದ್ದರೂ ಎಲ್ಲಿ ಹೋಗತದ ಬಿಡು. ಇಲ್ಲೇ ಮಾಡಿದರ ಆಯ್ತು. ಎಲ್ಲವೂ ಒತ್ತಟ್ಟಿಗೇ ಆಗುವುದು'' ಎಂದ ಬಾಬಣ್ಣ.

ದಿನಾಲು ಬಾಬಣ್ಣನ ಹೊಲದಲ್ಲಿ ಜೋಳ ಕೊಯ್ದಷ್ಟು ತೆನೆಗಣಿಕೆ ಯನ್ನೇ ಬಂಡಿಯಲ್ಲಿ ತುಂಬಿ ಅಪ್ಪಣ್ಣನ ಹೊಲಕ್ಕೆ ತಂದು ಗೂಡುಹಚ್ಚಿದರು. ಅದಗಂತೆ ಹೆಸರು ಮಟ್ಟಿಕೆಯ ಬಳ್ಳಿಯನ್ನೂ ಗಾಡೀ ಹೇರಿ ತಂದರು. ಆ ಮೇಲೆ ಅಪ್ಪಣ್ಣನ ಹೊಲದ ನಿಲುವಿಗೆ ಕುಡಗೋಲು ಹಾಕಿದರು. ನಾಲ್ಕೆಂಟು ದಿನಗಳಲ್ಲಿ ಅದನ್ನೂ ನೆಲಕ್ಕೆ ಕೆಡವಿದರು. ಆಮೇಲೆ ಕಣಮಾಡಿ ಇಕ್ಕಲಗಳ ಮೇಲೆಯೇ ತೆನೆ ಕೊಯ್ಯಲು ಆರಂಭಿಸಿದರು. ಕೆಲಸ ಮಾಡುವವರೆಲ್ಲ ಮನೆಯ ಹೆಂಗಸರೇ. ಗಂಗವ್ವ, ಸುಂದರಾ, ಪದ್ಮಾವತಿ ಈ ಮೂವರೂ ಗೂಡು ಮುರಿಯುವರು. ಅಪ್ಪಣ್ಣ ತೆನೆಯ ಮೊಟ್ಟೆ ಹೊತ್ತು ಒಯ್ದು ಕಣಕ್ಕೆ ಸುರುವಿ ಬರುವ. ಬಾಬಣ್ಣ ತೆನೆಯ ಕಣಿಕೆಯನ್ನು ಹೆಂಗಸರ ಮುಂದೆ ಮೆದೆ ಮೆದೆ ಮಾಡಿ ತಂದಿಕ್ಕುವ. ತಾತಪ್ಪ ಹುಡುಗರನ್ನು ಆಡಿ ಸುತ್ತ ಮೇಲ್ವಿಚಾರಣೆ ಮಾಡುವ.

ಪದ್ಮಾವತಿ ಸುಂದರಿಯರು ಸ್ಪರ್ಧೆಯಿಂದ ಗೂಡು ಮುರಿಯುವರು. ಬಾಬಣ್ಣ ಕಣಿಕೆ ತರಲು ಓಡಾಡುವನು. ಕೂಸಿನ ತಾಯಿಯಾದುದರಿಂದ ಪದ್ಮಾವತಿಯ ಕೆಲಸ ಸುಂದರಿಯಷ್ಟು ಒತ್ತರ ನಾಗುತ್ತಿರಲಿಲ್ಲ. ಮನೆ ತನದ ಚಿಂತೆ. ಒಂದರಮೇಲೊಂದಾದ ಹೆರಿಗೆಗಳಿಂದ ಅವಳು ಅಶಕ್ತಳಾಗಿ ದ್ದಳು. ದುಡಿಯುವ ಹುಮ್ಮಸ್ಸು ಎಷ್ಟಿದ್ದರೂ ದೇಹ ಕೆಲಸದಲ್ಲಿ ಹಿಂದೆ ಬೀಳುವುದು. ಹೆಂಡತಿ ಸುಂದರಿಯ ಮುಂದೆ ಸೋಲುವಳೇ ಎಂಬ ಹೆದ ರಿಕೆ ಬಾಬಣ್ಣನಿಗೆ. ಅದಕ್ಕಾಗಿ ಆತ ಅವರಿಬ್ಬರ ಎದುರಿಗೆ ಕಣಿಕೆ ತಂದಿಡು ವಾಗ ಪಕ್ಷಪಾತ ಮಾಡುವನು. ಹೆಂಡತಿಯ ಮುಂದೆ ನಾಲ್ಕು ಸಿವುಡು ತಂದು ಹಾಕಿದರೆ ಸುಂದರಿಯ ಮುಂದೆ ಐದು ಸಿವುಡು ತಂದಿಕ್ಕುವನು. ಈ ಗುಟ್ಟು ಹೊರಬೀಳಬಾರದೆಂದು ಇಲ್ಲಿಯ ವರೆಗೆ ಸರತಿಗೆ ಒಂದೊಂದೇ ಮೆದೆಯನ್ನು ತಂದು ತಂದು ಇಡುತ್ತಿದ್ದ ಆತ ಈಗ ಎರಡೆರಡು ಮೆದೆ ತಂದು ಹಾಕುವ ಹತ್ತು ಸಿವುಡುಗಳಲ್ಲಿ ಲೆಕ್ಕ ಗಮನಕ್ಕೆ ಬಾರದೆ ಒಂದೋ ಎರಡೋ ಸಿವುಡುಗಳನ್ನು ಪದ್ಮಾವತಿಗೆ ಕಡಿಮೆ ಹಾಕಬಹುದೆಂದು ಬಗೆ ಯುವ. ತನಗೆ ನೆಗೆಯಲು ಕಷ್ಟವಾದರೂ ಹೆಂಡತಿಯ ಮೇಲಿನ ಅಭಿ ಮಾನದಿಂದ ಸಹಿಸಿಕೊಳ್ಳುವನು

ಪತಿಯ ಈ ಕುಶಲತೆಯಿಂದ ಪದ್ಮಾವತಿಯು ಸುಂದರಿಯ ಜೊತೆಯಲ್ಲಿ ಮೂರು ನಾಲ್ಕು ತಾಸುಗಳವರೆಗೂ ಸ್ಪರ್ಧೆಯಲ್ಲಿ ಸಮನಾಗಿ-ಅದೇಕೆ ಒಂದು ಹೆಜ್ಜೆ ಮುಂದೆ ಹೋಗಿಯೇ ತೋರಿಸಿದಳು. ಗಂಡನ ಮುಖದ ಕಡೆಗೆ ಗೆಲುವಿ ನಿಂದ ನೋಡುವಳು. ಮುಗುಳುನಗೆ ಬೀರುವಳು ಅವನ ಕೈಚಮತ್ಕಾರ ವನ್ನು ಅರಿತ ಭಾವವನ್ನು ಪ್ರದರ್ಶಿಸುವಳು. ಇದನ್ನೆಲ್ಲ ಕಂಡು ಸುಂದರಿಗೂ ಸಂಶಯ ಬಂತು. ಅವಳ ಮೈಯಲ್ಲಿ ಶಕ್ತಿ ಹೆಚ್ಚು, ಕೈಗಳೂ ಚಲಾಕು. ಒಳ್ಳೆಯ ಹಗುರು ಕುಡಗೋಲು ಆಯ್ದುಕೊಂಡಿದ್ದಳು. ತನ್ನ ಶಕ್ತಿ ಇದ್ದಷ್ಟು ಪ್ರಯತ್ನಮಾಡಿ ನೋಡಿದಳು. ಆದರೂ ಪದ್ಮಾವತಿ ಹಿಂದೆ ಬೀಳದಿರಲು ಆ ಸಂಶಯ ದೃಢಗೊಂಡಿತು. ಆಗ ಆಕೆ ನ್ಯಾಯ ಹೂಡಿದಳು

" ಬಾಬಪ್ಪ, ನಿನ್ನ ಆಟ ನನಗೆ ತಿಳಿಯುವದಿಲ್ಲ ಅನಬೇಡ '

ಬಿಸಿಲಿನಿಂದ ಕೆಂಪಾದ ಮುಖವನ್ನು ತೂಗಿ ಅಂದಳು ಕುಡಗೋಲು ಕೆಳಗಿಟ್ಟು ಸೀರೆಯ ಸೆರಗಿನಿಂದ ಬೆವರೊಡೆದ ಹಣೆಯನ್ನು ಒರಸಿಕೊಂಡಳು.

ಹತ್ತರ ಇಟ್ಟುಕೊಂಡ ತಂಬಿಗೆಯಿಂದ ನೀರು ಕುಡಿದಳು.

" ಏನ ಮಾತಾಡೋದು ನೀರು ಕುಡಿದು ಮಾತಾಡು ! " ಬಾಬಣ್ಣ ನಕ್ಕು ನುಡಿದ

" ನಗಬೇಡ ಮುತ್ತ ! ಇದನೋಡ ತಿನೆಯಿಂದ ಒಗೆದೇನು." ಎಂದಳು ಸುಂದರಾ. ಮಾತಿನಲ್ಲಿ ನಗೆಯೂ ಇತ್ತು. ಸ್ವಲ್ಪ ಸಿಟ್ಟಿನ ನೆಡವೂ ಇತ್ತು.

" ನಿನ್ನ ಕೈಯಿಂದ ಆಗದಿದ್ದರೆ ಬಿಡಲ್ಲ. ನನ್ನ ಮೇಲೇಕೆ ಸಿಟ್ಟು. " ಎಂದು ಕೆಣಕಿ ನುಡಿದ ಬಾಬಣ್ಣ.

" ಹೂಂ ! ಆಗುವದಿಲ್ಲ ! ಮಾಯದ ಹೆಂಡತಿ ಅಂತ ಏಳೆಂಟು ಎಂಟೋ ಸಿವುಡ ಹಾಕತ ಬಾ. ನನಗ ಮಾತ್ರ ಹತ್ತ ಹತ್ತ ಸಿವುಡ ಹಾಕು. ಒಳ್ಳೇ ಇದ್ದೀಯಲ್ಲ ! "

" ಹಾಗೆ ಯಾವಾಗ ಮಾಡಿದಾರು ಗಂಗವ್ವತ್ತಿ ? ನೋಡಪ್ಪ ಏನಂತಾಳು ಸುಂದರಾ? "

ಬೆರಗನ್ನು ನಟಿಸುತ್ತ ಪದುಮವ್ವ ನಡುವೆಯೇ ಅನ್ನುವಳು. ಅದನ್ನು ಸತ್ಯವೆಂದೇ ಭಾವಿಸಿ ಗಂಗವ್ವ ಮಗಳಿಗೆ ನುಡಿಯುವಳು,—

" ಎಷ್ಟಾದರೂ ರಟ್ಟೆ ಬಲತಾಕೆ ಪದ್ಮಾವತಿ. ನಿನಗ ಹೇಗಾದೀತು ಅವಳ ಜೋಡಿ ? ಬಹಳ ಆದರೆ ಒಂದ ಮೆದೆ ಮುರಿಯುವಿ, ಎರಡ ಮೆದೆ ಮುರಿಯುವಿ, ಸಂಜೆತನಕ ತಡೆಯೋದು ನಿನ್ನಿಂದ ಆಗದು. "

" ಏನ ಹೇಳತಾಳೋ ! ಈಕೆಯೂ ಅವರಂತೇನೇ ಬಾರಿಸತಾಳೆ, ನೊಂಡ ಕಣಕಿ ಬೇಕಾದರ ಎಣಿಸಿ ನೋಡಿರಿ ! "

ಎಂದು ಸುಂದರವ್ವ ಕುಡಗೋಲು ಒಗೆದು ಎದ್ದಳು.

" ಎತ್ತಿನ ಮೇಲಿಂದ ಬಿದ್ದ ಊರ ಮೇಲೆ ಸಿಟ್ಟ ಮಾಡಿದರೆ ಏನಾ ಗೋದು ? ಕೂಡು " ಎಂದು ಬಾಬಣ್ಣ ಕರೆದ.

" ಏಕೆ, ಸುಂದರಾ ಮುರಿಯುವದನ್ನ ಬಿಟ್ಟು ಎದ್ದಳು?"

ತಾತಪ್ಪ ನಗುತ್ತ ಕೇಳುತ್ತ ಬಂದ

" ನಿನ್ನ ಅಳಿಯನ ಮೇಲೆ ತಕರಾರ ಅದ ಅವಳದು "

ಗಂಗವ್ವ ಹೇಳುವಳು.

"ಏನು ಕಣಕಿ ಸಮ ಹಾಕುವದಿಲ್ಲಂತೋ?" ಸುಂದರವ್ವನ ಕಡೆಗೆ ಹೊರಳಿ "ಬಾ ಸುಂದರಾ ನಾ ಹಾಕತೇನ." ಎಂದು ಕರೆದ. ಆಮೇಲೆ ಬಾಬಣ್ಣನಿಗೆ ಆಜ್ಞಾಪಿಸಿದ. "ಎತ್ತುಗಳು ಕರೀ ಗೂಟಕ್ಕ ಹಾಗೇ ಕಟ್ಟವೆ. ಮೇವು ಒಂದ ಸಿವುಡು ಹಾಕಿ ಬಾ ಹೋಗು."

"ನೀ ಆದರೂ ಸೋದರ ಸೊಸಿಯ ಕಡೆಗೇನೇ ಹೊರಳವನಲ್ಲ?"

ಎಂದು ಸುಂದರಿಯು ಅನ್ನುತ್ತ ತಿರುಗಿದಳು. ಬಾಬಣ್ಣನ ಕಡೆಗೊಂದು ಗೆಲವಿನ ದೃಷ್ಟಿ ಬೀರಿದಳು. ಆತನೂ ಸೋಲನ್ನೊಪ್ಪುವ. ಅರ್ಥಪೂರ್ಣವಾದ ನಗೆಯೊಂದನ್ನು ಬೀರುವ. ಹೀಗೆ ಹೊಲದಲ್ಲಿ ನಡೆಯುವ ಘಟನೆಗಳು ಅನೇಕ. ಆದರಿಂದ ಬಾಬಣ್ಣನಿಗೆ ಹೆಂಡತಿಯು ಮೇಲೆ ಅಭಿಮಾನವಿದ್ದರೂ ಸುಂದರಿಯು ಕಡೆಗೆ ಮನಸ್ಸು ಒಲಿಯುವದು. ಬತ್ತಿದ ಮೊಗದ ಪದ್ಮಾವತಿಯು ಎದುರಿಗೆ ಸುಂದರಿ ಸುಂದರಿಯಾಗಿ ಅವನ ಗಂಡುಗಣ್ಣಿಗೆ ಕಾಣುವಳು ಅವಳ ಯುಮಕ, ನಗೆ, ನೋಟಗಳೆಲ್ಲವೂ ಅವನ ಮನಸ್ಸನ್ನು ಸೆಳೆಯುವವು. ಅದೇಕೋ ಹೊಲದಲ್ಲಿ ಅವಳಿದ್ದಗೆ ಅವನಿಗೆ ಕೆಲಸ ಮಾಡಲು ಹುರುಪು ಪದ್ಮಾವತಿ ಇಲ್ಲದುದರ ಕೊರತೆ ಅವನಿಗಷ್ಟು ಭಾಸವಾಗದು. ಇವನ ಪಾಲಿಗೆ ಹೊಲವೊಂದು ವೇಳೆ ಪದ್ಮಾವತಿಗಿಂತ ಸುಂದರಿಯಿಂದಲೇ ಹೊಲ ತುಂಬಿ ಕಾಣುವುದು.

ಸುಂದರಿಗೂ ಅಷ್ಟೇ. ಬಾಬಣ್ಣನೆಂದರೆ ಅಚ್ಚು ಮೆಚ್ಚು. ಪದ್ಮಾವತಿ ಕೂಸಿನ ತಾಯಿಯೆಂದು ಹೊತ್ತಿರುವಾಗಲೇ ಹೊಲ ಬಿಟ್ಟು ಮನೆಗೆ ತೆರಳುವಳು. ಗಂಗವ್ವನೂ ಅವಳ ಜೊತೆಯಲ್ಲಿಯೇ ಹೊರಡುವಳು. ಆದರೆ ಸುಂದರಿ ಹಿಂದೆ ನಿಲ್ಲುವಳು. ಹೊಲದಲ್ಲಿಯೇ ವಸ್ತಿ ಇರುವ ಗಂಡಸರಿಗೆಲ್ಲ ರಾತ್ರಿಯ ಊಟಕ್ಕೆ ಬೇಕೆಂದು ಎಮ್ಮೆಯನ್ನು ಅಲ್ಲಿಯೇ ಹಿಂಡುವಳು. ಅವರಿಗೆ ಇಡುವಷ್ಟು ಹಾಲನ್ನು ಇಟ್ಟು ಹೆಚ್ಚಿನ ಹಾಲಿನ ತಂಬಿಗೆಯನ್ನು ಬುಟ್ಟಿಯಲ್ಲಿ ಇಟ್ಟುಕೊಂಡು ಮನೆಗೆ ಬರುವಳು. ಅದಕ್ಕಾಗಿ ಅವಳು ಹಿಂದೆ ನಿಲ್ಲಬೇಕಾಗುವದು.

ಒಂದೊಂದು ದಿನ ಎಮ್ಮೆ ಹಾದಿಗೆ ಹೋಗುವವರೆಗೆ ತೊಗರಿಯ ಸಾಲಿಗೆ ಬಾಯಿ ಹಾಕುತ್ತ ಸಾಗುವದು. ಸುಂದರಿಗೆ ತಲೆಯ ಮೇಲೆ ಹಾಲಿನ ತಂಬಿಗೆ ಇರುವದರಿಂದ ಅಡ್ಡ ಹೋಗಿ ಹೊಡೆದು ತರಲು ದಣಿಸುವುದು,

ಎಂದು ಬಾಬಣ್ಣ ದಾರಿಯವರೆಗೆ ಕಳಿಸಲು ಬರುವನು. ಆಗ ನಸು ಬೆಳ ದಿಂಗಳು ಬಿದ್ದಿರುವುದು. ಸಂಜೆಯವರೆಗೆ ಕಟ್ಟಿ ಇದೀಗ ಮನೆಗೆ ಒಯ್ಯಲು ಬಿಟ್ಟ ಎಮ್ಮೆಗಿಂತ ಇವರಿಗೇ ಆಗ ಚೆಲ್ಲಾಟ ಹೆಚ್ಚು. ಇದನ್ನು ಕಂಡು ನೆರೆ ಹೊಲದ ತರುಣನೊಬ್ಬನಿಗೆ ಸಹಿಸಲಿಕ್ಕಾಗದು. ಸುಂದರಿ ಎಂದರೆ ತನ್ನೊಬ್ಬನ ಭೋಗದ ವಸ್ತು ಎಂದು ಎಂದಿನಿಂದಲೂ ಭಾವಿಸುತ್ತ ಬಂದವನಾತ. ಅಲ್ಲಿ ಈಗ ಬಾಬಣ್ಣ ಕೈಯಿಕ್ಕುವುದರಿಂದ ಅವನಿಗೆ ಸಹನವಾಗದಾಯಿತು. ಒಂದೆರಡು ಸಲ ಸುಂದರಿಗೂ ಸೂಚಿಸಿದ್ದ. ತಂಬಾಕು ಸೇದಲೆಂದು ಇವರ ಹೊಲಕ್ಕೆ ಬಂದಾಗ ಸೂಕ್ಷ್ಮವಾಗಿ ಬಾಬಣ್ಣನಿಗೂ ಹೇಳಿದಂತೆ ಮಾಡಿದ್ದ. ಆದರೂ ಬಾಬಣ್ಣ ಇದಾವುದನ್ನೂ ಲೆಕ್ಕಿಸದೆ ಸುಂದರಿಯೊಡನೆ ಈ ರೀತಿ ಮಾತನ್ನು ಮುಂದುವರಿಸುವನು.

"ಎಷ್ಟು ಸೊಕ್ಕ ಆದ ನೋಡ ಎಮ್ಮೆಗೆ?"

ಬಾಬಣ್ಣ ಏನೋ ಒಂದು ಅರ್ಥವಿಟ್ಟು ನುಡಿಯುವನು.

"ಅದರ ಸೊಕ್ಕ ಇಳಿಸುವವರು ಯಾರೂ ಇಲ್ಲ ಆಗಿದಾರೆ."

ಸುಂದರಿ ಉತ್ತರ ಕೊಡುವಳು.

"ಇರದ ಇರತಾರೇನು? ಇದ್ದ ಆದಾರಲ್ಲ ಯಾರಾದರೂ?"

"ಜಗದೊಳಗ ಬೇಕಾದಷ್ಟು ಮಂದಿ ಇರತಾರ ತಗೋ! ಆದರ ನಿನ್ನ ಕೈಯಿಂದೇನ ಆಗುವದಿಲ್ಲ ಅನ್ನು!"

"ಆದೀತಲ್ಲ! ಗಂಡಸ ಅಂದ ಮೇಲೆ ಆಗದ ಇರತದ ಏನು?"

"ಎಂಥ ಗಂಡಸೋ ಏನೋ! ನೆಟ್ಟಗೆ ಎಮ್ಮೆ ತಿರಿಯೋದಕ್ಕ ಆಗದು."

"ಏಟಿನೊಳಗ ಆದರೂ ಬರಬೇಕಲ್ಲ!"

"ತಗೊಂಡರ ಬಂದೀತು ಏಟಿನೊಳಗ! ಇಲ್ಲಾದರ ತಾನೇ ಬರ ಬೇಕೇನ ಅದು? ಎಂಥಾ ಮಾತೋ ಗಂಡಸಂತ ಗಂಡಸು."

ಎಂದು ದಾರಿಯನ್ನು ಸೇರಿ ಎಮ್ಮೆಯನ್ನು ಹೊಡೆದುಕೊಂಡು ಹೋಗು ವಳು ಸುಂದರಿ. ಬಾಬಣ್ಣ ದಾರಿಗೆ ಹಚ್ಚಿ ತಿರುಗಿ ತಳದ ಕಡೆಗೆ ಬರುವನು. ಹೀಗೆಯೇ ಸುಗ್ಗಿಯೊಳಗಿನ ದಿನಗಳು ಮುಂದೆ ಮುಂದೆ ಸಾಗಿದ್ದುವು

ದಿನದಿನಕ್ಕೆ ಬೆಳದಿಂಗಳು ಬೆಳೆಯುತ್ತ ಹೋಗುವುದು. ಹುಣ್ಣಿವೆ ಬರು ವುದು, ಹೋಗುವುದು. ಆಮೇಲೆ ಕ್ರಮೇಣ ಕತ್ತಲೆಯೂ ಕವಿಯುವುದು.

೧೧

ಸುಗ್ಗಿ ತೀರಿತು. ಬಾಬಣ್ಣನಿಗೆ ನಾಲ್ಕಾರು ಚೀಲ ಜೋಳ ಬಂದುವು. ಜೋಳದ ಬೆಳೆ ತಿಳುವು ಇದ್ದುದರಿಂದ ಅಕ್ಕಡಿ ಕಾಳುಗಳೂ ಚನ್ನಾಗಿಯೇ ಬಂದಿದ್ದುವು ಅವುಗಳನ್ನು ಕೆರೆಗೆ ಒಯ್ದು ತೊಳೆದು ತರುವುದರಲ್ಲಿ ಪದ್ಮಾವತಿ ಆತುರಗೊಂಡಿದ್ದಳು. ಕಾಳಿನಲ್ಲಿ ಮಣ್ಣು ಇಟ್ಟುಕೊಂಡು ಕೂಡುವುದು ಒಳ್ಳೆಯುದಲ್ಲ. ಹಸನು ಮಾಡಿ ಬೂದಿಯಲ್ಲಿ ಕಲಿಸಿ ಇಟ್ಟರೆ ಕಾಳಿಗೆ ಹುಳ ಹತ್ತುವದಿಲ್ಲ. ಮುಂದಿನ ಸುಗ್ಗಿಯುವರೆಗೆ ಎಲ್ಲವನ್ನೂ ತೂಗಿ ತಿನ್ನಬೇಕು. ಅದಕ್ಕಾಗಿ ಪದ್ಮಾವತಿಗೆ ಒಂದು ಕಾಳು ಅಂದರೆ ಒಂದು ಮುತ್ತು. ಅದರಿಂದ ದಿನಾಲು ಗಂಡನ ದುಂಬಾಲು ಬಿದ್ದಿದ್ದಳು.

"ಹೆಸರು ಮಟ್ಟಿಕೆಗಳನ್ನ ತೊಳೆದು ತರೋಣ ನಡಿರಿ. ನಾಳೆ ಶಿವರಾತ್ರಿಗೆ ಕೆರೆಯು ನೀರು ಬತ್ತಿದುವಂದರೆ ದೂರ ಹಳ್ಳಕ್ಕೆ ಹೋಗುವದಾಗದು. ಯಾವಾಗ ಆದರೂ ನಾವೇ ಮಾಡಲಿಕ್ಕೆ ಬೇಕಲ್ಲ. ಮನೆಯಲ್ಲಿ ಎತ್ತು ಗಾಡಿಗಳಿಲ್ಲ. ಕೆರೆಗಂದರೆ ತಲೆಯ ಮೇಲೆ ಹೊತ್ತು ಒಯ್ಯಬಹುದು. ನೀವು ತಂದ ಕೊಟ್ಟರೆ ನಾನ ನೀರೊಳಗ ನಿಂತ ತೊಳೀತೇನ."

"ಈಗ ಹೊಲದಿಂದ ಮನೆಗೆ ಬಂದ ಹತ್ತಿದ್ದೇವೆ. ಅಷ್ಟೇನ ಅವಸರ ಅದಕ್ಕ ? ನಾಲ್ಕ ತಿಂಗಳ ಬೇಸಿಗೆಯೊಳಗ ಎಲ್ಲಿ ಕೂಲಿ ಹೋಗೋದ ಅದ ಏನು ? ಮಾಡಿದರಾಯಿತು ಸಾವಕಾಶ."

ಎಂದು ಬಾಬಣ್ಣ ಮುಂದೆ ದೂಡುವ. ಅದಕ್ಕೆ ಪದ್ಮಾವತಿ ದೈನ್ಯದಿಂದ ಹೇಳಿಕೊಳ್ಳುವಳು.

"ಗಿಡದ ಮೇಲಿನ ಹುಳಗಳು ಕಾಳಿನೊಳಗ ಬಹಳ ದಿವಸ ಉಳಿದರ ಪಕ್ಕದ ಹುಳ ಹುಟ್ಟತಾವೆ. ಮುಂದೆ ವರ್ಷಾನು ವರ್ಷ ಇರುವ ಕಾಳು ಹಿಟ್ಟ ಬಡಿತಾವ."

"ಇನ್ನೂ ಹೊಲದೊಳಗಿನ ಕಣಕಿ ಮನೆಗೆ ಬಂದ ಹತ್ತಿಲ್ಲ. ಒಬ್ಬೊಬ್ಬರ ರಾಶಿ ನಡದಿದಾವ ಇನ್ನೂ. ನೀ ಈಗ ಬೂದಿಯೊಳಗ ಕಾಳ ಹಾಕಲಿಕ್ಕೆ ಓಡಾಡಲಿಕ್ಕೆ ಹತ್ತಿರುವಿ. ಊರಕಿಂತ ಮುಂಚೇ ಆಯ್ತಲ್ಲ ನಿನ್ನದು ?"

"ಬಂದಷ್ಟ ಜಪ್ಪಿಸಿ ಇಟ್ಟಕೊಳ್ಳಲಿಕ್ಕೆ ಬೇಡಾ?"

" ಇಡೋಣ ಅಲ್ಲ. ಈಗ ಒಯ್ದು ಯಾರಿಗೆ ಕೊಡಲಿಕ್ಕೆ ಹತ್ತಿರುವ ನೇನ ನಾ? ಸ್ವಲ್ಪ ಉಸಿರಾಡಸಲಿಕ್ಕಾದರೂ ಅವಕಾಶ ಕೊಡು."

" ಏನ ಸಾವಿರ ಚೀಲ ರಾಶಿ ಮಾಡಿ ದಣದಿದೀರಿ ಈಗ, ಹೀಗನ್ನಲಿಕ್ಕೆ? "

" ನನ್ನಲ್ಲಿ ಎಲ್ಲಿಂದ ಬಂದಾವು ಸಾವಿರ ಚೀಲ? ಸಾವಿರ ಚೀಲ ಇದ್ದವರನ್ನು ನೋಡು ಹೋಗು."

ಬಾಬಣ್ಣನ ಮನದ ಪ್ರತಿಚ್ಛಾಯೆಯಂತೆ ಈ ಮಾತು ಇತ್ತು.

" ಐ! ಸುಟ್ಟಬರಲಿ. ಎಲ್ಲಿಂದ ಒಯ್ದು ಎಲ್ಲಿ ಹಚ್ಚತೀರಿ ಮಾತನ್ನ! ಕಾಳ ತೊಳೆಯುವಲ್ಲಿರೇಕೆ, ಬಿಡವಲ್ಲಿರೇಕೆ. ಹುಳ ಹತ್ತಿ ಹಾಳ ಆಗಿ ಹೋದರೂ ನಂದೇನ ಹೋಗೋದ ಅದ? " ಎಂದು ಕೆರಳಿ ನುಡಿದಳು ಪದ್ಮಾವತಿ.

" ಹಾಗಾದರ ಸುಮ್ಮ ಇರು. ನಾ ಎಲ್ಲ ಮಾಡತೇನಿ."

" ನೀವು ಮಾಡುವವರಿದ್ದರೆ ಹೀಗೇಕೆ ಆಗತಿತ್ತೊ ನಮ್ಮ ಜನ್ಮ! " ಎಂದು ಮನದಲ್ಲಿಯೇ ಅಂದುಕೊಂಡು ಪದ್ಮಾವತಿ ಸುಮ್ಮನಾದಳು.

" ಏಕೆ ಸುಮ್ಮ ಆದಿ? "

" ಆಗದ ಏನ ಮಾಡಲಿ? "

ಎಂದು ಅನ್ಯಮನಸ್ಕಳಾಗಿ ನುಡಿದು ಸುಮ್ಮನಾದಳು. ಸ್ವಲ್ಪ ಹೊತ್ತು ಯಾರೂ ಏನೂ ಮಾತನಾಡಲಿಲ್ಲ. ಬಾಬಣ್ಣ ಕುಳಿತಲ್ಲಿಯೇ ಕುಳಿತು ಏನೇನೋ ಧೇನಿಸಿದ. ನಡೆದ ಪ್ರಸಂಗದ ಸಿಂಹಾವಲೋಕನ ನಡೆದಿರಬೇಕು, ಅವನ ಮನದಲ್ಲಿ. ತುಸು ತಡೆದು ನುಡಿದ,—

" ಸುಮ್ಮ ಇಲ್ಲದ ಹೊತ್ತಿನೊಳಗ ಏನಾದರ ಒಂದ ಕೆದರಿ ತೆಗೆಯುವಿ. ನನಗ ಸಿಟ್ಟ ತಾಳುವದಿಲ್ಲ. ಏನಾದರ ಒಂದ ಅನ್ನತೇನು. ಆಮೇಲೆ ಮುಖ ಸಪ್ಪಗೆ ಮಾಡಿಕೊಂಡ ಕೂಡುವಿ. "

" ನನ್ನ ಯಾವ ಮಾತಿಗೆ ಸರಳ ಮಾತಾಡಿದ್ದಿರಿ? ಮತ್ತ ನನಗೇ ಕೆದರಿ ತೆಗೆಯುವಿ ಅನ್ನುವಿರಿ. ಇನ್ನೊಮ್ಮೆ ಕಾಳ ತೊಳೆಯುವ ಬಗ್ಗೆ ನನ್ನಿಂದ ಮಾತ ಬಂದರ ದೇವರ ಆಣಿ ತಗೊಳ್ಳರಿ."

" ಆಃ! ಹಃ! ಹಃ! ಕಣ್ಣೊಳಗ ಗಂಗಾ ಹೊಳೆ ಬಂತೇ! "

ಬಾಬಣ್ಣ ನಕ್ಕು ನಗಿಸಲು ಹೋದ. ಪದ್ಮಾವತಿ ಸೆರಗಿನ ಅಂಚಿನಿಂದ ಕಣ್ಣೀರು ಒರಿಸಿಕೊಂಡು ನುಡಿದಳು.

" ಈಗ ಮೊದಲಿನವರು ಇಲ್ಲ ನೀವು."

" ಮೊದಲಿನವ ಇರಲಿಕ್ಕೇನಾಯ್ತು ಈಗ? "

ಎಂದು ನುಡಿದು ಬಾಬಣ್ಣ ಹೊರಗೆ ಹೋಗಿಬಿಟ್ಟ. ಆದರೂ ಹೋಗುವಾಗ ಅದೇಕೋ ಆಕಳಿಸಿದ. ಮೈ ಮುರಿದ. ತಾನು ಅಲ್ಲಿಂದ ಎದ್ದು ಹೋಗುವುದು ಸಹಜ ಎಂದು ತೋರಿಸಲು ಯತ್ನಿಸಿದ. ಆದರೆ ಅವನ ಮನಸ್ಸು ಹೆಂಡತಿಯ ಎದುರಿಗೆ ನಿಲ್ಲುವಷ್ಟು ಧೀರವಿರಲಿಲ್ಲ. ಅಂತಲೇ ಹೊರಬಿದ್ದ.

ಹದಿನೈದು ದಿನಗಳು ಸಂದುವು. ತಿರುಗಿ ಪದ್ಮಾವತಿಯ ಬಾಯಿಂದ ಕಾಲು ತೊಳೆಯುವ ಮಾತು ಬರಲಿಲ್ಲ. ಸಹಜ ಅವಳೊಮ್ಮೆ ಅಂದರೆ ನಾಕು, ಕೆರೆಯ ದಾರಿಯನ್ನೇ ಹಿಡಿಯಬೇಕೆಂದು ಬಾಬಣ್ಣ ಯೋಚಿಸಿದ. ಆದರೆ ಅವಳಿಂದ ಮಾತು ಬರಲಿಲ್ಲ. ಮತ್ತೆ ಎಂಟು ದಿನಗಳವರೆಗೆ ದಾರೀ ಕಾಯ್ದ. ಕೆರೆಯ ನೀರು ದಿನದಿನಕ್ಕೆ ಕಡಿಮೆಯಾಗತೊಡಗಿದುವು. ಈಗಾಗಲೇ ಹಲವರು ಕಾಲುಗಳನ್ನು ತೊಳೆದೊಯ್ದುದರಿಂದ ಹೊಲಸೂ ಆಗುತ್ತ ನಡೆದಿದ್ದುವು. ಆದರೂ ಪದ್ಮಾವತಿ ಆ ವಿಚಾರ ಎತ್ತಲಿಲ್ಲ. ಇವನೇ ಮುಂದಾಗಿ ಹೇಳಲಿಕ್ಕೆ ಮನಸ್ಸು ಒಪ್ಪದು, ತಪ್ಪನ್ನು ಸ್ವೀಕರಿಸದು. ಹೀಗಾಗಿ ಒಂದು ದಿನ ಗಂಗವ್ವನ ಮನೆಯಲ್ಲಿ ಸಹಜ ಮಾತು ಬರಲು ಹೇಳಿದ.

" ನಮ್ಮಾಕಿ ಹಚ್ಚಿದಾಳ ದಿನಾ ನನ್ನ ಬೆನ್ನ. ನಾನೇ ಮುಂದ ಹಾಕ್ತ ನಡದೇನೆ."

" ಮುಂದ ಯಾಕ ಹಾಕುವಿ ? ಒಂದ ದಿನ ಗಾಡಿ ಹೂಡಿಕೊಂಡ ಹೋಗಿ ತೊಳಕೊಂಡ ಬರೋಣ ನಡೆಯಲ್ಲ. ಮತ್ತ ನಾಳೆ ನೀವು ಕಣಕಿ ಹೊಟ್ಟಾ ಅಂತ ಹತ್ತಿದಿರೆಂದರೆ ಹಾಗೇ ಮುಂದ ಬೀಳ್ತದ." ಗಂಗವ್ವ ಹೇಳಿದಳು.

" ಏನ ಕಣಕಿ ಹೊಟ್ಟಾ ಅನಲಿಕ್ಕೆ, ಹೋಗ ಹೋಗತಾ ಎರಡ ಚೀಲ ಕೆರೆಯೊಳಗ ಇಳಿಸಿ ಹೋಗತೇವಂದರ ನೀವು ತೊಳಿಯುತ್ತ ಕೂಡತೀರಿ ಸಂಜಿ ತನಕ....." ಅಪ್ಪಣ್ಣ ತನ್ನ ವಿಚಾರ ಹೇಳಿದ.

"ಹೊಲಸ ನಾರತಾವ ಕೆರೆಯ ನೀರು. ಅಲ್ಲಿ ಯಾರ ತೊಳಿತಾರ?"

"ಹಾಗಾದರ ಕಲ್ಲ ಹಳ್ಳಕ್ಕೇ ಹೋಗಬೇಕು. ಒಂದ ದಿನ ಮುರಿತದ."

"ಮುರಿದರ ಮುರಿಯುವಲ್ಲದೇಕೆ, ಅಲ್ಲೇ ಹೋಗಿ ತೊಳೆದುಕೊಂಡ ಬರೋಣ. ಹಚ್ಚಡ ಕಂಬಳಿ ಒಗೆದುಕೊಂಡೂ ಬರಲಿಕ್ಕೆ ಆಗ್ತದ. ಸುಗ್ಗಿಯೊಳಗ ಬೇಕಾದಲ್ಲಿ ಹೊರಳಾಡಿ ಹೊಲಸ ಆಗಿವೆ. ಅದೂ ಆಯ್ತು. ಯಾಕೋ ಸುಂದರವ್ವಗ ಎಲ್ಲಿಯಾದರೂ ಊಟಕ್ಕ ಹೋಗೋಣ ಅನಸತದ ಅಂತ. ಓಗರಾ ಹಾಕತೇನಿ. ಎಲ್ಲಾರೂ ಕೂಡಿ ನಾಳೆ ಇಲ್ಲ ನಾಡದು ಹೋಗೋಣ ನಡೆಯಿರಿ. ಮತ್ತಾರಾದರೂ ಬಂದರೆ ಕೇಳು ಬಾ ಬು" ಎಂದ ಗಂಗವ್ವ ತನ್ನ ವಿಚಾರವನ್ನು ಸೂಚಿಸಿದಳು. ಅವಳು ಈ ಕೆಲಸದಲ್ಲಿ ಇಷ್ಟು ಉದಾರಿಯಾಗಲಿಕ್ಕೆ ಒಂದು ಕಾರಣವೂ ಇತ್ತು. ತನಗೆ ಕಾಲಿಗೆ ಸಂದಿವಾತವಿದೆ. ನೀರಲ್ಲಿ ಬಹಳ ಹೊತ್ತು ನಿಂತು ತೊಳೆಯಲಿಕ್ಕೆ ಆಗುವದಿಲ್ಲ. ಮಗಳು ಸುಂದರಿಗೆ ಕಾಳು ತೊಳೆಯಲಿಕ್ಕೆ ಚನ್ನಾಗಿ ಬರುವದಿಲ್ಲ. ಮನೆಯಲ್ಲಿ ತೊಳೆಯಬೇಕಾದ ಕಾಳು ಎರಡು ಮೂರು ಚೀಲಗಳಷ್ಟು ಇದ್ದುವು. ಕೂಲಿಕೊಟ್ಟು ತೊಳಿಸಿದರೆ ಖರ್ಚು ಹೆಚ್ಚಿಗೆ ಬರುವದು. ಹೀಗೆ ಏನಾದರೂ ಮಾಡಿದರೆ ಸ್ವಲ್ಪ ವೆಚ್ಚದಲ್ಲಿ ಆಗುವದು, ಎಂಬುದು ಅವಳ ಲೆಕ್ಕ. ಅದರಲ್ಲೂ ಪದ್ಮಾವತಿಯು ಸ್ವಲ್ಪವೂ ಕಸರುಳಿಯದಂತೆ ಕಾಳು ತೊಳೆಯುವಳೆಂಬುದು ಗಂಗವ್ವ ಬಲ್ಲಳು.

"ಚಂದ್ರವ್ವ ಅಬಚಿ ಬರತಾಳೇನ ಕೇಳತೇನ. ಅವರೂ ಇನ್ನೂ ತೊಳೆದು ತಂದಂತಿಲ್ಲ" ಎಂದ ಬಾಬಣ್ಣ.

"ಅವರೂ ಎಷ್ಟ ಇದಾವ ಕಾಳು?" ಗಂಗವ್ವ ಕೇಳಿದಳು.

"ಒಂದ ಒಂದೂವರಿ ಚೀಲ ಇರಬೇಕು."

"ಹಾಗಾದರೆ ಹೇಳು. ಎಲ್ಲಾರೂ ಒಂದ ದಿನದೊಳಗ ಆಗ್ತಾವ, ಮುಂಜಾನೆ ಹೋದೆವೆಂದರೆ. ಚಂದ್ರಾನೂ ಚಲೋ ತೊಳಿಯುತಾಳ ಕಾಳ."

ಈ ರೀತಿ ಗಂಗವ್ವ ಅನುಮತಿಯಿತ್ತಳು. ಆದರೆ ಅವಳ ಗಂಡ ಅಪ್ಪಣ್ಣ ಸುಮ್ಮನಿರಲಿಲ್ಲ.

"ಹನ್ನೆರಡ ಮಂದೀನೆಲ್ಲ ಯಾತಕ್ಕ ಕೂಡಸತ ಕೂಡತೀರಿ, ಸುಮ್ಮನೆ. ನಾವಷ್ಟೇ ಹೋಗಿ ತೊಳಕೊಂಡ ಬರೋಣ ನಡೆಯಿರಿ. ಕೆಟ್ಟ ಕಲ್ಲಿನ ಹಾದಿ. ಎತ್ತುಗಳಿಗೆ ಇಲ್ಲದ ತ್ರಾಸು."

"ಇಲ್ಲದ್ದೊಂದ ತೆಗೆಯುವವ ನೀ. ಮತ್ತೊಬ್ಬರದ್ದು ಒಂದ ಚೀಲ ಒಗೆದುಕೊಂಡ ಹೋದರೆ ಎತ್ತಗಳ ಕೊರಳ ಹರಿತದ ಏನು?" ಗಂಗವ್ವ ಬೆದರಿಸಿದಳು.

"ನೋಡೋಗ ಅದ, ದೊಡ್ಡ ಎತ್ತಿನ ಹೆಗಲ ಎಷ್ಟ ಬಾತದ."

"ಅಡ್ಡ ತಿಡ್ಡ ಹೂಡತೀರಿ ಮತ್ತ ಬಾಯೋದಲ್ಲ."

"ತಗೊಳ್ಳುವಾಗಲೇ ಹೇಳಿದ್ದೆ ನಾ. ಎತ್ತ ಹೆಗಲೊಳಗ ಮಿದುವು ಅವ ಅಂತ." ಅಪ್ಪಣ್ಣ ತನ್ನ ಮೇಲಿನ ದೋಷ ಹಾರಿಸಿಕೊಳ್ಳಲು ನುಡಿದ.

"ತಾತೋಬಾನಕಿಂತ ಶಾಣ್ಯಾ ಆದಿಯಲ್ಲ ನೀ!"

ಅಪ್ಪಣ್ಣ ಹೆಂಡತಿಯ ಮಾತಿಗೆ ಸುಮ್ಮನಾದ. ಆಮೇಲೆ ಗಂಗವ್ವ ಬಾಬಣ್ಣನ ಕಡೆಗೆ ಹೊರಳಿ ಹೇಳಿದಳು.

"ಅವನ ಏನ ಮಾಡುವಿ ಬಿಡು. ನೀ ಹೋಗಿ ಚಂದ್ರಾನ ಕೇಳು."

ಆದಿನ ಸಾಯಂಕಾಲ ಬಾಬಣ್ಣ ಚಂದ್ರವ್ವನ ಮನೆಗೆ ಹೋಗಿ ಕಾಳು ತೊಳೆಯಲು ಹೊರಡುವ ವಿಷಯಕ್ಕೆ ಮಾತನಾಡಿದ. ಚಂದ್ರವ್ವನೂ ಒಪ್ಪಿದಳು. ಅನಾಯಾಸ ಬಂಡಿ ಇರುವಾಗ ಇಲ್ಲೆನ್ನುವದೇಕೆ? ಎಂಬು ದವಳ ವಿಚಾರ. ನಾಲ್ಕು ಬುಟ್ಟಿ ಗಂಗವ್ವನ ಕಾಳು ತೊಳೆಯಲಿಕ್ಕೆ ಸಹಾಯ ಮಾಡಿದರೆ ತೀರಿತು, ಅವರ ಬಂಡಿಯಲ್ಲಿ ಚೀಲ ಒಗೆದುದರ ಉಪಕಾರವೂ ಕಳೆದಂತಾಯಿತು ಎಂದು ಭಾವಿಸಿದಳು.

ಬಾಬಣ್ಣನ ಹೇಳಿಕೆಯಂತೆ ಚಂದ್ರವ್ವನೂ ಆದಿನ ಊಟಕ್ಕೆ ರೊಟ್ಟೀ ಬುತ್ತೀ ಮಾಡಿಸಿ ಕಟ್ಟಿಕೊಂಡಳು. ಗಂಡನ ಸೂಚನೆಯಂತೆ ಪದ್ಮಾ ವತಿಯೂ ಊಟದ ಸಿದ್ಧತೆ ಮಾಡಿಕೊಂಡಿದ್ದಳು. ಎಲ್ಲರೂ ಆನಂದದಿಂದ ಹಳ್ಳಕ್ಕ ಕಾಳು ತೊಳೆಯಲು ಹೊರಟರು. ಬಾಬಣ್ಣ ಬಂಡಿ ಹೊಡೆಯು ವವ. ಪದ್ಮಾವತಿ ಸುಂದರಾ ಬಂಡಿಯಲ್ಲಿ ಕುಳಿತಿದ್ದರು. ಬಾಬಣ್ಣನ ಮಕ್ಕಳೂ ಇದ್ದರು. ಹಿಂದೆ ಚಂದ್ರವ್ವ ಗಂಗಾ ಅಪ್ಪಣ್ಣ ನಡೆಯುತ್ತಿದ್ದರು. ಪ್ರಯಾಣ ನಾಗಿದ್ದಿತು.

"ಯಾಕೋ ಸುಂದರಾ ಮೆತ್ತಗ ಆಗಿದಾಳಽ ಗಂಗಾ?" ಎಂದು ಚಂದ್ರವ್ವ ಸಹಜ ಕೇಳಿದಳು.

"ನಾಲ್ಕ ದಿನ ರಾಶಿಯೊಳಗ ಹೊಲ ಮನೆ ಅಂತ ದುಡತ ಹೆಚ್ಚ ಬಿದ್ದದ. ಮೊದಲೇ ಕೈಯಿಂದ ಆಗದ ಪೋರಿಗಳು ಈಗಿನವು."

ಎಂದು ಗಂಗವ್ವ ಕಾರಣ ಹೇಳಿದಳು.

"ಹಾಗಾದರ ನೀರೊಳಗ ನಿಂತ ಯಾತಕ್ಕ ಕಾಳ ತೊಳಿತಾಳು? ಹೆಚ್ಚು ಕಡಿಮೆ ಮತ್ತೇನಾದರೂ ಆದೀತು."

"ಏನ ಆಗ್ತದ ತಗೋ. ಪ್ರಾಯದ ಪೋರಿಗಳು ದುಡಿದರೇನೇ ಒಳ್ಳೇದು." ಗಂಗವ್ವ ಹೇಳಿದಳು. ಇಷ್ಟರಲ್ಲಿ ಬಂಡಿ ಸ್ವಲ್ಪ ಮುಂದೆ ಹೋಗಿದ್ದಿತು. ಇವರು ಮಾತಿನಲ್ಲಿ ಮೈ ಮರೆತು ಹಿಂದೆ ಉಳದಿದ್ದರು. ಈ ಸಂಧಿಯನ್ನು ಸಾಧಿಸಿ ಚಂದ್ರವ್ವ ನುಡಿದಳು,—

"ಏನಾದರೂ ನಮುಜೂತಿ ಮಾಡಿ ಕಳಿಸಿಕೊಡಬೇಕಿಲ್ಲ! ಪ್ರಾಯದ ಹೆಣ್ಣ ಮನೆಯೊಳಗ ಯಾಕೆ ಇಟ್ಟಕೊಂಡ ಕುಳತಿದಿ?"

"ನೀನಾದರೂ ಹೇಳವ್ವ ಚಂದ್ರಾ. ನಾನು ಹೇಳಿ ಹೇಳಿ ದಣಿದೆ. ಈಕಿನೂ ಕೇಳುವದಿಲ್ಲ. ಆಕಿನೂ ಹೋಗತೇನ ಅನ್ನುವದಿಲ್ಲ" ಎಂದು ಅಪ್ಪಣ್ಣ ಚಂದ್ರವ್ವನ ಮಾತಿಗೆ ಪುಷ್ಟಿಯನ್ನು ಕೊಟ್ಟ.

"ಇಷ್ಟ ಹೇಳುವವ ಕಳಿಸಿಕೊಡಬೇಕಿಲ್ಲ ಮತ್ತ! ಇನ್ನೂ ಯಾಕ ಇಟಕೊಂಡ ಕುಳಿತಿದಿ?" ಗಂಗವ್ವ ಗಂಡನ ಮೇಲಿ. ಹರಿಹಾಯ್ದು ನುಡಿದಳು.

"ನಾಳೇ ಕಳಿಸಿ ಬರತೇನ. ಆಕೆ ಬಂಗಾರ ಆಕೆಗೆ ಕೊಟ್ಟ ಬಿಡು"

ಅಪ್ಪಣ್ಣನೂ ನಿರ್ಧಾರ ಸ್ವರದಲ್ಲಿ ನುಡಿದ.

"ಎಷ್ಟ ಅದನಽ ಗಂಗಾ ಬಂಗಾರ?" ಚಂದ್ರವ್ವ ನಡುವೆ ಕೇಳಿದಳು.

"ಬಂಗಾರ ಬಂಗಾರ ಅನಲಿಕ್ಕೇನು? ನಾಲ್ಕು ತೊಲೆ ಪುತಳಿ ಅವ. ಆರ ತೊಲೆ ಪಾಟಲಿ ಅವ. ಇಷ್ಟೇ ತಾಯಿ!"

"ಯಾತಕ್ಕೋ ಮಾರಿ ಖರ್ಚಮಾಡಿಕೊಂಡಿದೀರಿ ಹೌದ?"

"ಇಲ್ಲವ್ವ! ಅವಳ ಬಂಗಾರ ನಾ ಯಾತಕ್ಕ ಮಾರಲಿಕ್ಕೆ ಹೋಗಲಿ? ಅದ ಮನೆಯೊಳಗ. ಆದರೆ ನನ್ನ ಮಗಳ ಜನ್ಮ ದಂಡಿಗೆ ಹತ್ತುವ ತನಕ

ನಾನೇನ ಕೊಡುವಂತಿಲ್ಲ ನೋಡ ಚಂದ್ರಾ. ಇವರೆಲ್ಲರೂ ಕೂಡಿ ನನ್ನ ಮಗಳ ಕುತ್ತಿಗೆ ಕೊಯ್ಸಿದಾರ."

"ನಾವೇನ ಮಾಡೋಣ ಚಂದ್ರಾ? ಅಳಿಯನ ನೋಡಿದಾಳ, ಮನಿ ನೋಡಿದಾಳ, ತಾನೇ ಒಪ್ಪಿದಾಳ. ಈಗ ನಮಗೆ ಅಂದರೆ ಏನ ಬಂತು? ಸುಂದರಿಯ ಗಂಡ ಮಾತ್ರ ಸ್ವಚ್ಛ ಹೇಳಿ ಕಳಸಿದಾನ. ಬಂಗಾರ ತಂದರೆ ಮನೆಯೊಳಗ ಇಟ್ಟಕೊಳ್ಳತೇನಂತ. ಈಕೆ ಹೀಗೆ ಅನ್ನತಾಳ. ಯಾವ ಕಡೆಗೆ ಅಂತ ನಾವು ಸಾಯಬೇಕು?" ಎಂದು ಅಪ್ಪಣ್ಣಾ ಕೇಳಿದ.

"ಇವರ ಮಾತ ಕೇಳಿ ನಾ ಈಗ ಬಂಗಾರ ಕೊಟ್ಟರ ಹುಚ್ಚ ಆಗ ಕೋತೇನ ಹನ್ನೆರಡ ಜನರ ಕೈಯಿಂದ. ಈಗ ಬಂಗಾರ ಕಸಕೊಂಡ ಹೊರಗ ಹಾಕಿದರಂದರ ಯಾರನ್ನ ಹಿಡಿಯೋಣು? ಆಕೆ ಒಂದ ಹಡಿಯಲಿ. ಗಂಡನ ಮನೆಗೆ ಎರಡಸಲ ಹೋಗಿಬರಲಿ. ಸುಖಾ ದುಃಖಾ ಕೇಳಕೋತೇನ. ಆಮೇಲೆ ಕೊಡತೇನಲ್ಲ, ಇಲ್ಲ ಅನ್ನತೇನ ಏನು?"

"ಅವನಿಗೇನ ಹೆಂಡತಿ ಬೇಡ ಆಗಿದಾಳ ಏನ ಗಂಗಾ?" ಚಂದ್ರವ್ವ ಪ್ರಶ್ನೆ ಹಾಕಿದಳು.

"ಅಷ್ಟ ಹೆಂಡತಿ ಅಗತ್ಯ ಇದ್ದವ, ಇಷ್ಟ ದಿನಾ ಆದರೂ ಬರದ ಇದ್ದಾನೇನು? ಎಲ್ಲೇದ ಪೆದ್ದ ಅದ." ಗಂಗವ್ವನ ಮಾತಿನ ರೀತಿಯಿದು.

"ಹೀಗಂದೇ ಈಕೆ ಕೆಡಸಿ ಇಟ್ಟೆದಾಳ ಚಂದ್ರಾ." ಅಪ್ಪಣ್ಣಾ ಮಾತೆತ್ತಿದ.

"ನಾ ಕೆಡಿಸಿದಂತೆ ದಂಡೆಗೆ ಹಚ್ಚತೇನೆ. ನೀವು ಸುಮ್ಮನೆ ಕೂಡರಿ ಅಲ್ಲ!"

"ಏನ ದಂಡೆಗೆ ಹಚ್ಚುವಿ; ಮಗಳ ಜನ್ಮ ಅರ್ಧ ಆದಮೇಲೆ?"

ಹೀಗೆ ಇನ್ನೂ ಎಷ್ಟು ಹೊತ್ತು ಗಂಡ ಹೆಂಡಿರಲ್ಲಿ ವಾಗ್ವಾದ ನಡೆಯುತ್ತಿದ್ದಿತೋ ಏನೋ. ಅಷ್ಟರಲ್ಲಿ ಕಲ್ಲ ಹಳ್ಳ ಬಂದಿತು. ಒಂದು ಗಿಡದ ನೆರಳಿಗೆ ಈಗಾಗಲೇ ಬಾಬಣ್ಣಾ ಎತ್ತಿನ ಕೊರಳು ಬಿಚ್ಚಿದ್ದ. ಎತ್ತುಗಳನ್ನು ಒಂದು ಗಿಡಕ್ಕೆ ಕಟ್ಟಿ ಮೇವು ಹಾಕಿದ. ಆಮೇಲೆ ಬಂಡಿಯೊಳಗಿನ ಚೀಲಗಳನ್ನು ಕೆಳಗಿಳಿಸಿದ. ಸುಂದರವ್ವ ಗಿಡದ ನೆರಳಿಗೆ ಅಡ್ಡಾಗಿದ್ದಳು. ಪದ್ಮಾವತಿ

ಕೂಸಿಗೆ ಮೊಲೆಯೂಡಿಸುತ್ತಿದ್ದಳು. ಅಷ್ಟರಲ್ಲಿ ಹಿಂದಿನಿಂದ ಚಂದ್ರವ್ವ ಅಂದಳು,—

"ಹೀಗೆ ಆಲಸ್ಯ ಮಾಡಿದರೆ ನಾಲ್ಕು ಚೀಲ ಕಾಳ ತೊಳೆಯೋದು ಯಾವಾಗ? ಏಳರಿ, ಬುಟ್ಟಿ ತಗೊಳ್ಳರಿ ಇನ್ನ. ಗಾಡಿಯೊಳಗ ಕುಳಿತ ಬಂದಿದೀರಿ, ಉಸ್ಸಂತ ಕೂಡಲಿಕ್ಕೇನು? ಈಗೇನ ಮುದಿಕೆಯರೋ ತದಿಕೆಯರೋ?"

ಸುಂದರವ್ವ ಎದ್ದು ಕುಳಿತು ಉತ್ತರ ಕೊಟ್ಟಳು,—

"ಇನ್ನೂ ನಡೆಯುತ್ತ ಬರುವದು ಒಳ್ಳೇದ ತಾಯಿ! ಈ ಕಲ್ಲಿನ ಹಾದಿಯೊಳಗ ಮಗ್ಗಲ ಎಲುವ ಎಲ್ಲ ಹಣ್ಣ ಆಗಿಹೋದುವು."

"ಇಳಿದ ನಡಿಯಬೇಕಿಲ್ಲರಿ ಆಮೇಲೆ?" ಬಾಬಣ್ಣ ಕೇಳಿದ.

"ಬಂಡಿ ತರಬು ತರಬು ಅಂದರ ಮುಂದ ಓಡಿಸಿಕೊಂಡ ಬಂದೆಯಲ್ಲ ನೀ. ಹೇಗೆ ಇಳಿತಾರದು?" ಸುಂದರಿಯ ಬಿಂಕದ ಪ್ರಶ್ನೆಯಿದು.

"ಸಾಕು ಏಳಿನ್ನ."

ಎಂದು ಗಂಗವ್ವ ಬುಟ್ಟಿಯನ್ನು ತಕ್ಕೊಂಡು ಕಾಳಿನ ಚೀಲದ ಹತ್ತರ ನಾಗಿದಳು. ಎಲ್ಲರೂ ತಮ್ಮ ತಮ್ಮ ಬುಟ್ಟಿಗೆ ಕೈಯಿಕ್ಕಿದರು. ಬಾಬಣ್ಣ ಚೀಲವನ್ನು ನೀರಿನ ಸಮೀಪಕ್ಕೆ ಎಳೆದುಕೊಟ್ಟ. ದೂರದಲ್ಲಿ ಕುಳಿತು ಅಪ್ಪಣ್ಣ ಚಿಲುಮೆಯಲ್ಲಿ ತಂಬಾಕು ತುಂಬತೊಡಗಿದ. ಅದನ್ನು ನೋಡಿ ಗಂಗವ್ವ ಅಂದಳು,—

"ನಡೆಯಿಸಿದೆ ಕಾಣತದ ನಿನ್ನ ಕೆಲಸ?"

"ಏನು ಮಾಡನ್ನುವಿ ಈಗ?"

"ಗುಡಾರ ಹಾಸ ಬಾ. ಈಗ ಕಾಳ ತೊಳದರ ಆರಾಕಲಿಕ್ಕೆ ಬೇಡ?" ಸ್ವಲ್ಪ ತಡೆದು "ನೀವು ಅಷ್ಟ ಲಗೂನೆ ಹಚ್ಚಡ ಕಂಬಳಿ ಅಷ್ಟ ಒಗೆದ ಬಿಸಲಿಗೆ ಹಾಕಿರಿ. ಮನೆಗೆ ಹೋಗುವುದರಲ್ಲಿ ಒಣಗಲಿಕ್ಕ ಬೇಕು." ಎಂದು ಆಜ್ಞಾಪಿಸಿದಳು.

ಅಪ್ಪಣ್ಣ ಮುಂದೇನೂ ಮಾತನಾಡದೆ ಕೆಲಸಕ್ಕೆ ತೊಡಗಿದ. ಒಂದೆ ರಡು ತಾಸಿನ ನಂತರ ಎಲ್ಲರೂ ಕೂಡಿ ಊಟ ಮಾಡಿದರು. ಆಮೇಲೆ ತುಸು ಹೊತ್ತು ವಿಶ್ರಾಂತಿ ತಕ್ಕೊಂಡು ಮತ್ತೆ ಉಳಿದ ಕಾಳುಗಳನ್ನು ತೊಳೆಯಲು

ಆರಂಭಿಸಿದರು. ಸಾಯಂಕಾಲದವರೆಗೆ ಎಲ್ಲ ಕೆಲಸವನ್ನೂ ತೀರಿಸಿಕೊಂಡು ಮನೆಗೆ ಮರಳಿದರು ತುಂಬ ದಣಿವಾಗುವಷ್ಟು ಕೆಲಸವಾಗಿದ್ದರೂ ಎಲ್ಲರಿಗೂ ಒಂದು ಸುಖದ ಪ್ರಯಾಣದಂತೆ ಎನಿಸಿದ್ದಿತು. ವನದೂಟ ತೀರಿಸಿ ಮನೆಗೆ ಬರುವಂತೆ ಹರುಷದಿಂದ ಬಂದರು.

ಆ ಹರುಷ ಬಹಳ ಹೊತ್ತು ಉಳಿಯಲಿಲ್ಲ. ಅದೇ ರಾತ್ರಿ ಒಂದು ದುರ್ಘಟನೆ ಸಂಭವಿಸಿತು. ಗಂಗವ್ವನ ಹೊಲದಲ್ಲಿಯ ಕಣಕಿಯ ಗೂಡಿಗೆ ಯಾರೋ ಬೆಂಕಿ ಹಚ್ಚಿದರು. ಬೆಳತನಕ ಉರಿಯಿತದು. ಗಾಳಿ ಇಲ್ಲದುದ ರಿಂದಲೇ ಉಳಿದ ಗೂಡುಗಳು ಉಳಿದುವೆನ್ನಬೇಕು. ಆದರೆ ಈ ಸುದ್ದಿ ಬೆಳ ತನಕ ಮನೆಯವರಿಗೂ ತಿಳಿದಿರಲಿಲ್ಲ. ಮುಂಜಾನೆ ಸಮೀಪದ ಹೊಲದವರು ಊರೊಳಗೆ ಬಂದು ತಿಳಿಸಿದಾಗಲೇ ಇವರಿಗೆ ಗೊತ್ತಾದುದು

ಈ ಸಂಗತಿ ತಿಳಿದೊಡನೆಯೇ ಗಂಗವ್ವನ ಎದೆಗೆ ಬರೆಕೊಟ್ಟಂತಾ ಯಿತು. ನಮ್ಮ ಗೂಡು ಸುಡಲಿಕ್ಕೆ ಕಾರಣವೇನು? ಸುಂದರಿಯ ಸಲು ವಾಗಿಯೋ ನನ್ನ ಸಲುವಾಗಿಯೋ, ಯಾರ ಸಲುವಾಗಿ ಇರಬೇಕಿದು? ಪ್ರಾಯದ ಹುಡಿಗೆಯನ್ನು ಮನೆಯಲ್ಲಿ ಬೇರೆ ಇಟ್ಟುಕೊಂಡು ಕೂತಿರುವೆ. ನಿನ್ನೆ ಚಂದ್ರ ವ್ವನೂ ಮುನ್ಸೂಚನೆಯಂತೆಯೇ ಹೇಳಿದಳು ಬೇರೆ. ಊರಲ್ಲೆಲ್ಲ ನೊದಲೇ ಸುದ್ದಿಯಾಗಿರಬೇಕೆ ?

ಒಂದು ವೇಳೆ ಬಾಬಣ್ಣನಿಗೆ ಆಶ್ರಯ ಕೊಟ್ಟುದಕ್ಕೆ ಗೌಡನು ಏನಾ ದರೂ ಮಾಡಿಸಿರಬೇಕೇ? ಆದರೆ ಇದಕ್ಕಾಗಿ ಗೂಡಿಗೆ ಬೆಂಕಿ ಹಚ್ಚಿಸುವ ಸಂಬಂಧವೇನು? ಇನ್ನೂ ದನಗಳಿಗೆ ವಿಷ ಹಾಕಿಸಬಹುದು. ಮನೆಗೆ ಕನ್ನ ಕೊರೆಯಿಸಬಹುದು. ಇದು ನನ್ನ ತಲೆಗೇನೇ ಬಂತು, ಎಂದು ಚಿಂತಿಸುತ್ತಿ ದ್ದಳು. ಈ ಕೃತಿ ಹೆಣ್ಣಿಗಾಗಿಯೇ ಆದುದೆಂದು ಅವಳ ಮನಸ್ಸು ತಿರುತಿರುಗಿ ನುಡಿಯುತ್ತಿದ್ದಿತು.

"ಯಾವ ಗೂಡಿಗೆ ಹಚ್ಚಿದಾರ ನೋಡಿಕೊಂಡ ಬಾ, ಹೊಲಕ ಹೋಗಿ." ತಾತಪ್ಪ ಅಪ್ಪಣ್ಣಗೆ ಸೂಚಿಸಿದ. ಅವನ ತಲೆಯೂ ಚಿಂತೆ ಯಿಂದ ಕಾಯ್ದಿದ್ದಿತು.

"ಈಗ ಹೋಗತೇನೆ, ಹಾಲ ಒಂದ ಗಿಂಡಿ ತಕ್ಕೊಂಡ."

"ಸುಟ್ಟ ಹೋದ ಮೇಲೆ ಹಾಲ ಹಾಕು, ತುಪ್ಪ ಹಾಕು. ಬೂದಿಯೊಳಗೆ ಏನ ಹಾಕಿದರೆ ಏನಾಗೋದು? ಇಲ್ಲದೊಂದ ಮನಸಿನ ಸಮಾಧಾನ" ಎಂದ ತಾತಪ್ಪ.

"ಇರಲಿ ಮಾಡೋದ ಮಾಡಲಿಕ್ಕೆಬೇಕಲ್ಲ. ಅಷ್ಟೇ ಮನಸ್ಸಿಗೆ ಶಾಂತ." ಗಂಡನ ಕಡೆಗೆ ಹೊರಳಿ "ಲಗೂನ ಧಾರೀ ತೆಗೆಯಿಸಿಕೊಂಡ ಹೋಗಿ ಬಾ ಹೊಲಕ್ಕ. ಇನ್ನೂ ಬೆಂಕಿ ಇದ್ದರೆ ಹೌದಿನಿಂದ ನೀರ ಒಯ್ದ ಆರಿಸಬೇಕೋ ಏನೋ. ಸಮೀಪದೊಳಗ ಉಳಿದ ಗೂಡುಗಳೂ ಇವೆ" ಎಂದಳು

"ಇನ್ನೂ ಸುಂದರಾ ಎದ್ದು ಹಿಂಡಿಕೊಟ್ಟಾಗ ನಾ ಹೋಗೋದು!" ಅಪ್ಪಣ್ಣ ಹೇಳಿದ. ಈ ಸುದ್ದಿಯನ್ನು ಕೇಳಿದಾಗಿನಿಂದಲೂ ಸುಂದರಿಯ ಕೈಕಾಲುಗಳೇ ತಣ್ಣಗಾಗಿದ್ದುವು. ಅವಳ ಮುಖವು ಅಂಜಿಕೆಯಿಂದ ಬಿಳಿ ಪೊಡೆದಿದ್ದಿತು. ಯಾರಿಗೂ ಮುಖ ತೋರಿಸಬಾರದೆಂದೆನಿಸುವುದು. ಇದು ತನ್ನ ಸಲುವಾಗಿ ಎಂಬುದು ಅವಳಿಗೆ ಸ್ಪಷ್ಟವಾಗಿ ಗೊತ್ತು. ಬಾಬಣ್ಣ ತನ್ನಲ್ಲಿ ಸಲಿಗೆಯಿಂದ ಇರುವುದೇ ಈ ಗೂಡಿನ ನಾಶಕ್ಕೆ ಕಾರಣ ಎಂದೂ ಅವಳು ಬಲ್ಲಳು. ಅದರ ಜೊತೆಗೆ ಯಾವುದೋ ಒಂದು ಸಂಗತಿ—ಇಲ್ಲಿಯವರೆಗೆ ಮುಚ್ಚಿಟ್ಟ ಗುಪ್ತ ಸುದ್ದಿ—ಎಲ್ಲಿ ಹೊರಬೀಳುವುದೊ ಎಂಬ ಹೆದರಿಕೆಯೊಂದು ಅವಳ ಹೃದಯವನ್ನು ಆವರಿಸಿ, ಅವಳನ್ನು ಹಣ್ಣು ಮಾಡಿದ್ದಿತು.

"ಸುಂದರಾ, ಎಮ್ಮೆಯ ಧಾರಿ ತೆಗೆದ ಕೊಡವ್ವ! ಹಾಗೇ ಹೋಗಿ ಯಾವ ಗೂಡಕ್ಕ ಹಚ್ಚಿದಾರ ನೋಡಿ ಬರಲಿ. ಹುಡುಗನಿಗೇನ ಮೈಮೇಲಿ ಎಚ್ಚರ ಅದೆ ಏನು ನೋಡು ಮೂರು ತಾಸ ಹೊತ್ತ ಏರಿತು. ಇನ್ನೂ ಇತ್ತ ಹಾಯ್ದೇ ಇಲ್ಲ. ಅವನಿಗೂ ಚಿಂತೆ ಇರಬಾರದು!" ತಾತಪ್ಪ ಹೇಳಿದ.

"ಯಾರು?" ಅಪ್ಪಣ್ಣ ಅಂದ.

"ಮತ್ತೆ ಯಾರು? ಬಾಬು!" ಯಾವುದೋ ಒಂದು ವಿಚಾರದಲ್ಲ ಇದ್ದಂತಿದ್ದ ತಾತಪ್ಪ.

ಸುಂದರಿಗೆ ಒಂದಿಷ್ಟು ಧೈರ್ಯ ಬಂದಂತಾಯಿತು. ಬಾಬಣ್ಣನ ಗೂಡು ಸುಟ್ಟಿದ್ದರಂತೂ ಪ್ರಶ್ನೆಯೇ ಇಲ್ಲ ಎಂದುಕೊಂಡು ಎದ್ದು ಹೋಗಿ ಹಾಲು ಹಿಂಡಿ ಕೊಟ್ಟಳು.

ಅಪ್ಪಣ್ಣ ಹೊಲಕ್ಕೆ ಹೋದ. ಬಾಬಣ್ಣ ಈಗಾಗಲೇ ಅಲ್ಲಿಗೆ ಹೋಗಿದ್ದ. ಮುಂಜಾನೆ ಪದ್ಮಾವತಿಯು ಊರ ಹೊರಗೆ ಶೌಚಕ್ಕೆ ಹೋದಾಗ ಯಾರೋ ಸುದ್ದಿಯನ್ನು ಹೇಳಿದ್ದರು ಕೂಡಲೆ ಮನೆಗೆ ಬಂದು ಗಂಡನನ್ನು ಎಬ್ಬಿಸಿ ಕಳಿಸಿಕೊಟ್ಟಿದ್ದಳಾಕೆ. ಮೊದಲೇ ನಮಗೆ ವೇಳೆ ಕೆಟ್ಟ ಹತ್ತಿದೆ. ಇದರಲ್ಲಿ ಇದೇನು ಬಂತು? ಎಂದು ಚಿಂತಿಸಿದಳು. ಆದರೂ ಅವಳಿಗೆ ಸುದ್ದಿಯು ಸಂಪೂರ್ಣ ನಿಜವೆನಿಸಿರಲಿಲ್ಲ. ಅಂತಲೇ ಅವಳು ಗಂಗವ್ವನ ಮನೆಗೆ ತಿಳಿಸಲು ಹೋಗಿರಲಿಲ್ಲ. ರಾತ್ರಿ ಮತ್ತೆ ಯಾತರದ್ದಾದರೂ ಬೆಳಕು ಬಿದ್ದಿದ್ದರೆ ಸುಮ್ಮನೇ ನಾವೇ ಹೂಲಿ ಎಬ್ಬಿಸಿದಂತಾದೀತು. ಸುಟ್ಟಿದ್ದರೆ ತಾನೇ ತಿಳಿದೇ ತಿಳಿಯುವುದು. ಇಲ್ಲವಾದರೆ ಬಾಬಣ್ಣ ತಿರುಗಿ ಮನೆಗೆ ಬರುವ. ಹೊಲಕ್ಕೆ ಹೋಗಿಬಂದಂತೆ ಆಗುವುದು, ಇಷ್ಟೇ ಅಲ್ಲವೆ? ಎಂದುಕೊಂಡು ತನ್ನ ಮನೆಯಲ್ಲಿ ಸುಮ್ಮನಿದ್ದಳು. ಆದರೂ ಅವಳ ಮನಸ್ಸು ಕೆಲಸದಲ್ಲಿ ತೊಡಗಲಿಲ್ಲ. ಗಂಡನ ದಾರಿಯನ್ನೇ ಕಾಯುವಳು. ಹೊರಗೆ ನೋಡುವಳು. ದೃಷ್ಟಿ ಹೊರಗೆ ಇತ್ತಾದರೂ ಅದು ಬಾಬಣ್ಣ ಬಂದಿದ್ದರೂ ಗುರುತಿಸುವಷ್ಟು ಬಲವಾಗಿರಲಿಲ್ಲ. ಅದು ಅಂತರಂಗದಲ್ಲಿಯೇ ಸುತ್ತುತ್ತಿದ್ದಿತು. ಪದ್ಮಾವತಿಯು ಮನವೆದುರು ಪ್ರಶ್ನೆಯ ಮೇಲೆ ಪ್ರಶ್ನೆಗಳು ಬಂದು ನಿಲ್ಲುತ್ತಿದ್ದುವು.

ಗೂಡು ಏಕೆ ಸುಟ್ಟಿರಬೇಕು ?

ಯಾರ ಗೂಡಿಗೆ ಬೆಂಕಿ ಹಚ್ಚಿರಬೇಕು ?

ಗಂಗವ್ವನ ಗೂಡಿಗೆ ಅನ್ನುತ್ತಿದ್ದರಲ್ಲ!

ಅವಳ ಗೂಡು ಈಗ ಸುಡಲು ಕಾರಣ ?

ತಿರುಗಿ ಮುದುಕೆಯಾದಳು. ಅವಳ ವಿಷಯ ಎಲ್ಲರಿಗೂ ಗೊತ್ತಿದ್ದ ಸಂಗತಿ. ಅವಳ ನಡತೆಗಾಗಿ ಈಗೇಕೆ ಸುಟ್ಟಾರು ?

ಸುಂದರಿಗಾಗಿ ಇದ್ದೀತೆ ?

ಅವಳಿಗಾಗಿ ಯಾರು ಯಾರಲ್ಲಿ ತುರುಸು ಬಿದ್ದಿದೆಯೋ ?

ಎಂಬ ಪ್ರಶ್ನೆ ಅವಳ ಬಗೆಗಣ್ಣಿನೆದರು ನಿಂತಾಗ ತನ್ನ ಗಂಡನು ಜೀಕಿ ಅಲ್ಲಿ ಹೋಗುವಾ. ಹಾದರಗಿತ್ತಿಯರ ಸಂಗತಿ ಏನು ಹೇಳಲಿಕ್ಕೆ ಬರುವುದು? ಎಂಬ ವಿಚಾರವೂ ಒಂದು ಹೊಳೆಯದೆ ಇರಲಿಲ್ಲ ಪದ್ಮಾವತಿಗೆ. ಏನಾದರೂ ಗಂಗವ್ವನ ಮನೆಯ ಸಂಬಂಧ ಒಳ್ಳೆಯದಲ್ಲ ಎಂದೂ ಆ ಕ್ಷಣ

ಬಗೆದಳು. ಬಡತನಕ್ಕಾಗಿ ಬೇಡಾದವರ ಸಂಗತಿ ಮಾಡಬೇಕಾಗಿದೆಯಲ್ಲ ಎಂದು ನಿಟ್ಟುಸಿರೊಂದನ್ನು ಬಿಟ್ಟಳು.

ಗಂಗವ್ವನ ದೊಡ್ಡ ಗೂಡೇ ಸುಟ್ಟಿದೆ, ಎಂಬುದು ತಿಳಿದಾಗ ತಾತಪ್ಪ ತುಂಬ ವಿಚಾರದಲ್ಲಿ ಬಿದ್ದ. ಇಲ್ಲಿಯುವರೆಗೆ ಅವನು ಕಟ್ಟಿದ ಧೋರಣೆ ತಪ್ಪಾಯಿತು. ಬಾಬಣ್ಣನ ಗೂಡು ಸುಟ್ಟಿದ್ದರೆ ಅವನು ಇಷ್ಟು ಚಿಂತೆಗೀಡಾ ಗುತ್ತಿರಲಿಲ್ಲ. ಅದಕ್ಕೆ ಮುಂದೆ ಪ್ರತಿಕಾರ ಮಾಡುವ ಯೋಚನೆಯಲ್ಲಿಯೂ ಆತ ಇದ್ದ. ಆದರೆ ಇದು ಅಕಲ್ಪಿತ ಪ್ರಸಂಗ ಮೈಮೇಲೆ ಬಂದಂತಾ ಯಿತು.

ಇದಕ್ಕೆ ಗಂಗವ್ವನಂತೂ ಕಾರಣವಲ್ಲ ಎಂಬುದನ್ನು ಅವನು ಬಲ್ಲ ಸುಂದರಿಯ ಬಗ್ಗೆ ಏನಾದರೂ ಇದ್ದರೆ ಇರಬೇಕು. ಬಾಬಣ್ಣ ಇಲ್ಲಿ ಬರ ತ್ತಿದ್ದುದಕ್ಕೆ ಹೀಗೆ ಮಾಡಿರಬೇಕು. ಯಾರು ಮಾಡಿರಬೇಕು? ಎಂದ ಸಂಶೋಧನೆಗೆ ತೊಡಗಿದ.

ಮಧ್ಯಾಹ್ನದ ಹನ್ನೆರಡು ಗಂಟೆಯಿಂದ ಗಂಗವ್ವನ ಮನೆಗೆ ಬರುವ ಜನರ ಗೊಂದಲಕ್ಕೆ ಆರಂಭ ವಾಯಿತು. ಗಂಗವ್ವ ಹೇಗಿದ್ದರೂ ಹಲ ವರಿಗೆ ಬೇಕಾದವಳು. ಅದರಿಂದ ಎಲ್ಲರೂ ಸಮಾಧಾನ ಹೇಳಲು ಬರುವವರೇ ಅವರಿಗೆಲ್ಲ ಗಂಗವ್ವ ಹೇಳುವಳು,—

“ ಗೂಡ ಸುಟ್ಟರೆ ನನ್ನದೇನೂ ಡೊಂಕ ಆಗುವದಿಲ್ಲ. ಆದರೆ ದನ ಗಳ ಬಾಯಿಗೆ ಗಡ್ಡಿ ಹಾಕಿದರಾಯಿತು. ”

ಹೀಗೆ ಹೇಳುವಳಾದರೂ ಅವಳ ಕಣ್ಣಲ್ಲಿ ನೀರು ಬಾರದೆ ಇರಲಿಲ್ಲ. ಆದರೂ ಮತ್ತೂ ಮುಂದುವರಿದು ಅನ್ನುವಳು,—

“ ಅದ ಏನೋ ತಪ್ಪಿ ಹಚ್ಚಿದಂತೆ ಕಾಣತದ. ಇನ್ನೊಂದಕ್ಕ ಹಚ್ಚ ಬೇಕಂತ ಹೋಗಿದಾರೆ. ಕತ್ತಲೆಯೊಳಗ ಗುರುತು ಸಿಕ್ಕಿಲ್ಲ, ಇದ್ದಕ್ಕೇ ಹಚ್ಚಿದಾರೆ. ”

“ ಮತ್ತ ಯಾರ ಗೂಡ ಇತ್ತ ಅಲ್ಲಿ? ” ಬಂದವರ ಸಹಜ ಪ್ರಶ್ನೆ ಯಿದು.

“ ಬಾಬೂನ ಗೂಡೊಂದ ಅಲ್ಲೇ ಒಟ್ಟೇದಲ್ಲ! ”

"ಹೌದಽ ಗಂಗಾ, ಯಾರ ಹ[illegible]ರಬೇಕೋ, ಏನ ಎಲ್ಲಿಂದಾದರೂ ಕಿಡಿಗಿಡಿ ಬಂದ ಬಿದ್ದು ಹತ್ತಿರಬೇಕೋ" ಎಂದೂ ಕೇಳುವ ಹೆಂಗಸರು ಹಲವರು.

"ಏನೋ ಪರಮೇಶ್ವನಿಗೇ ಗೊತ್ತು ಎಂದು ಗಂಗವ್ವ ಹೇಳುವಳು.

ಕೆಲದಿನಗಳು ಕಳೆದುವು. ಉಳಿದ [illegible]ಟ್ಟು ಕಣಿಕೆಗಳನ್ನು ಮನೆಗೆ ತಂದರು. ಬಾಬಣ್ಣನ ಕಣಕಿಯನ್ನು ಗಂ[illegible]ನೇ ಕೊಂಡಳು. ವರ್ಷಕೆ ಹತ್ತುವ ದನಗಳ ಮೇವಿನ ವ್ಯವಸ್ಥೆ ಮಾಡಿಕೊಂಡಳು.

ಅಪ್ಪಣ್ಣ ಎಲ್ಲವನ್ನೂ ವಿಚಾರಿಸಿದ. "ಕೆಟ್ಟ ಜನ ನೋಡಲಾಗದುದಕ್ಕೆ ಹೀಗೆ ಮಾಡಿದರು" ಎಂದುಕೊಂಡು ಸುಮ್ಮನಿದ್ದ. ಹಿತ್ತಲಿನಲ್ಲಿ ತಂದು ಬಣವಿ ಒಟ್ಟಿದರೂ ಕೆಲದಿನ ಅಲ್ಲಿ ಹೊರಸಲು ಹಾಕಿಕೊಂಡು ಮಲಗಿ ಕಾಯುತ್ತಿದ್ದ. ಬಣವಿಗೆ ಕೆಸರು ಹಾಕಿದ ಮೇಲೆಯೇ ಅವನು ಮನೆಗೆ ಮಲಗಲಿಕ್ಕೆ ಬಂದುದು.

ಇದಾವುದರ ಕಡೆಗೂ ತಾತಪ್ಪನ ಲಕ್ಷ್ಯವಿರಲಿಲ್ಲ. ಅವನು ಅದಾವುದೋ ಶೋಧದಲ್ಲಿ ತೊಡಗಿದ್ದ. ಈಗೆರಡು ದಿನಗಳಲ್ಲಿ ಅವನಿಗೊಂದು ಅಪೂರ್ವ ಸಂಗತಿಯ ಸುಳುವು ಹತ್ತಿದೆ. ಇವನ್ನೆಲ್ಲ ಹೀಗೆಯೇ ಬೆಳೆಯುಗೊಟ್ಟರೆ ಮುಂದೆ ಇನ್ನೂ ಹೆಚ್ಚಾಗಿ ತೊಂದರೆಯಲ್ಲಿ ತಾವೆಲ್ಲರೂ ಸಿಕ್ಕು ಬೀಳುವರೆಂಬುದು ಅವನಿಗೆ ಗೊತ್ತಾಯಿತು ಅದಕ್ಕಾಗಿಯೇ ತಾತಪ್ಪ ಗಂಗವ್ವನೊಡನೆ ಯೋಚಿಸಿ ಮುಂದಿನ ವ್ಯವಸ್ಥೆಗಾಗಿ ನಾಲ್ಕೆಂಟು ದಿನ ಊರಿಗೆ ಹೋಗಿ ಬರುವೆನೆಂದು ಹೇಳಿ ಹೋದ. ಊರಿಗೆ ಹೋಗುವ ಮುನ್ನಾ ದಿನ ಸಂಜೆಗೆ ಮನೆಗೆ ಊಟಕ್ಕೆ ಬಂದಾಗ ಬಾಬಣ್ಣನಿಗೆ ಹೇಳಿದ,—

"ಗಂಗವ್ವನ ಮನೆಗೆ ನಾಲ್ಕೆಂಟ ದಿನ ಹೋಗಬೇಡ. ನಿನ್ನ ಮನೆ ಏನೋ ನಿನ್ನ ಹೊಲವೇನೋ ಇರು. ಇಲ್ಲಾದರ ನಾಲ್ಕದಿನ ಬಾಳವ್ವನ ಮನೆಯ ಕಡೆಗೆ ಹೋಗಿ ಬರತಿದ್ದರ ಬಾ. ಈಗೇನ ಸುಗ್ಗಿ ಆಗೇದ."

ಮಾತು ಕಟ್ಟಪ್ಪಣೆಯ ಸ್ವರದಲ್ಲಿತ್ತು. ಸೋದರಮಾವನ ಈತರದ ಮಾತನ್ನು ಕೇಳಿ ಬಾಬಣ್ಣನಿಗೆ ವಿಚಿತ್ರವೆನಿಸಿತು. ಅಷ್ಟೇ ಹೆದರಿಕೆಯೂ ಉಂಟಾಯಿತು.

ಪದ್ಮಾವತಿಯು ಮಾತ್ರ ಗಂಡನಮೇಲೆ ಸಿಟ್ಟು ಬೆಂಕಿಯಾದಳು ಯಾವಾಗಾದರೂ ಗಂಡಸರು ಹೀಗೇ ಎಂದುಕೊಂಡಳು.

"ಮಾಮಾ ಹೀಗೇಕೆ ಅನತಿದ್ದ?" ಪದ್ಮಾವತಿ ಪತಿಯನ್ನು ಕೇಳಿದಳು. ಧ್ವನಿ ಕಠೋರವಾಗಿತ್ತು. ಮಾತು ಪರೀಕ್ಷಕರದಾಗಿತ್ತು.

"ಏನು ಗೊತ್ತು!"

"ನನ್ನ ಆಣೆ, ನಿಮಗೆ ಗೊತ್ತಿಲ್ಲೇನು?"

"ಏನೋ ತನ್ನ ಹಾಗೇ ಇನ್ನೊಬ್ಬರೂ ಅಂತ ತಿಳದಿದಾನ ಆಯ್ತು."

"ನೀವು ಹಾಗೇನಾದರೂ ನಾರಿರಬೇಕು. ಇಲ್ಲಾದರ ಹೇಗೆ ತಿಳಿ ತಾನು?"

"ಏನ ನಾರತಾರs ಇಲ್ಲದ್ದೊಂದ ಹೇಳ್ತಾಕೆ ನೀ." ಸಿಡುಕಿನ ಸ್ವರದಲ್ಲಿ ಬಾಬಣ್ಣಾ ನುಡಿದ.

"ಏನಿಲ್ಲ ಆದರ ಸಿಟ್ಟೇಗೇಕೆ ಬರತೀರಿ ನೀವು ಹಾಗಾದರ?"

ಪದ್ಮಾವತಿಯೂ ಕೆರಳಿ ನುಡಿದಳು.

"ಇಲ್ಲದ್ದೊಂದ ಸಂಶಯ ತಗೋಬೇಡ ನನ್ನಮೇಲೆ ನೀ."

"ಇಲ್ಲದ್ದ ಹೇಗೆ?"

"ನೀ ಏನು ನೋಡಿರುವಿ ಏನು?"

"ಎಲ್ಲಾನೂ ನೋಡೋದೇ ಇರತದೇನು? ಹೊಲದೊಳಗ ವಸ್ತಿಗಿಸ್ತಿ ಇರತಿದ್ದಿರಿ!" ಪದ್ಮಾವತಿ ಮೈಗೆ ಹಚ್ಚಲಿಕ್ಕೇ ಹೋದಳು.

"ಹೆಂಗಸರದು ಇದೊಂದ ಸ್ವಭಾವ! ಹೋದಲ್ಲಿ ಬಂದಲ್ಲಿ ಅದೇ ಮಾಡತಿರತಾರೇನು?"

"ಮಾಡದಿದ್ದರೆ ನಿಮ್ಮ ಹೆಸರು ಯಾಕ ಮುಂದ ಬರತದ?"

"ಮತ್ತ ಅದನ್ನs ಕೇಳತಾಳಲ್ಲ ತಿರತಿರಗಿ. ಯಾತರ ಆಣೆ ಕೊಡ ನ್ನುವಿ?"

ಕೆರಳಿ ನುಡಿದ ಬಾಬಣ್ಣಾ. ಧ್ವನಿ ಸಂತಾಪದಿಂದ ಕೂಡಿದ್ದಿತು. ಪದ್ಮಾವತಿಯೂ ಅಷ್ಟಕ್ಕೇ ಸುಮ್ಮನಾದಳು.

ತಾತಪ್ಪ ಊರಿಗೆ ಹೋಗುವುದನ್ನೇ ಗೌಡ ದಾರೀ ಕಾಯುತ್ತಿದ್ದ. ಅವನು ಹೋದ ಮರುದಿನವೇ ಅಪ್ಪಣ್ಣನನ್ನು ಆತ ಕರೆಯಿಸಿದ. ಮೆಲ್ಲನೆ ಹಿತವಚನಗಳನ್ನಾಡುವಂತೆ ಮಾತಿಗೆ ಆರಂಭಿಸಿದ.

" ಇನ್ನೂ ನಿನ್ನ ಮಗಳನ್ನ ಕಳಿಸಿಲ್ಲ ಕಾಣತದ ? "

" ಇಲ್ಲ. "

" ಕಳಿಸಿಕೊಡಬೇಕಿಲ್ಲ ! "

ಅಪ್ಪಣ್ಣ ಸುಮ್ಮನಾದ ಗೌಡನೂ ಸ್ವಲ್ಪ ಹೊತ್ತು ಏನೂ ಮಾತ ನಾಡಲಿಲ್ಲ. ಆ ಮೇಲೆ ಏನೋ ವಿಚಾರಿಸಿ ನುಡಿದ,—

" ಯ್ಯಾಕ ಅಪ್ಪಣ್ಣ ಮಾತನಾಡವಲ್ಲಿ ? "

" ಏನ ಮಾತಾಡೋದರಿ ! "

ಚುಚ್ಚುನಗೆ ಬೀರಿದ ಅಪ್ಪಣ್ಣ ತನ್ನ ಮಗಳ ವಿಷಯಕ್ಕೆ ಗೌಡರೂ ಯಾಕೆ ಕೇಳುತ್ತಿರಬೇಕೆಂಬುದು ಅವನಿಗೆ ಹೊಳೆಯಲಿಲ್ಲ. ಎಲ್ಲಿ ತನ್ನ ಅಳಿಯನು ಗೌಡರ ವಸೀಲಿ ಹಚ್ಚಿರುವನೋ, ಇವರು ಕಳಿಸಿಕೊಡಲು ಸಹಾಯಕರಾಗುವವರಿದ್ದಾರೆಯೋ, ನಿಜವಾದ ಸಂಗತಿ ಏನಿದೆ ಎಂಬುದು ತಿಳಿಯದಾಯಿತವನಿಗೆ.

" ಒೀಗೆಲ್ಲಿ ಹೇಳತಾನ ಕರೆಯೋ ಪೋಲೀಸನ್ನ. "

ದೂರದಲ್ಲಿ ಕುಳಿತ ಹಳಬನಿಗೆ ಗೌಡ ಹೇಳಿದ. ಮೊದಲೇ ಸೂಚನೆ ಕೊಟ್ಟು ಕರೆಯಿಸಿದ ಪ್ರಕಾರ ಪೋಲೀಸ ಕಾನಸ್ಟೇಬಲನೊಬ್ಬನು ಬಂದು ಗೌಡರ ಅಟ್ಟದ ಮೇಲೆ ಕುಳಿತಿದ್ದ. ಆತ ಬೂಟುಗಾಲುಗಳನ್ನು ಮೆಟ್ಟಲಿನ ಮೇಲೆ ಒತ್ತಿ ಒತ್ತಿ ಇಡುತ್ತ ಪಡಸಾಲೆಗೆ ಬಂದ. ಗೌಡರ ಕಡೆಗೆ ನೋಡಿ ಕೇಳಿದ,—

" ಇವನೇ ಏನರಿ ಆ ಕಳ್ಳ ಸೂ....ಮಗಾ ? "

ಅಕಸ್ಮಾತ್ ಮೈಮೇಲೆ ಕೊಸರಿದ ಈ ಪ್ರಸಂಗದಿಂದ ಅಪ್ಪಣ್ಣ ದಿಗ್ಭ್ರಾಂತನಾದ. ಏನು ಹೇಳಬೇಕೆಂಬುದೂ ತಿಳಿಯದಾಯಿತವನಿಗೆ. ಗಾಬರಿ ಸ್ವರದಲ್ಲಿ ಅಂದ,—

" ಏನ ಅದ ನೆಟ್ಟಗ ಹೇಳರಿ ! "

" ನಾವೇ ಹೇಳೋಣ ಏನ ಮತ್ತ ? " ಪೋಲೀಸ ಬೆದರಿಸಿದ

" ನನಗ ಏನೂ ಗೊತ್ತ ಇಲ್ಲರಿ! "

" ನಿನಗ ಹೇಗೆ ಗೊತ್ತಿದ್ದೀತು ಮಗನ. "

ಎಂದವನೇ ಪೋಲೀಸ ಅಪ್ಪಣ್ಣನ ಕಪಾಳಕ್ಕೆ ಎರಡೇಟು ಹಾಕಿದ ನಮೇಲೆ ಬಿರುಸು ಸ್ವರದಲ್ಲಿ ಹೇಳಿದ:—

" ಇದ ನೋಡಿದಿ? ಮೊಳ ಉದ್ದ ಮೂಕಿ ಅರ್ಜಿ ಬಂದದ? "

ಅಪ್ಪಣ್ಣನಿಗೆ ಏನೆಂದು ಕೇಳಲಿಕ್ಕೆ ಬೇಗನೆ ಬಾಯಿಬರಲಿಲ್ಲ. ತುಸು ತಡೆದು ನಡುಗುವ ಸ್ವರದಲ್ಲಿ ಕೇಳಿದ,—

" ಏನಂತ? "

" ಏನಂತ ಹೇಳತೇನ ನಿಲ್ಲು! " ಕಠೋರ ದನಿಯಲ್ಲಿ ಪೋಲೀಸ ನುಡಿದು, ಹಳಬನ ಕಡೆಗೆ ಹೊರಳಿ "ಹೋಗೋ, ಇವನ ಮಗಳನ್ನು ಕರಕೊಂಡ ಬಾ. ಆಮೇಲೆ ಏನದ ಅಂಬೋದ ತೋರಿಸತೇನೆ ಇವನಿಗೆ. " ಆಜ್ಞಾಪಿಸಿದ.

ಹಳಬ ಗಂಗವ್ವನ ಮನೆಗೆ ಕರೆಯಲಿಕ್ಕೆ ಹೋದ. ತನ್ನ ಗಂಡನನ್ನು ಗೌಡ ಕರೆಯಿಸಿರುವನೆಂದ ಮೇಲೆ ಏನಾದರೂ ಬರತಕ್ಕುದೇ ಎಂದು ಗಂಗವ್ವ ಭಾವಿಸಿದ್ದಳು. ತಾತಪ್ಪ ಊರಲ್ಲಿ ಇಲ್ಲ. ಬೇಕೆಂತಲೇ ಅದನ್ನು ಸಾಧಿಸಿಯೇ ಈ ಪ್ರಸಂಗ ತಂದೊಡ್ಡಿದ್ದಾರೆ. ಇದರಲ್ಲಿ ಜಾರುವ ಯುಕ್ತಿ ಏನು? ಎಂದು ವಿಚಾರಿಸುತ್ತಲೇ ಇದ್ದಳು. ಆ ವಿಚಾರದ ಭರದಲ್ಲಿ ಮಗಳ ಮೇಲೆ ಸಿಟ್ಟೂ ಬರದೆ ಇರಲಿಲ್ಲ. ಅದನ್ನು ತಡೆದುಕೊಳ್ಳಲಿಕ್ಕಾಗದೆ ಅಂದಳು,—

" ತಿಂಗಳ ತಿಂಗಳಿಗೆ ಹೊರಗ ಕುಳಿತ ಸೋಗ ಮಾಡಿ ತೋರಸತಿದ್ದಿ ಯಲ್ಲ? ಈಗ ಗೌಡನ ಮುಂದ ಏನ ಹೇಳುವಿ ಹೇಳು. "

ಸುಂದರಿಯೂ ನಿಷ್ಠುರಳಾಗಿದ್ದಳು. ಇನ್ನು ಹೆದರಿದರೆ ಸಾಗದೆಂಬುದು ಅವಳಿಗೂ ಗೊತ್ತು. ಸ್ವಚ್ಛವಾಗಿ ಎಲ್ಲವನ್ನೂ ಹೇಳಿಬಿಡಬೇಕು ನನಗೇನಾ ದದ್ದು ಆಗಲಿ, ಎಂದುಕೊಂಡಳು. ಅಂತಲೇ ತಾಯಿಯೊಡನೆ ವಾದಿಸಿದಳು,—

" ಏನ ಹೇಳೋದ ಹೇಳತೇನಲ್ಲ! "

" ನೀಯೇನ್ಲ ಹೇಳೀ. ಅದರ ನನ್ನ ಕುತ್ತಿಗೆ ಕೊಯ್ಯುವಿಯಲ್ಲ. "

ಇವರ ವಾದಕ್ಕೆ ಆಗ ಅವಕಾಶವಿರಲಿಲ್ಲ. ಹಳಬನ ತಗಾದೆ ಹೆಚ್ಚಾಗಿ ದ್ದಿತು. ಗಂಗವ್ವ ಮೊದಲು ಹಳಬನಿಗೆ ಒಂದು ಕಪ್ಪು ಚಹ ಮಾಡಿಕೊಟ್ಟಳು. ಆಮೇಲೆ ಸುಂದರಿ ಊರಲ್ಲಿ ಇಲ್ಲವೆಂದು ಗೌಡರಿಗೆ ಹೇಳಲು ವಿನಂತಿ ಮಾಡಿ

ಕೊಂಡಳು. ಆದರೆ ಮಾತು ಬಗೆಹರಿಯಲಿಲ್ಲ. ಹತ್ತೆಂಟು ರೂಪಾಯಿಗಳನ್ನು ಕೈಯಿಂದ ಕೊಡಲೂ ಸಿದ್ಧಳಾದಳು. ಲಂಚದಲ್ಲಿ ಗೌಡನ ಕಡೆಯಿಂದ ಪಾಲು ಸಿಗುವ ಭರವಸೆಯೂ ಅವನಿಗೆ ಇತ್ತು. ಆದುದರಿಂದ ಅವನು ಗಂಗವ್ವನ ಯಾವ ಮಾತಿಗೂ ಸೊಪ್ಪು ಹಾಕಲಿಲ್ಲ. ನಿರುಪಾಯಳಾಗಿ ಗಂಗವ್ವ ಒಳಗೆ ಹೋಗಿ ಮಗಳಿಗೆ ಕಳ್ಳದನಿಯಿಂದ ಹೇಳಿದಳು.

" ಪ್ರಸಂಗ ಬಂದರೆ ಈ ರಬಕವಿಯ ಸೀರೆ ಉಟ್ಕೊಂಡು ಬಾ. ಈ ತೆಳ್ಳಗಿನ ಗಜಾನನ ಮಿಲ್ಲಿನ ಪತ್ತಲ ಕಳೆದಿಡು. ನಿನಗ ಮೂರೆಂಟ ದಿನಾ ಆಯ್ತು ಹೇಳಲಿಕ್ಕೆ ಹತ್ತಿ, ಈ ತಿಳವ ಸೀರಿ ಉಡಬೇಡ, ಹೊರಗ ಸಿರಿಸಿರಿ ತಿರಗಬೇಡ ಅಂತ. ಮತ್ತ ನನ್ನ ತಲೆ ಮೇಲೆ ಅಪಕೀರ್ತಿ ತಂದೇಬಿಟ್ಟೆ. ಕಡದಿದೇನ ಅಂದ ಮೇಲೆ ತೀರಿಸಲಿಕ್ಕೆ ಬೇಡಾ ? "

ಎಂದು ಹೇಳಿ ಗಂಗವ್ವ ಹೊರಗೆ ಬಂದಳು. ಸ್ವಲ್ಪ ಅತ್ತ ಇತ್ತ ಹೋದಂತೆ ಮಾಡಿದಳು. ಏನೋ ವಿಚಾರಿಸಿದಳು. ವಟವಟಿಸಿದಳು. ಆಮೇಲೆ ಹಳಬನಿಗೆ ಅಂದಳು,—

" ನಡೆ, ನಾನೇ ಬರತೇನ ಗೌಡನ ತನಕ. ಹೇಳಿಬರತೇನ."

" ನಿನ್ನ ಒಯ್ದು ನಾನೇನ ಮಾಡಲಿ ? "

" ಏನ ಹೇಳೋದು ಹೇಳಿ ಬರತೇನಲ್ಲ. "

" ಹೇಳಿ ಬಾ ಹೋಗು. " ಎಂದ ಹಳಬ.

" ಅಂದರೆ ? "

" ನಾನಿಲ್ಲೇ ಇರತೇನಿ. "

" ಅದೇಕೆ ? "

" ಸುಂದರವ್ವನ ಕರೆದುಕೊಂಡೇ ಬಾ ಅಂದಾನ ಗೌಡ. ಬೇಡಂತ ಹೇಳಿ ಕಳಿಸಿದರೆ ಬಿಟ್ಟ ಹೋಗತೇನಿ. ನನ್ನದೇನು ? ಅಲ್ಲಿಯವರೆಗೆ ಮಾತ್ರ ಇಲ್ಲೇ ಕೂಡತೇನಿ. "

" ಗೌಡ ನಮ್ಮ ಬಾಗಿಲಾ ಕಾಯಲಿಕ್ಕೆ ಗೀಯಲಿಕ್ಕೆ ಹೇಳಿದಾನ ಏನು ? " ಕೆರಳಿ ನುಡಿದಳು ಗಂಗವ್ವ.

" ನಾನೇತಕ್ಕ ನಿಮ್ಮ ಬಾಗಿಲ ಕಾಯಲಿ ? "

" ಮತ್ತೇನಿದು ? "

" ಸುಂದರವ್ವನ ಕಳಸರಿ, ನಾ ನಡೆದೆ "

ಹೀಗೆ ಮಾತುಗಳು ರಭಸದಿಂದ ಸಾಗುವಷ್ಟರಲ್ಲಿ ಬಾಬಣ್ಣ ಅಲ್ಲಿ ಬಂದ. ಅವನನ್ನು ಕಂಡು ಹಳಬನಿಗೆ ಅದೇಕೋ ಸಂತಸವಾಯಿತು ! ನಗು ಮುಖದಿಂದ ಸ್ವಾಗತಿಸಿದ.

೧೨

ಎರಡು ದಿನಗಳಿಂದ ಒಂದೇಸವನೆ ಪದ್ಮಾವತಿಯು ಪತಿಯ ದಾರಿಯನ್ನು ಕಾಯುತ್ತಿದ್ದಳು. ಆದರೆ ಬಾಬಣ್ಣನ ಸುಳುವಿಲ್ಲ. ಈಗ ಬರುವೆನೆಂದು ಹೊರಗೆ ಹೋದವ ಎರಡು ದಿನಗಳಾದರೂ ಮನೆಗೆ ತಿರುಗಬಾರದೆಂದರೆ ಎಂಥ ವಿಚಿತ್ರವಿರಬೇಕು. ಎಲ್ಲಿ ಹೋಗಿರುವನೆಂಬುದನ್ನು ಮನೆಗ ಹೇಳಿಯಾದರೂ ಕಳಿಸಬಾರದೆ? ಏನೂ ಇಲ್ಲ. ಪದ್ಮಾವತಿಯು ದಾರೀ ಕಾಯ್ದು ಕಾಯ್ದು ಬೇಸತ್ತಳು. ಪತಿಯು ಬರಲಿಕ್ಕೆ ವಿಲಂಬವಾದಂತೆ ಅವಳ ಮನಸ್ಸಿನಲ್ಲಿ ಚಿಂತೆಯ ಚಿತೆಯು ವ್ಯಾಪಿಸತೊಡಗಿತು. ಅದನ್ನು ತಡೆದುಕೊಳ್ಳಲಾಗದೆ ಎರಡು ಸಲ ಗಂಗವ್ವನ ಮನೆಗೂ ಹೋಗಿಬಂದಳು. ಗಂಗವ್ವನೂ ಭೆಟ್ಟಿಯಾಗಲಿಲ್ಲ. ಅಪ್ಪಣ್ಣ ಅದೇಕೋ ಮಿದುವು ಆಗಿದ್ದ. ಬಾಬಣ್ಣನ ವಿಷಯ ತಿಳಿದುಕೊಳ್ಳಲಿಕ್ಕೆ ಮಾತನ್ನು ಆರಂಭಿಸಬೇಕೆಂದು

" ಯಾಕs ಕಾಕಾ ಮೆತ್ತಗ ಆಗಿರುವಿ ? " ಪದ್ಮಾವತಿ ಕೇಳಿದಳು.

" ಯಾಕೋ, ಎರಡ ದಿವಸ ಆಯ್ತು, ಮೈಯೊಳಗ ನೆಟ್ಟಗಿಲ್ಲಬೇ. "

"ನಮ್ಮವರೂ, ಎರಡ ದಿನಾ ಆಯ್ತು, ಎಲ್ಲಿ ಹೋಗಿರುವರು ಮನೆಗೇ ಬಂದಿಲ್ಲ? "

" ನಮ್ಮ ಮನೆಯ ಸುದ್ದಿ ನಮಗ ಇಲ್ಲ. ನಿನ್ನ ಗಂಡನದು ನಾವೇನ ಹೇಳೋಣವ್ವ " ಎಂದು ಬೇಸರದಿಂದ ಅಪ್ಪಣ್ಣ ನುಡಿದ.

ಪದ್ಮಾವತಿಗೆ ಅಪ್ಪಣ್ಣನ ಮಾತಿನ ರೀತಿ ಸರಿಹೋಗಲಿಲ್ಲ. ಹೊರಟು ಮನೆಗೆ ಬಂದಳು. ಆದರೂ ಬರುವಾಗ ಮತ್ತೆ ಕೇಳಿದಳು,—

" ಗಂಗವ್ವ ಅಬಚಿ ಎಲ್ಲಿ ಕಾಣುವದಿಲ್ಲ ? "

" ಎಲ್ಲಿ ಹೋಗಿದಾಳ ಏನೋವ್ವ. ನನಗೇನ ಹೇಳಿ ಹೋಗತಾಳ ಆಕೆ ? " ಎಂದು ಇನ್ನೂ ಬಿಗುವಿನಿಂದ ಅಪ್ಪಣ್ಣ ನುಡಿದ.

ಹೀಗೆ ಅಪ್ಪಣ್ಣ ತನ್ನೊಡನೆ ಬೇಸರದಿಂದ ವರ್ತಿಸುವುದಕ್ಕೆ ಪದ್ಮಾವತಿಯ ಹೆಣ್ಣು ಹೃದಯ ಏನೇನನ್ನೋ ಕಲ್ಪಿಸತೊಡಗಿತು. ತಾತಪ್ಪ ಊರಿಗೆ ಹೋಗುವಾಗ ತನ್ನ ಗಂಡನಿಗೆ ಗಂಗವ್ವನ ಮನೆಗೆ ಹೋಗಬೇಡವೆಂದು ಹೇಳಿದ್ದ. ಅದಕ್ಕೆ ತಾನು ಊಹಿಸಿದ ಕಾರಣ ಸಮರ್ಪಕವಾಗಿರಬೇಕೆ? ಹಾಗೇನಾದರೂ ಆಗಿದ್ದರೆ ಅಪ್ಪಣ್ಣ ನನ್ನ ಕೂಡ ಬಿಗುಪಿನಿಂದ ವರ್ತಿಸುವುದು ಸ್ವಾಭಾವಿಕ.

ಅದೇನೇ ಇದ್ದರೂ ಇವರು ಮನೆಗೆ ಬರಲಿಕ್ಕೆ ಏನಾಯಿತು ?
ತಾತಪ್ಪ ಸೂಚಿಸಿದಂತೆ ಬಾಳವ್ವನ ಮನೆಗೆ ಹೋಗಿರಬೇಕೆ ?
ನನಗೆ ಹೇಳದೆ ಹೋಗುವುದು ! ಹೀಗೆ ಬರಿಗೈಯಿಂದ ಹೊರಡುವುದು !
ಇದೆಂದೂ ಶಕ್ಯವಿಲ್ಲ. ಮತ್ತೆಲ್ಲಿಯಾದರೂ ಹೋಗಿರಲಿಕ್ಕೆ ಬೇಕು. ಎಲ್ಲಿ?

ಆದೂ ಒಂದು ದಿವಸವನ್ನು ಪದ್ಮಾವತಿ ಇದೇ ವಿಚಾರದಲ್ಲಿ ಕಳೆದಳು. ಮಕ್ಕಳ ಊಟ ತಿನಿಸುಗಳ ಕಡೆಗೂ ಅವಳ ಲಕ್ಷ್ಯವಿರಲಿಲ್ಲ. ತಾತಪ್ಪನಾದರೂ ಊರಿಂದ ಬರಬಹುದೆಂದು ಸಾಯಂಕಾಲದವರೆಗೆ ದಾರೀ ಕಾಯ್ದಳು. ಯಾರೂ ಬರಲಿಲ್ಲ. ಆಗ ಪದ್ಮಾವತಿ ತುಂಬ ವಿಹ್ವಲಳಾದಳು. ಸಂಜೆಯ ಊಟವನ್ನೂ ಕೂಡ ಮಾಡಲಿಲ್ಲ. ಹಾಸಿಗೆಯಲ್ಲಿ ಅಡ್ಡಾದಳು. ಆದರೆ ಕಣ್ಣಿಗೆ ನಿದ್ರೆ ಬರಲಿಲ್ಲ. ಕಿಚ್ಚಿನಲ್ಲಿ ಬಿದ್ದ ಕೀಡಿಯಂತೆ ಬೆಳ್ಳಬೆಳತನಕ ಹಾಸಿಗೆಯಲ್ಲಿ ಚಡಪಡಿಸಿದಳು. ತಾನು ಮದುವೆಯಾಗಿ ಬಂದಂದಿನಿಂದ ಇಲ್ಲಿಯವರೆಗಿನ ಎಲ್ಲ ದಿನಗಳೂ ನೆನಪಾದವವಳಿಗೆ. ಹೊಲ ಹೋಗಲಿ, ಮನೆ ಹೋಗಲಿ, ಹೊಟ್ಟೆಗೆ ಅನ್ನವಿರಲಿ ಇರದಿರಲಿ, ಪತಿಯ ಮುಖವನ್ನು ನೋಡಿ ಆನಂದದಿಂದ ಕಾಲಕಳೆದಿದ್ದಳವಳು. ಬಾಬಣ್ಣನ ಕಾಲು ಜಾರುವದೆಂಬ ಸಂಶಯ ಬಂದಲ್ಲಿ ತನ್ನ ವೈಯನ್ನೇ ಆಧಾರವಾಗಿತ್ತು ಎತ್ತಿ ಹಿಡಿದಿದ್ದಳು. ತನ್ನ ಸುಖದುಃಖದ ಪರಿವೆಯನ್ನೂ ಮಾಡಿರಲಿಲ್ಲ. ಎಂತಲೇ ಮದುವೆಯಾಗಿ ಇನ್ನೂ ಐದು ವರ್ಷ ಆಗುವುದರಲ್ಲಿಯೇ ಎರಡು ಮಕ್ಕಳನ್ನು ಹೆತ್ತು ಮೂರನೆಯ ಮಗುವನ್ನು ಹೊಟ್ಟೆಯಲ್ಲಿ ಧರಿಸಿದ್ದಳಾಕೆ. ಇಷ್ಟಾಗಿಯೂ ಬಾಬಣ್ಣ ಕೈಬಿಟ್ಟು ಹೋಗಬೇಕೆಂದರೆ !

ಒಂದೋ, ಎರಡೋ, ಇಡೀ ರಾತ್ರಿಯೆಲ್ಲ ಹಲವು ವಿಚಾರಗಳು ಪದ್ಮಾವತಿಯ ತಲೆಯಲ್ಲಿ ಒಂದೇ ಸವನೆ ಬೇತಾಳನಂತೆ ಕುಣಿಯುತ್ತಿದ್ದವು

ಒಂದು ಕ್ಷಣ ಹಾಸಿಗೆಯಲ್ಲಿ ಉರುಳುವಳು. ಮರುಕ್ಷಣದಲ್ಲಿ ಎದ್ದು ಕೂಡು ವಳು. ಕಡ್ಡಿ ಕೆರೆದು ದೀಪ ಹಚ್ಚುವಳು. ಕಂಟ್ರೋಲ ದಿನವಾದುದರಿಂದ ಎಣ್ಣೆ ಇಲ್ಲದುದಕ್ಕೆ ದೀಪ ಮಂಕಾಗುವುದು. ಮನೆ ತುಂಬ ಕಾಡಿಗೆ ಪಸರಿಸು ವುದು. ಸೀಸೆಯ ತಳದಲ್ಲಿ ಎಲ್ಲಿಯೋ ಸ್ವಲ್ಪ ಎಣ್ಣೆಯಿರಬಹುದು. ಎದ್ದು ಚಿಮಣಿಯಲ್ಲ ಹಾಕಲು ಮನಸ್ಸಿಲ್ಲ. ಹಾಗೆಯೇ ಮಂದ ಪ್ರಕಾಶದಲ್ಲಿ ಮಕ್ಕಳ ಮುಖದ ಕಡೆಗೆ ನೋಡುವಳು. ದಿಕ್ಕಿಲ್ಲದ ಮಕ್ಕಳಿವರು! ನನ್ನ ಹೊಟ್ಟೆಯಿಂದ ಹುಟ್ಟಿ ಏನು ಸುಖವನ್ನು ಪಡೆದಿರುವರು! ಒಂದು ಗುಂಜಿ ಬಂಗಾರ ಕಾಣಲಿಲ್ಲ. ನೆಟ್ಟಗೆ ಒಂದಿನ ಉಣಲಿಲ್ಲ, ಉಡಲಿಲ್ಲ, ತೊಡಲಿಲ್ಲ. ಎಂದು ತೆರೆದುಕೊಂಡು ಮಲಗಿದ ಮಕ್ಕಳ ಮೇಲೆ ಹೊದಿಸಲು ಹೋಗುವಳು

" ಅಪ್ಪಾ ! ಅಪ್ಪಾ ಬಂದಾ ? "

ಹಿರಿಯ ಹುಡುಗ ನಿದ್ದೆಯಲ್ಲಿ ಬಡಬಡಿಸುವದು. ಪದ್ಮಾವತಿಯ ಎದೆಗೆ ಬರೆ ಕೊಟ್ಟಂತಾಗುವದು ನನಗಾಗಿ ಬರದಿದ್ದರೂ ಈ ಮಕ್ಕಳ ಮುಖದ ಕಡೆಗಾದರೂ ನೋಡಿ ಮನೆಗೆ ಬರಬಾರದೆ? ಎಂದುಕೊಳ್ಳುವಳು ಪದ್ಮಾವತಿ.

" ಅಪ್ಪಾ! ನನಗ ಅವ್ವ ಬಡಿತಾಳ ನೋಡು! "

ತನ್ನ ಮೇಲೆ ಮಗು ದೂರು ಹೇಳುವುದು. ಈ ಸಂಗತಿ ಎಚ್ಚರಿರು ವಾಗ ಸತ್ಯ ಸೃಷ್ಟಿಯಲ್ಲಿ ನಡೆದಿದ್ದರೆ ನಗುತ್ತ ಮಗನಮೇಲೆ ಹುಸಿಮುನಿಸು ತೋರುತ್ತಿದ್ದಳು ಪದ್ಮಾವತಿ. ಆದರೆ ಈಗ ಆ ಸ್ಥಿತಿ ಉಳಿದಿಲ್ಲ. ಹುಡುಗ ಸಂಜೆಯ ವರೆಗೆ ಆಡಿದ ಮಾತುಗಳನ್ನೆಲ್ಲ ಕನವರಿಸುವುದು. ಅಂದು ಮಧ್ಯಾಹ್ನ ತಿನ್ನಲು ಬೇಡಿ ಹಟಮಾಡಿದಾಗ ಕೆರಳಿ ಹೊಡೆದಿದ್ದಳವಳು. ಆಗ ಅಳುತ್ತ ಮಗನು ತಾಯಿಗೆ ಹೇಳಿದ್ದ.

" ಅಪ್ಪಾ ಬರಲಿ, ನಾನೂ ಹೇಳಿ ನಿನಗ ಬಡಿಸುವೆ. "

ಆಮಾತು ನೆನಪಾಗಿ ಪದ್ಮಾವತಿಯ ಗಂಟಲ ಸಿರಗಳು ಬಿಗಿದು ಬಂದುವು.

" ಬಾಳಾ! ನಿನ್ನ ಮೈಗೆ ಇನ್ನೊಮ್ಮೆ ನಾ ಐದ ಬೆರಳು ಹಚ್ಚುವದಿಲ್ಲ! "

ಎಂದು ಗದ್ಗದ ಸ್ವರದಲ್ಲಿ ನುಡಿದು ಕೂಸನ್ನು ಮಗ್ಗುಲಲ್ಲಿ ಒತ್ತಿ ಹಿಡಿದಳು. ಕೂಸು ಚೀರಿ ಅಳಹತ್ತಿತು. ದೀಪ ಆರಿತು. ಮನೆಯೆಲ್ಲ ಕತ್ತಲೆ

ವ್ಯಾಪಿಸಿತು. ಕೂಸನ್ನು ಸುಮ್ಮನಾಗಿಸುವ ಬದಲು ತಾನೂ ಅದರ ಜೊತೆ ಯಲ್ಲಿ ಅತ್ತಳು. ನೆರೆಯುವರು ಎಚ್ಚರಾಗಿ ಬಂದು ಹೀಗೇಕೆಂದು ಕೇಳಿದರೆ ಏನು ಹೇಳುವುದು, ಎಂದುಕೊಂಡು ತಾನೇ ಸಮಾಧಾನ ಹೊಂದಿದಳು

ಮುಂಜಾನೆ ಎದ್ದು ಪದ್ಮಾವತಿ ತಂಬಿಗೆ ತಕ್ಕೊಂಡು ಸಪ್ಪಗಿನ ಮುಖ ದಿಂದ ಊರ ಹೊರಗೆ ನಡೆದಿದ್ದಳು. ಕಣ್ಣುಗಳು ಕೆಂಪಾಗಿದ್ದುವು. ಮೈಯಲ್ಲಿ ಉತ್ಸಾಹವಿರಲಿಲ್ಲ. ಇನ್ನೂ ಮುಬ್ಬುಗತ್ತಲಿತ್ತು. ಯಾರೋ ಇಬ್ಬರು ಹೆಂಗಸರು ದೂರದಲ್ಲಿ ಮಾತಾಡುತ್ತ ಹೋಗುವುದು ಕೇಳಿಸಿತು.

"ಮನೆಯಲ್ಲಿ ಬಂಗಾರದಂಥ ಹೆಂಡತಿ ಇರಲಿಕ್ಕಾಗಿ ಇವನಿಗೇಕೆ ಬೇಕವ್ವ ಇಂಥಾ ಕಾಂಭಾರ?"

"ಅವನೇನ ಮಾಡತಾನಃ ಹುಚ್ಚಿ? ದೈವ ಮಾಡಲಿಕ್ಕೆ ಹಚ್ಚದತ."

"ದೈವೇನ ಮಾಡತದ? ಹೊಟ್ಟಿಗೆ ಅನ್ನಾ ತಿನ್ನೂದಿಲ್ಲ? ಸಿಗಣ ಬುಟ್ಟಿ ತುಂಬಿ ಮುಂದ ಇಟ್ಟರ ತಿನ್ನತಾನು? ಮದುವೆ ಆಗಿ ನಾಲ್ಕೈದು ವರ್ಷ ದೊಳಗ ಮೂರು ಕೂರಿಗೆ ಅಡವಿ ಕಳಕೊಂಡ ಹಾಳ ಆಗಿ ಹೋದ."

"ಅತ್ತಃ ಕಣ್ಣ ಮರಿ ಮಣ್ಣ ಮರಿ ಆಗಿ ಹೋದರೆ ನೆಟ್ಟಗೆ ಇನ್ನೂ! ಹುಡುಗರಿಗೆ ಒಂದ ಕೂರಿಗೆ ಆದರೂ ಅಡವಿ ಉಳಿತದ."

ಅದೂ ಒಂದು ಕೂರಿಗೆ ಅಡಿವೆ ಹೋದರೂ ಅಡ್ಡಿಯಿಲ್ಲ, ನನ್ನ ಗಂಡ ಮನೆಗೆ ಬರಲಿ ಎಂದು ಪದ್ಮಾವತಿ ಓಡಿಹೋಗಿ ಹೇಳಬೇಕೆಂದಳು. ದನಿಯ ಗುರುತೂ ಈಗಾಗಲೇ ಹತ್ತಿದಂತಾಗಿದ್ದಿತು. ಅವರಲ್ಲಿ ಒಬ್ಬಳು ಕಲ್ಲಪ್ಪನ ಹೆಂಡತಿ ಇದ್ದಳು. ಅವಳ ಕೂಡ ಪದ್ಮಾವತಿಯು ಬಹಳ ದಿನಗಳಿಂದಲೂ ಮಾತನಾಡುತ್ತಿರಲಿಲ್ಲ. ಮದುವೆಯೊಳಗಿನ ಹಣದ ಬಗ್ಗೆ ಸ್ವಲ್ಪ ಜಗಳ ವಾಗಿದ್ದಿತು, ಹೆಂಗಸರು ಹೆಂಗಸರಲ್ಲಿ. ಆದರೂ ಈಗ ಪತಿಯ ಸುದ್ದಿಯನ್ನು ಎಂಥ ವೈರಿಯು ಹೇಳಲು ಬಂದಿದ್ದರೂ ಕೈಕಾಲು ಹಿಡಿದು ಕೇಳಲು ಸಿದ್ಧ ಳಿದ್ದಳು ಪದ್ಮಾವತಿ. ಅದಕ್ಕಾಗಿಯೇ ಅವಳು ಶೌಚಕ್ಕೆ ಹೋಗುವದನ್ನು ಬಿಟ್ಟು ಅವರ ಬೆನ್ನುಹತ್ತಿ ಚಟಚಟ ನಡೆದಳು. ಇವಳು ಹಿಂದೆ ಬರುತ್ತಿರು ವುದನ್ನು ಕಂಡು ಅವರೂ ಮಾತಿನ ವಿಷಯ ಬದಲಿಸಿ ಸ್ವಲ್ಪ ಬೇಗನೆ ನಡೆದು ಮನೆ ಸೇರಿದರು.

ಪದ್ಮಾವತಿ ನಿರಾಶೆಗೊಂಡು ಹಿಂದಿರುಗಿದಳು. ದಾರಿಯಲ್ಲಿಯೇ ತಂಬಿಗೆಯೊಳಗಿನ ನೀರು ನೆಲಕ್ಕೆ ಸುರಿದು ಮನೆಗೆ ಹೊರಳಿದಳು. ಅವಳಿಗೆ ಜಗತ್ತೇ ಶೂನ್ಯವಾದಂತಿತ್ತು. ಮನೆಗೆ ಬಂದು ಮಕ್ಕಳು ಏಳುವವರೆಗೆ ಸುಮ್ಮನೆ ಕುಳಿತಳು. ಕಲ್ಲಪ್ಪ ಕಕ್ಕನ ಮನೆಗೆ ಕೂಡಲೇ ಹೋಗಿ ಕೇಳಿಬರಲೇ? ಎಂದು ಒಂದು ಕ್ಷಣ ಎನಿಸುವುದು. ಮನೆಗೆ ಹೋದರೆ ಮಾತಾಡುವರೋ ಇಲ್ಲವೋ ಏನೋ. ಇಂಥ ಸ್ಥಿತಿಯಲ್ಲಿ ಅಪಮಾನಿತವಾಗುವುದು ಸಹಿಸಲಿಕ್ಕಾಗಲಿಕ್ಕಿಲ್ಲ ಎಂದು ಯೋಚಿಸುವಳು. ಕೊನೆಗೆ ಬಹಳ ವಿಚಾರಿಸಿ ಚಂದ್ರವ್ವನನ್ನು ಕಂಡು ಅವಳನ್ನೇ ಕೇಳಲಿಕ್ಕೆ ಕಳಿಸಬೇಕೆಂದು ನಿರ್ಣಯಿಸಿದಳು. ಕೂಡಲೆ ಚಂದ್ರವ್ವ ಅಬಚಿಯ ಮನೆಗೆ ಹೊರಡಲುದ್ಯುಕ್ತಳಾದಳು. ಅದಕ್ಕಾಗಿ ಮಕ್ಕಳನ್ನು ಕಾಡಿ ಎಚ್ಚರಿಸತೊಡಗಿದಳು. ಮುಂಜಾನೆಯ ಸಕ್ಕರೆ ನಿದ್ರೆಯ ಸಮಯ ಮಕ್ಕಳಿಗೆ. ಏಳಲೊಲ್ಲರವರು.

ಮಕ್ಕಳ ಮುಖಕ್ಕೆ ನೀರು ಸವರಿ ಎಚ್ಚರಿಸಿದಳು ಪದ್ಮಾವತಿ. ಹಿರಿಯ ಮಗನನ್ನು ಕೈಹಿಡಿದು ನಡೆಯಿಸುತ್ತಲೂ ಚಿಕ್ಕ ಮಗುವನ್ನು ಬಗಲಲ್ಲಿ ಎತ್ತಿಕೊಂಡೂ ಚಂದ್ರವ್ವನ ಮನೆಯ ಕಡೆಗೆ ಸಾಗಿದಳು. ದಾರಿಯಲ್ಲಿ ಮಗನು ಹರುಷದಿಂದ ಕೇಳುವನು,—

" ಅವರು ಯಾರು ಅವ್ವಾ ? "

ಕುದುರೆಯ ಬಂಡಿಯಲ್ಲಿ ಕುಳಿತು ಎಂಟು ಗಂಟೆಯ ವೇಳೆಗೆ ಹೊರಟ ನವದಂಪತಿಗಳನ್ನು ತೋರಿಸಿತು ಮಗು. ಅವರ ಉಡಿಗೆ ತೊಡಿಗೆ, ಥಾಟು ಮಾಟುಗಳನ್ನು ಕಂಡು ಹುಡುಗನಲ್ಲಿ ಕುತೂಹಲ ಕೆರಳಿರಬೇಕು

" ಇರಲಿ ಲಗೂನ ಹೆಜ್ಜೆ ಎತ್ತಪ್ಪ ! "

ಪದ್ಮಾವತಿ ನಿಟ್ಟುಸಿರಿನೊಡನೆ ನುಡಿಯುವಳು.

" ನಾವೂ ಅಪ್ಪಾ ಕೂಡಿ ಹಾಗೇ ಟಾಂಗೆಯೊಳಗ ಕೂತ ಹೋಗೋಣ ಅವ್ವಾ ? "

ಮಗು ಉಲ್ಲಸಿತ ಸ್ವರದಲ್ಲಿ ಕೇಳುವುದು. ಪಾಪ ! ತಾಯಿಯ ಮನದ ದುಗುಡ ಆ ಚಿಕ್ಕ ಕಂದನಿಗೆ ಹೇಗೆ ಗೊತ್ತಾಗಬೇಕು ?

ಇದೀಗ ಚಂದ್ರವ್ವ ಮನೆ ಕೆಲಸದಲ್ಲಿ ತೊಡಗಿದ್ದಳು. ಸೊಸೆ ಕಡೆಗಾದುದರಿಂದ ಪಾತ್ರೆ ತಿಕ್ಕುವದನ್ನು ಮೊದಲು ಮಾಡಿಕೊಂಡು ಎಲ್ಲ ಕೆಲ

ಸವೂ ಅವಳ ಮೇಲೆಯೇ ಬಿದ್ದಿದ್ದಿತು. ಮಾಸ್ತರ ಸಾಲೆಯಿಂದ ಬರುವಷ್ಟ ರಲ್ಲ ಅಡಿಗೆ ಸಿದ್ಧವಾಗಬೇಕು. ಇತ್ತ ಗಂಡನಿಗೆ ಹೊಲಕ್ಕೆ ರೊಟ್ಟಿಯನ್ನು ಕಟ್ಟಿಕೊಡಬೇಕು. ಅವಸರದಲ್ಲಿಯೇ ಪದ್ಮಾವತಿಯನ್ನು ಸ್ವಾಗತಿಸಿದಳು.

" ಬಾ ಪದ್ಮಾವತಿ, ಹರಿಯಹೊತ್ತು ಕೆಲಸದ ವೇಳೆಯೊಳಗ ಬಂದಿ ರುವಿ ? "

ಪದ್ಮಾವತಿ ಅವಳ ಮಾತಿಗೆ ಪ್ರತಿಯಾಗಿ ಏನೂ ಹೇಳಲಿಲ್ಲ. ಅಳ ಹತ್ತಿದಳು. ಅವಳ ಹೃದಯ ತುಂಬಿ ಬಂದಿದ್ದಿತು. ಅದು ತೆರವಾಗುವವರೆಗೆ ಕಣ್ಣೀರು ಧಾರೆ ನಿಲ್ಲುವಂತಿರಲಿಲ್ಲ. ತಾಯಿಯನ್ನು ಕಂಡು ಕೂಸುಗಳೂ ಅಳಹತ್ತಿದುವು.

" ಯಾಕ ಪದ್ಮಾವತಿ ? ಏನ ಆಯಿತು ? "

ಬೆರಗಿನಿಂದ ಶೋಕಪೂರಿತ ಸ್ವರದಲ್ಲ ಚಂದ್ರಾ ಮತ್ತೆ ಕೇಳಿದಳು. ದುಃಖದ ಜೋರು ಇಳಿದಂತೆ ಪದ್ಮಾವತಿಯ ಬಾಯಿಂದ ಒಂದೊಂದೇ ಮಾತುಗಳು ಹೊರಡಹತ್ತಿದುವು. ಇಲ್ಲಿಯವರೆಗೆ ನಡೆದ ಸಂಗತಿಯನ್ನೂ ಕೇಳಿದ ಮಾತುಗಳನ್ನೂ ವಿವರಿಸಲು ಯತ್ನಿಸತೊಡಗಿದಳು.

" ಅವ್ವಾ ಅಳತಿಯಾಕ ? " ಹಿರಿಯ ಮಗು ನಡುವೆ ಕೇಳುವುದು.

ಚಿಕ್ಕಮಗು ಕಣ್ಣೀರು ಒರೆಯಿಸಲು ಬರುವದು. ಚಂದ್ರವ್ವ ಕೆಲಸ ಬಿಟ್ಟು ಲಕ್ಷ್ಯಗೊಟ್ಟು ಪದ್ಮಾವತಿಯ ಮಾತನ್ನು ಕೇಳುತ್ತಿದ್ದಳು.

" ಇವೇನ ಮಕ್ಕಳ ಮಾತಾಡಲಿಕ್ಕೆ ಕೊಡತಾವ ಏನು ? " ಸ್ವಲ್ಪ ಬೇಸರದಿಂದ ಕೂಸುಗಳನ್ನು ಹಿಂದಕ್ಕೆ ಸರಿಸಿ " ದೇವರ ಬಡವರ ಬೆನ್ನೇ ಈ ಮಕ್ಕಳನ್ನ ಯಾಕ ಹಚ್ಚತಾನೋ ಏನೋ. "

" ಇರಲಿ ಅಲ್ಲ. ಅವೇ ನಿನ್ನ ಐಶ್ವರ್ಯ. ನಮ್ಮಾಕೆ ನೋಡ ಮೂರೆಂಟ ದಿನಕ್ಕ ಹೊರಗ ಕೂಡತಾಳ. ಏನ ಮಾಡೋದ ? ಸುಡೋದ ಏನ ತಗೊಂಡ ಇವಳನ್ನ ! "

" ಆದಾವ ತಗೋನು. ಬೇಡ್ತಿ ಹರಕೆ ಹೊತ್ತವರಿಗೆ ದೇವರ ಕೊಡೋದ ಮರತ ಕೂತಿದಾನ. ನಮ್ಮಂಥವರಿಗೇ ಒಂದರ ಮೇಲೊಂದ. "

" ಮತ್ತ ಈಗ ನಿಂತಂತೆ ಕಾಣತದ ? " ಚಂದ್ರವ್ವ ಕೇಳಿದಳು.

" ಒಂದೂವರಿ ಎರಡ ತಿಂಗಳ ಆಗತ ಬಂತು! ನಮ್ಮಂಥವರಿಗೆ ಸುಳ್ಳ ಆಗಬೇಕು. ಆದರ ಆಗತದ ಏನು ? "

" ಅದೇಕೆ ತಾಯೀ! ಆಗಲಿ ಅಲ್ಲ. ಪಟ ಪಟಾ ನಾಲ್ಕ ಮಕ್ಕಳ. ದುಡದ ಹಾಕಿಯಾರ ನಾಳೆ. ಬಾಬು ಎಲ್ಲೀಕ ತಿರಗತ ಹೋಗವಲ್ಲ. "

" ಅವರ ದುಡಿದ ಹಾಕುವವರೆಗೆ ಶಿವಾ ಇದಾನ. " ಸ್ವಲ್ಪ ತಡೆದು " ನಿಜವಾಗಿ ಹೇಳತೇನ. ನನಗಂತೂ ಸಾಕಾಗಿ ಹೋಗೇದ ನೋಡವ್ವ. "

" ಬಾಬು ಎಲ್ಲಿ ಹೋಗಿರಬೇಕು?" ಚಂದ್ರವ್ವ ವಿಷಯಕ್ಕೆ ಬಂದಳು. ಬೇಗನೆ ಮಾತು ಮುಗಿಸಿ ಕೆಲಸಕ್ಕೆ ತೊಡಗಬೇಕಾಗಿದ್ದಿತವಳಿಗೆ.

" ಅವ್ವಾ, ಆಯಿ ಏನ ಅನ್ನತಾಳು ? "

ಮಗು ಮತ್ತೆ ನಡುವೆ ಕೇಳಿತು. ಆಗ ಚಂದ್ರವ್ವ ತನ್ನ ಸೊಸೆಯನ್ನು ಕರೆದು,—

" ಈ ಹುಡುಗನಿಗೆ ಹೊರಗಿನ ಚೀಲದೊಳಗಿನ ಬಹಿಮುಕಾಯಿ ನಾಲ್ಕ ತಿನ್ನಲಿಕ್ಕೆ ಕೊಟ್ಟ ಕರಕೋ. " ಎಂದು ಆಜ್ಞಾಪಿಸಿದಳು. ಹಾಗೆಯೇ ಹುಡುಗನ ಕಡೆಗೆ ಹೊರಳಿ " ಹೋಗೋ ಕಾಕಿ ತಿನಲಿಕ್ಕ ಕೊಡತಾಳ ನಿನಗ " ಎಂದು ಕಳಿಸಹೋದಳು.

" ಕಾಯಿ ಬೇಡ ನನಗ. ಅಚ್ಚೀಬೇಕು." ಮಗುವಿನ ಬೇಡಿಕೆಯಿದು.

" ಹುಡುಗ ಹಸ್ತದ ಏನೋಬೇ! ಅದಕ್ಕs ಹೀಗೆ ಮಾಡಲಿಕ್ಕೆ ಹತ್ತಿದಾನು. " ತುಸು ತಡೆದು " ಇನ್ನೂ ಅಚ್ಚಿ ಮಾಡಿಲ್ಲ ಬಾಳಾ, ಹಸಿವು ಆಗಿದಾವ ಹೌದ ? " ಎಂದು ಹೇಳಿ ಚಂದ್ರವ್ವ ಎದ್ದು ಮೇಲಿನ ಡಬ್ಬಿ ಯೊಂದನ್ನು ಇಳಿಸಿ, ಉಂಡಿಯನ್ನು ಮಗುವಿನ ಕೈಯಲ್ಲಿ ಕೊಟ್ಟಳು ಅದ ಕ್ಕಾಗಿ ಎರಡೂ ಹುಡುಗರು ಕಚ್ಚಾಡತೊಡಗಿದರು. ಪದ್ಮಾವತಿ ಇಬ್ಬರಿಗೂ ಹಂಚಿಕೊಟ್ಟು ಪಡಸಾಲೆಗೆ ಆಡಲು ಕಳಿಸಿದಳು. ಆಮೇಲೆ ಎಲ್ಲ ಸಂಗತಿ ಯನ್ನು ಅರುಹಿದಳು.

" ನಾನೂ ನಿನ್ನೆ ಯಾರೋ ಅನ್ನುವದನ್ನ ಕೇಳಿದ್ದೆ. ಹುಚ್ಚರ ಮಾತು. ಮನೆಯೊಳಗ ಹೆಂಡತಿ ಇರಲಿಕ್ಕಾಗಿ ಹೀಗೇಕೆ ಮಾಡಲಿಕ್ಕೆ ಹೋದಾನು ? ಸುಂದರಿಯಾದರೂ ಎನ ಸುದ್ದ ಪೋರಿ! ಆಗಲೇ ಕಾಳ ತೊಳಿಯಲಿಕ್ಕೆ ಹೋದ

ದಿವಸೇ ನನಗ ಸಂಶಯ ಬಂದಿತ್ತು. ಉಸ್ಸ ಉಸ್ಸ ಮಾಡತಿದ್ದಳು ನೋಡ ಲಿಲ್ಲೇನ? ಇದ್ದ ಆದೀತು ಯಾರ ಕೂಡಾರೆ. ತಾವು ಮಾಡೋದ ಮಾಡಿ ಯಾರ ತಲೆಗಾದರೂ ಹರಲಿ ತರುವವರು. ಆ ತಾಯಿ ಮಗಳ ಅಂಥವರೇ ಇದ್ದಾರ. ಇದೇನೋ? ಅಂತ ಮಧ್ಯಾಹ್ನದೊಳಗ ನಾನೇ ಬಾಬಣ್ಣನ ಕೇಳ ಲಿಕ್ಕೆ ಬರಬೇಕು ಅನತಿದ್ದೆ. ಅವನೇ ಊರೊಳಗ ಬೇರೆ ಇಲ್ಲ ಅನ್ನುವಿಯಲ್ಲ. ಹರಿವತ್ತ ಹೀಗೊಂದ ಸುದ್ದಿ ಕೇಳಿದೆ ಅನ್ನುವಿ. ಏನ ಅದ ನೋಡೋಣ ಮಧ್ಯಾಹ್ನ ಅತ್ತ ಕಡೆಗೆ ಬರತೇನ. ಮನೆಯೊಳಗ ಈಕೆಯೊಬ್ಬಾಕೆ ಹೊರಗ ಕೂತಿದಾಳ, ಎಲ್ಲಿ ಹೋಗಲಿಕ್ಕೂ ಬರಲಿಕ್ಕೂ ಮೂರುದಿನ ಆಯ್ತು ಬಿಡುವೇ ಇಲ್ಲ. ಇಬ್ಬರು ಗಂಡಸರು ಉಣ್ಣುವವರು, ನಾವು."

"ಇರೋದೆ ಅಲ್ಲ."

ದುಃಖದಿಂದ ನುಡಿದು ಪದ್ಮಾವತಿ ಎದ್ದಳು.

"ಎಲ್ಲಿ ಹೋಗತಾನ ಏಳು. ಎದೆ ಬಿಡಬೇಡ ನೀ. ಅವನೂ ಏನು ಸಣ್ಣವನೋ, ಹೆಂಗಸೋ?"

"ಇಲ್ಲ ಆದರೂ."

ಎಂದು ಅನ್ನುತ್ತ ಪದ್ಮಾವತಿ ಹೊರಗೆ ನಡೆದಳು. ಚಂದ್ರವ್ವನೂ ಬಾಗಿಲವರೆಗೆ ಕಳಿಸಿ, ಧೈರ್ಯ ಹೇಳಿ ಒಳಗೆ ಹೋದಳು.

ಮರುದಿನ ಸಾಯಂಕಾಲಕ್ಕೆಂದರೆ ತಾತಪ್ಪ ಊರಿಂದ ಬಂದ. ಈಗಲೇ ಅವನು ಊರಲ್ಲಿಲ್ಲದೆ ಏಳೆಂಟು ದಿನಗಳಾಗಿದ್ದುವು. ಮನೆಯ ಕಡೆಯ ಸುದ್ದಿ ಏನೂ ಗೊತ್ತಿರಲಿಲ್ಲ. ಮೊದಲಿನಂತೆ ನೆಟ್ಟಗೆ ಮನೆಗೆ ಊಟಕ್ಕೆ ಬಂದ. ಪದ್ಮಾವತಿ ಅಡಿಗೆಯನ್ನೇನೂ ಮಾಡಿರಲಿಲ್ಲ. ಮನೆಯೆಲ್ಲ ಅಸ್ತವ್ಯಸ್ತ. ಸಪ್ಪ ಗಿನ ಮುಖದಿಂದ ಪದ್ಮಾವತಿ ಕೂಸಿಗೆ ಮೊಲೆ ಕುಡಿಸುತ್ತ ಕುಳಿತಿದ್ದಳು. ಬಾಚದ ತಲೆ, ಕುಂಕುಮವಿಲ್ಲದ ಹಣೆ, ಭಣಭಣವೆನಿಸುತ್ತಿದ್ದಿತು. ತಾತಪ್ಪ ಇದನ್ನೆಲ್ಲ ನಿರೀಕ್ಷಿಸಿ ಕೇಳಿದ,—

"ಬಾಬು ಇಲ್ಲೇನು ಊರೊಳಗೆ?"

"ಇಲ್ಲ. ನೀವು ಹೋದ ಎರಡನೆಯ ದಿನಕ್ಕೇನೇ ಹೋಗಿದಾರಲ್ಲ!"

"ಎಲ್ಲಿ, ಬಾಳವ್ವನ ಮನೆಗೆ ಹೋಗಿದಾನ ಕಾಣ್ತದ?"

" ಏನೋ ! ಹೋಗುವಾಗ ಉಟ್ಟುಕೊಳ್ಳುವ ದೋತರವನ್ನೂ ಒಯ್ದಿಲ್ಲ. ಈಗ ಬರತೇನಂತ ಹೊರಗೆ ಹೋದವರು ತಿರುಗಿ ಮನೆಗೆ ಬಂದೇ ಇಲ್ಲ."

ತಾತಪ್ಪ ಬಂದುದಕ್ಕೆ ಪದ್ಮಾವತಿಗೆ ಸ್ವಲ್ಪ ಧೈರ್ಯ ಬಂದಂತಾಯಿತು. ಇನ್ನು ಏನಿದ್ದರೂ ಎಲ್ಲ ಹೊರಬೀಳುವದು. ಎಲ್ಲಿ ಹೋಗಿದ್ದರೂ ತನ್ನ ಗಂಡ ನನ್ನು ತರಿಸುವ ಎಂದು ಭಾವಿಸಿದ್ದಳು. ಇತ್ತೀಚಿಗೆ ಅವಳು ಸುಂದರಿಯನ್ನು ಕಂಡಿರಲಿಲ್ಲ. ಹಾಗೇ ಏನಾದರೂ ಆಗಿದ್ದರೆ ತಾತಪ್ಪನಿಗಂತೂ ಅದು ಸೇರು ವುದೇ ಇಲ್ಲ. ಹೋಗುವಾಗಲೇ ಅವರ ಮನೆಗೆ ಕಾಲಿಡಬೇಡವೆಂದು ' ಛಿ!' ಎಂದು ಹೋಗಿದ್ದ. ಇನ್ನೇನು ಹುಡುಕಿ ತುಂದು ಇಬ್ಬರ ಕಿವಿ ಹಿಂಡದೆ ಬಿಡುವದಿಲ್ಲ. ಆಗಲಿ, ನಾಲ್ಕುದಿನ ತಡವಾದರೂ ಆಗಲಿ. ಅವರಿಗೆ ಒಮ್ಮೆ ಬುದ್ಧಿ ಬರಲಿ, ಎಂದುಕೊಂಡು ಪದ್ಮಾವತಿ ಮೆಲ್ಲನೆ ಕೂತ ಸ್ಥಳ ಬಿಟ್ಟು ಎದ್ದಳು.

" ಹುಡುಗ ಯಾವಾಗಾದರೂ ಹೀಗೇ. ಒಂದು ನೆಟ್ಟಗ ಹೇಳುವಂತಿಲ್ಲ, ಮಾಡುವಂತಿಲ್ಲ. ಮುಂದೆ ಮೋರೆ ಮಾಡಿ ಹೋದನೆಂದರೆ ತಿರುಗಿ ಮನೆಯ ಕಡೆಗೆ ನೋಡುವಂತಿಲ್ಲ. ಇವನ ಜನ್ಮ ಹೇಗೆ ಆಗುವುದೋ ಏನೋ ? "

ಎಂದು ತಾತಪ್ಪ ಸೋದರಳಿಯನಿಗೆ ಸಿಟ್ಟುಮಾಡಿದ.

" ನೀವೇ ನೋಡಿರಿ ಏನ ಮಾಡ್ತೀರಿ. ಸ್ವಲ್ಪ ತಾಕೀತೂ ಮಾಡಿರಿ ! "

ಎಂದು ಮಾವನ ಹತ್ತಿರ ಪದ್ಮಾವತಿ ವಿನಂತಿ ಮಾಡಿಕೊಂಡಳು. ಸುಂದರಿಯ ಸಂಬಂಧದ ವಿಷಯವನ್ನೂ ಹೇಳಬೇಕೆಂದಳಾದರೂ ತಾತಪ್ಪ ಸಿಟ್ಟಾಗಬಹುದೆಂದು ಭಾವಿಸಿ ಸುಮ್ಮನಾದಳು. ಹಾಗೆಯೇ ಒಲೆಯಲ್ಲಿ ಉರಿ ಮಾಡುತ್ತ ಅಂದಳು. ಮಾತು ಅಸಹಾಯ ಸ್ವರದಲ್ಲಿತ್ತು.

"ನೀವೇ ನನಗ ಹಡೆದ ತಂದೆ ತಾಯಿ ಇದ್ದಂತೆ ಮಾಮಾ. ನಿಮ್ಮಿಂದ ನನ್ನ ಜನ್ಮ ದಂಡಿಗೆ ಹತ್ತಿದರೆ ಹತ್ತಬೇಕು. ಅವರೇನ ಹೀಗೇ. "

" ಬರಲಿ ನಿಲ್ಲ ನೀ. ಒಮ್ಮೆ ನೆಟ್ಟಗ ತಾಕೀತು ಕೊಡತೇನೆ. ನಾನು ತಿರುಗಿ ನಾಲ್ಕು ಊರ ಮಾಡಿಬಂದೆ. ಇವನಿಗೆ ಬರಲಿಕ್ಕೇನಾಗೇದ ? ನಾಳೆ ಬೆಳಗಾದರೆ ಮೃಗ ಮಳೆ ಬಂತು. ಇನ್ನೂ ಹೊಲಗಳ ಕಡೆಗೆ ಹಣಿಕಿಹಾಕಿ ನೋಡಿಲ್ಲ. ಏನೋ ಅಂಥಾ ಕೆಲಸ ಇರಬೇಕು, ಅಂದರೆ ನಿಲ್ಲಬೇಕು. "

" ನೀವೇ ನೋಡಿರಿ ! "

" ನಾಳೆ ಕಾಗದ ಒಂದ ಬರಸತೇನು " ಸ್ವಲ್ಪ ತಡೆದು. " ಈಗ ಮತ್ತ ನನಗಾಗಿ ಅಡಿಗೇ ಮಾಡಬೇಕು ? " ಎಂದು ಕೇಳಿದ.

" ಇಲ್ಲ; ರೊಟ್ಟಿ ಅವ. ಹಿಟ್ಟ ಸ್ವಲ್ಪ ಅಡತೇನ. ಆಯ್ತು. " ಎಂದು ಅವಸರ ಮಾಡುತ್ತ " ಮಧ್ಯಾಹ್ನ ಎಲ್ಲಿ ಉಂಡಿದೀರೋ ಯಾವಾಗ ಉಂಡೀ ದೀರೋ ಹಸಿದಿದ್ದಾದೀರಿ ? " ಎಂದು ಪರಾಮರಿಕೆ ಮಾಡತೊಡಗಿದಳು ಪದ್ಮಾವತಿ.

ತಾತಪ್ಪನೇ ಬಾಬಣ್ಣನ ವಿಷಯಕ್ಕೆ ಇಷ್ಟು ನಿಶ್ಚಿಂತನಾಗಿರುವಾಗ ತನಗೇನು ಅಷ್ಟು ಚಿಂತೆಗೆ ಕಾರಣವಿಲ್ಲವಲ್ಲ, ಎಂಬುದೇ ಅವಳ ಇಂದಿನ ನಡ ತೆಗೆ ಕಾರಣವಾಗಿತ್ತು. ಮನಸ್ಸೂ ತುಸು ಹಗುರಾಗಿತ್ತು. ಈ ಮಾವ ಅಳಿ ಯಂದಿರ ಆಟವೇ ತಿಳಿಯುವದಿಲ್ಲ, ಎಂದು ಮನದಲ್ಲಿಯೇ ಅಂದುಕೊಂಡಳು. ಝುಣುಕಕ್ಕೆ ಎಸರಿಟ್ಟಳು. ತಾನೂ ಉಣ್ಣಬೇಕೆಂದು ತುಸು ಹೆಚ್ಚಾಗಿಯೇ ನೀರು ತವೆಯಲ್ಲಿ ಹಾಕಿದಳು. ಅದನ್ನು ನೋಡಿ ತಾತಪ್ಪ ಕೇಳಿದ,—

" ಇನ್ನೂ ನೀನೂ ಉಂಡಿಲ್ಲ? "

" ಇಲ್ಲ. ನೀವು ಯಾರಾದರೂ ಬಂದ ಮೇಲೆ ಉಂಡರಾಯಿತು ಎಂದು ಕುಳಿತಿದ್ದೆ " ಎಂದಳು ಪದ್ಮಾವತಿ.

" ನಾ ಬರದಿದ್ದರೆ ಇಂದ ಉಪವಾಸವೇ ಮಲಗತಿದ್ದಿ ನೀ. "

ಪದ್ಮಾವತಿ ಏನೂ ಹೇಳಲಿಲ್ಲ. ಒಲೆಯೊಳಗಿನ ಉರಿಯ ಬೆಳಕಿನಲ್ಲಿ ಅವಳ ಕಣ್ಣುಗಳೆರಡೂ ಹೊಳೆದುದು ತಾತಪ್ಪನಿಗೆ ಕಂಡಿತು.

" ಏನ ಹುಚ್ಚ ಇದ್ದಾದಿಯವ್ವ ಪದ್ಮಾವತಿ ನೀ ? ಹೋದಲ್ಲಿ ಬಂದಲ್ಲಿ ಏನು ಬಾಬಣ್ಣ ಉಪವಾಸ ಇರತಾನು ? " ಎಂದು ಕನಿಕರಿಸಿ ಕೇಳಿದ.

ಅಂದು ಸೋದರ ಸೊಸೆಯನ್ನೂ ಸಂಗಡ ಕರೆದುಕೊಂಡೇ ತಾತಪ್ಪ ಊಟಮಾಡಿದ. ಇಬ್ಬರೂ ಹೊಟ್ಟೆ ತುಂಬ ಊಟಮಾಡಿದರು. ಹೋಗು ವಾಗ ತಾತಪ್ಪ ಕೇಳಿದ,—

" ಬಾಗಿಲ ಗಟ್ಟಿ ಹಾಕಿಕೊಂಡ ಮಲಗಿಕೋ. ರಾತ್ರಿ ಕಾಲ್ಮಡಿಯ ಲಿಕ್ಕೆ ಎದ್ದರ ಮಾಡಿದರೂ ಬಾಗಿಲ ತೆರೆಯಬೇಡ ಅಲ್ಲೇ ಬಚ್ಚಲ ಮನೆ ಯೊಳಗೇ ಕುಳಿತರಾಯಿತು. ಗಂಡಸರಾರೂ ಮನೆಯೊಳಗಿಲ್ಲ. ಸುಂದರವ್ವನ

ಜೊತೆಗೆ ಮಲಗಲಿಕ್ಕೆ ಕಳಸತಿದ್ದೆನಾದರೂ ಈಗ ಸಧ್ಯ ಆಕೀನ್ನ ಕಳಿಸುವ ಹಾಗಿಲ್ಲಾಗೇದ. ಕಲ್ಲಪ್ಪ ಆಗಲಿ ಉಳಿದವರಾಗಲಿ ಅಣ್ಣತಮ್ಮರು ಬೇರೆ ಇಂಥ ವರು. ಕೆಟ್ಟ ಸೂ....ಮಕ್ಕಳು."

ಎಂದು ಹೇಳಿ ಹೋದ. ಮಾವನ ಈ ಮಾತಿನಿಂದ ಆವಳಿಗೆ ಬಾಬಣ್ಣ ಮನೆಗೆ ಬಂದಷ್ಟು ಸಮಾಧಾನವಾಯಿತು. ಕಲ್ಲಪ್ಪನ ಹೆಂಡತಿ ಊರಲ್ಲಿ ಇಲ್ಲದೊಂದು ಹೂಲಿ ಎಬ್ಬಿಸಿರುವಳು. ಅವರು ಬರಲಿ. ನಾನೂ ಒಮ್ಮೆ ಜಗಳ ತೆಗೆಯುವೆ. ತಲೆ ಕೂದಲ ಕಿತ್ತಿ ಅವಳ ಕೈಯಲ್ಲಿ ಕೊಡದಿದ್ದರೆ ನನ್ನ ಹೆಸರ ಪದ್ಮಾವತಿ ಎಂದು ಇಡಬೇಡಿರಿ. ಎಂದು ಮನದಲ್ಲಿಯೇ ಅಂದು ಕೊಂಡು, ಹಾಸಿಗೆಯಲ್ಲಿ ಸಮಾಧಾನದಿಂದ ಉರುಳಿದಳು. ಸ್ವಲ್ಪ ಹೊತ್ತಿ ನಲ್ಲಿ ಗಾಢವಾದ ನಿದ್ರೆಯೂ ಹತ್ತಿತು

ತಾತಪ್ಪ ಮರುದಿನವೇ ಬಾಳವ್ವನ ಊರಿಗೆ ಬಾಬಣ್ಣನನ್ನು ಕಳಿಸಿ ಕೊಡುವದಕ್ಕಾಗಿ ಒಂದು ಕಾಗದ ಬರೆಯಿಸಿದ. ಮನೆಯಲ್ಲಿ ಸಾಮಾನದ ಕೊರತೆ ಏನೇನಿದೆ ಎಂಬುದನ್ನೂ ಕೇಳಿಕೊಂಡು ತಂದುಕೊಟ್ಟ. ದಿನಾಲು ಎರಡ ಹೊತ್ತು ಊಟಕ್ಕೆ ಬರುವ. ಪದ್ಮಾವತಿ ಅಡಿಗೆಮಾಡಿ ಹಾಕುವಳು. ತಾನೂ ಉಣ್ಣುವಳು. ಹೀಗೆ ನಾಲ್ಕಾರು ದಿನಗಳು ಉರುಳಿದವು. ತಾತಪ್ಪ ಸುಮ್ಮನಿರುವುದರಿಂದ ಪದ್ಮಾವತಿಯೂ ಗಂಡನ ಮಾತನ್ನೆತ್ತಲಿಲ್ಲ. ಮೇಲಿಂದ ಮೇಲೆ ಕೇಳುವುದರಿಂದ ತಾತಪ್ಪ ಕೆರಳಬಹುದೆಂದು ಸುಮ್ಮನಾದಳು. ಅವರ ಚಿಂತೆ ನನಗೊಬ್ಬಳಿಗೇ ಇದೆಯೇ ? ಮಾವನೂ ಅದರಲ್ಲಿ ಪಾಲುಗಾರನಿರುವ ನಲ್ಲ, ಎಂದುಕೊಂಡು ಸಮಾಧಾನ ತಾಳಿದಳು.

ಗಂಗವ್ವನು ತಾತಪ್ಪ ಊರಿಂದ ಬಂದೊಡನೆಯೇ ಗೌಡನು ಕರೆಯಿ ಸಿದ ಸುದ್ದಿಯನ್ನೂ ಅಲ್ಲಿ ನಡೆದ ಸಂಗತಿಯನ್ನೂ ಅರುಹಿದ್ದಳು. ಅಪ್ಪಣ್ಣ ನಂತೂ ಗಾಬರಿಯಿಂದ ನುಡಿದಿದ್ದ,—

"ಇಂಥಾದ್ದ ನನಗ ಜನ್ಮದೊಳಗ ಗೊತ್ತಿಲ್ಲ ನೋಡು ತಾತಪ್ಪ !"

"ಪ್ರಾಯದ ಪೋರಿಗಳು! ಎಷ್ಟ ದಿವಸ ಹಾಗೇ ಇದ್ದಾವು? ಎಲ್ಲಿಯೋ ತಪ್ಪಿ ಕಾಲ ಜಾರೇದ ಆಯ್ತು ! ಅದೇ ಕಾಯ್ದ ಮೈಯೊಳಗ ನಿಂತದ." ಎಂದು ಧೈರ್ಯ ಹೇಳಿದ.

" ಕಾಗೆ ಕೂಡಲಿಕ್ಕೆ ಟೊಂಗೆ ಮುರಿಯಲಿಕ್ಕೆ ಕೂಡೇದ ಆಯ್ತು ! ಏನಿಲ್ಲ, ನಮದೇ ದಣಿಸುವ ವೇಳೆ...." ಎಂದು ಗಂಗವ್ವ ನುಡಿದಳು.

" ಮುದಿಕೆ ಆದಿಯಲ್ಲ. ನಿನಗ ತಿಳಿಯಬಾರದು ? " ಅಪ್ಪಣ್ಣ ಹೆಂಡ ತಿಯ ಮೇಲೆ ಹರಿಹಾಯ್ದ.

" ಇರಲಿ. ತಪ್ಪು ಆದದ್ದಕ್ಕ ಏನ ಮಾಡೋದ ಈಗ ? " ಸಮಾಧಾನ ತಾತಪ್ಪನದು.

" ಗೌಡನ ಹೆಣಕ್ಕ ಬಡದೇವಲ್ಲ ನೂರೆರಡನೂರ ರೂಪಾಯಿ ! "

" ಅದ ಆಯ್ತು ! ಮುಂದ ಏನ ಮಾಡೋದಂತ ನನ್ನ ಹೊಟ್ಟೆ ಕಡಿ ಯಲಿಕ್ಕೆ ಹತ್ತೇದ. ಅದೆಲ್ಲ ಬಿಟ್ಟಾನು, ಇವನು ಮನೆಯೊಳಗ ಬಂದ ತಿರಗಿ ಮುರಗಿ ವಟವಟ ಹಚ್ಚತಾನ. " ಎಂದು ಗಂಗವ್ವ ಅಂದಳು.

ಸುಂದರಿಯು ಗರ್ಭದ ಮುಂದಿನ ವ್ಯವಸ್ಥೆ ಹೇಗೆಂಬುವ ಚಿಂತೆ ಯಲ್ಲಿಯೇ ತಾತಪ್ಪ ಈಗ ನಾಲ್ಕೆಂಟು ದಿನಗಳನ್ನು ಕಳೆದಿದ್ದ. ಆದಷ್ಟು ಬೇಗನೆ ಎಲ್ಲಿಯಾದರೂ ಒಯ್ದು ಏನಾದರೂ ಮಾಡಿಸಬೇಕಾಗಿತ್ತು. ಎಲ್ಲಿ ಹೋದರೆ ಸುರಕ್ಷಿತ್ಯ-ಹೇಗೆ ಮಾಡಿದರೆ ಹಿತಕರ ಈ ಲೆಕ್ಕದಲ್ಲಿಯೇ ಅವನ ವೇಳ ಯೆಲ್ಲ ಹೋಗುತ್ತಿದ್ದಿತು. ಮತ್ತಾವುದರ ಕಡೆಗೂ ಅವನ ಲಕ್ಷ್ಯವಿರಲಿಲ್ಲ.

ಅಪ್ಪಣ್ಣ ನಾಲ್ಕು ಜನರಲ್ಲಿ ಹೋದರೆ ಜನ ಅವನನ್ನೇ ನೋಡಿ ಪಿಸಿ ಪಿಸಿ ನಗುವರು, ಗುಜುಗುಜು ಮಾತಾಡುವರು. ಅದರಿಂದ ಆತ ಯಾರ ಲ್ಲಿಯೂ ಈಗ ಕೂಡುತ್ತಿರಲಿಲ್ಲ. ಅವನು ಎಂಥ ತಿಳಿಯದ ಮನುಷ್ಯನಿದ್ದ ರೇನಾಯಿತು ? ಹೊಸದೇನಾದರೂ ಆಘಾತವಾಗಲು ಅವನಿಗೆ ಅಪಮಾನ ವಾದಂತಾಗುವದು. ಹಳೆಯದ್ದೇನು ಮೈಯ್ಗುಂಡು ಹೋಗಿದ್ದಿತು. ಅದು ಜನರಿಗೂ ಹೊಸದೆನಿಸುತ್ತಿರಲಿಲ್ಲ. ತಾತಪ್ಪ ಅವರ ಮನೆಯ ಕಾರಭಾರಿ ಯಾದುದನ್ನು ಬಹಳ ದಿನಗಳಿಂದ ಜನ ಬಲ್ಲುದು. ಆದರೆ ಸುಂದರಿಯ ಪ್ರಸಂಗ್ಯ ಈಗ ಓಣಿಯಲ್ಲಿ ಅಲ್ಲೋಲವನ್ನುಂಟುಮಾಡಿದ್ದಿತು. ಅದರಲ್ಲಿ ನಿಲ್ಲಲಾರದೆ ಅಪ್ಪಣ್ಣ ಬೆಳಗಿನಿಂದ ಸಾಯಂಕಾಲದವರೆಗೆ ಹೊಲದಲ್ಲಿಯೇ ಇರುತ್ತಿದ್ದ. ಮನೆಯಲ್ಲಿ ಗಂಗವ್ವ ತಾತಪ್ಪರಿಬ್ಬರಲ್ಲಿಯೇ ವಿಚಾರ ಮಥನ ನಡೆಯುವುದು. ಸುಂದರಿಯಂತೂ ಕೋಣೆಯನ್ನು ಬಿಟ್ಟು ಹಗಲು ಪಡ ಸಾಲೆಗೆ ಬರುವಂತಿಲ್ಲ.

ಒಂದುದಿನ ತಾತಪ್ಪ ಮುಂಜಾನೆ ಊಟ ತೀರಿಸಿಕೊಂಡು ಗಂಗವ್ವನ ಮನೆಯ ಕಡೆಗೆ ನಡೆದಿದ್ದ. ಸುಮಾರು ಹನ್ನೊಂದು ಗಂಟೆಯಾಗಿರಬೇಕು. ದಾರಿಯಲ್ಲಿ ಅವನಿಗೆ ಕಲ್ಲಪ್ಪ ದೊರಕಿದ. ಇಬ್ಬರೂ ಒಬ್ಬರನ್ನೊಬ್ಬರು ಕಂಡರೆ ಮಾತಾಡಿಸುವುದು ಕಡಿಮೆ. ಒಮ್ಮೊಮ್ಮೆ ತಾತಪ್ಪನೇ ಮಾತಾಡಿಸುವ ಇಚ್ಛೆ ಪ್ರದರ್ಶಿಸುವುದುಂಟು. ಆದರೆ ಕಲ್ಲಪ್ಪ ತಾನಾಗಿಯೇ ಎಂದೂ ಮಾತನಾಡಿಸುತ್ತಿರಲಿಲ್ಲ. ಇಂದು ಅದೇಕೋ ಕಲ್ಲಪ್ಪನೇ ಮಾತಿಗೆ ಆರಂಭಿಸಿದ,—

" ಊಟ ಆಯ್ತೇನು ? "

" ಹೂಂ ! ಆಯ್ತಲ್ಲ. "

ಏನೋ ವಿಚಾರದಲ್ಲಿದ್ದ ತಾತಪ್ಪ ಇಷ್ಟೇಹೇಳಿ ಮುನ್ನಡೆದ.

" ಆಗs ಯಾಕ ಹೇಳಲಿಲ್ಲ ಅಂತ ಅಂದಿ. ಬಾಬು ನನ್ನ ಕೊರಳಿಗೆ ಉರಲು ಬಂದದ ಅಂತ ಎರಡದಿನಾ ಬಂದ ಕೂತ ಮ್ಯಾಲೆ ಹನ್ನೆರಡ ನೂರು ರೂಪಾಯಿ ರೋಖ ಕೊಟ್ಟ ಹೊಲಾ ಖರೀದಿ ತಗೊಂಡಿದೇನೆ. ನಿಮ್ಮ ಮಾವನನ್ನ ಕೇಳು, ಈ ವ್ಯವಹಾರ ನನಗ ಬೇಡ ಅಂತೂ ಹೇಳಿದೆ. ಆದರೂ ಕೇಳಲಿಲ್ಲ ಹುಡುಗ. " ಕಲ್ಲಪ್ಪನ ಸ್ವರದಲ್ಲಿ ಹೆಮ್ಮೆಯೂ ಇತ್ತು, ಗಾಂಭೀರ್ಯವೂ ಇತ್ತು. ಇಷ್ಟು ಹೇಳಿ ನಾಳೆ ಹೊಲಕ್ಕೆ ಗಳೆಯನ್ನು ಮಾಡಲಿಕ್ಕೆ ಹೋಗಲಡ್ಡಿಯಿಲ್ಲವೆಂದು ಭಾವಿಸಿ ಕಲ್ಲಪ್ಪ ತನ್ನ ದಾರೀ ಹಿಡಿದು ಹೊರಟ.

ತಾತಪ್ಪನಿಗೆ ಒಮ್ಮೆಲೆ ಸಿಡಿಲು ಬಡಿದಂತಾಯಿತು. ಸುತ್ತಲಿನ ಮನೆ ಗಿಡ ಮರಗಳೆಲ್ಲ ಗರಗರನೆ ತಿರುಗಿದಂತೆ ಭಾಸವಾಯಿತು. ತಲೆ ದಿಮ್ಮೆಂದಿತು. ಎದುರಿಗೆ ನಿಂತ ಕಲ್ಲಪ್ಪ ಆಕಾಶದವರೆಗೆ ಮೆಲ್ಲನೆ ಮೇಲೇರಿದಂತಾಯಿತು. ಕಣ್ಣಿಗೆ ಕತ್ತಲೆ ಕವಿದಿತು. ಆದರೂ ಕೇಳಿದ,—

" ಅಂಥ ಪ್ರಸಂಗ ಏನ ಬಂದಿತ್ತವನಿಗೆ ? "

" ಏನೋಪ್ಪ ! ಅದನ್ನೇನ ನನಗ ಹೇಳಲಿಲ್ಲ ಅವ ! "

ಎಂದು ತುಂಬ ಬೆರಗನ್ನು ಪ್ರದರ್ಶಿಸಿದ. ಆದರೆ ಅವನಿಗೆ ತಾತಪ್ಪನ ಎದುರಿಗೆ ಹೆಚ್ಚು ಹೊತ್ತು ನಿಲ್ಲುವ ಧೈರ್ಯವಾಗಲಿಲ್ಲ. ಸಾವಕಾಶವಾಗಿ ಹೋಗಿಬಿಟ್ಟ. ಹೆಜ್ಜೆ ಎತ್ತಿಡಬೇಕಾದರೂ ಹೆದರುತ್ತಿದ್ದನೇನೋ !

ತಾತಪ್ಪ ನಿಂತಲ್ಲಿಯೇ ನಿಂತು ಕಲ್ಲಪ್ಪ ಹೋಗುವುದನ್ನು ಕೆಂಗಣ್ಣುಗಳಿಂದ ನೋಡಿದ. ಕಲ್ಲಪ್ಪನು ಕಣ್ಮರೆಯಾಗುವವರೆಗೂ ನೋಡಿದ.

ಆಮೇಲೆ ನಿಟ್ಟುಸಿರೊಂದನ್ನು ಬಿಟ್ಟು ತಿರುಗಿ ಗಂಗವ್ವನ ಮನೆಯತ್ತ ನಡೆದ. ಅವನ ಮನಸ್ಸು ಮಾತ್ರ ಎಲ್ಲೆಲ್ಲಿಯೋ ಅಲೆದಾಡುತಲಿದ್ದಿತು. ಬಾಬಣ್ಣನನ್ನು ಗೌಡ ಕಲ್ಲಪ್ಪ ಕೂಡಿ ಪೇಚಿನಲ್ಲಿ ತಂದಿರಬೇಕು, ನಾನಿಲ್ಲದುದನ್ನು ನೋಡಿ ಹೊಲ ಖರೀದಿ ಮಾಡಿಸಿಕೊಂಡಿದ್ದಾರೆ. ಏನಾದರೂ ಗೌಡನ ಅಂಗಡಿಯ ಬಾಕಿ ನೂರಿನ್ನೂರು ಇರಬೇಕು; ಅದೂ ಅವರ ಲೆಕ್ಕದಂತೆ ನೋಡಿದರೆ. ಆದರೆ ಹನ್ನೆರಡು ನೂರು ರೂಪಾಯಿಗಳನ್ನು ಇವನಿಗೆ ಕೊಟ್ಟೆನೆನ್ನುವರಲ್ಲ. ಇದೆಂಥ ಮೋಸತನ!

ಯಾವ ಬಲೆಯಲ್ಲಿ ಬಾಬಣ್ಣನನ್ನು ಹಿಡಿದಿರಬೇಕು ಗೌಡ?
ನಾನು ಬಯ್ಯುವೆನೆಂದು ಹೆದರಿ ಬಾಬಣ್ಣ ಊರಿಗೆ ಬರದಿರಬೇಕೆ?
ಸುಂದರಿಗೂ ಇವನಿಗೂ ಏನಾದರೂ ಸಂಬಂಧ ಕಲ್ಪಿಸಿರಬಹುದೆ?
ಕಲ್ಲಪ್ಪನಿಂದ ಹೊಲವನ್ನು ತಿರುಗಿ ಹೇಗೆ ಪಡೆಯುವುದು?
ಬಾಬಣ್ಣನಿಂದ ತಕರಾರು ಕೊಡಲಿಕ್ಕೆ ಏನಾದರೂ ದಾರಿ ಇದೆಯೇ?

ಇವೇ ಮೊದಲಾದ ವಿಚಾರಗಳಲ್ಲಿ ಮಗ್ನನಾಗಿ ನಡೆದ ತಾತಪ್ಪನ ಕೈಯಲ್ಲಿ ಅಂಚೆಯಾಳು ಕಾರ್ಡನ್ನು ಯಾವಾಗಲೋ ಕೊಟ್ಟು ಹೋಗಿದ್ದ. ಆದರ ಸ್ಮೃತಿಯೂ ಅವನಿಗೆ ಇರಲಿಲ್ಲ. ಕೈಯಲ್ಲಿ ಕಾಗದವಿದೆ, ತಲೆಯಲ್ಲಿ ವಿಚಾರ ಚಕ್ರ ಸುತ್ತುತ್ತಲಿದೆ. ಹಾಗೇ ಗಂಗವ್ವನ ಮನೆಯ ಕಟ್ಟೆಯನ್ನು ಏರಹತ್ತಿದ.

"ಕಾರ್ಡ ಎಲ್ಲಿಂದ ಬಂತು?" ಗಂಗವ್ವ ಕೇಳಿದಳು.

"ಹಾ! ಮರತೇ ಬಿಟ್ಟೆನಲ್ಲ. ಈಗ ಓದಿಸಿ ತರತೇನ ನಿಲ್ಲು."

ಎಂದು ತಾತಪ್ಪ ತಿರುಗಿ ಸಮೀಪದ ಕಿರಾಣಿ ಅಂಗಡಿಗೆ ಹೋಗಿ ಕಾಗದ ತೋರಿಸಿದ. ಓದಿಸಿ ಕೇಳಿದ. ಅದು ಬಾಳವ್ವ ಬರೆಯಿಸಿದ ಕಾಗದ. ಅದರ ಸಾರಾಂಶ ಹೀಗಿತ್ತು.

"ಬಾಬಣ್ಣ ಹತ್ತು ಹನ್ನೆರಡು ದಿನಗಳ ಹಿಂದೊಮ್ಮೆ ಬಂದಿದ್ದ. ಒಂದೇ ದಿನ ನಿಂತು ಹೋದ. ಯಾಕೋ ಅವನ ಮನಸ್ಸಿಗೆ ಸಮಾಧಾನವಿದ್ದಂತಿರಲಿಲ್ಲ. ಮನೆಯಲ್ಲಿ ಜಗಳಾಡಿ ಬಂದಿದ್ದನೋ ಏನೋ. ಎಷ್ಟು ಕೇಳಿದರೂ ಏನೂ ಹೇಳಲಿಲ್ಲ. ಹೋಗುವಾಗ ಹುಡುಗನ ಕೈಯಲ್ಲಿ ಐದು ರೂಪಾಯಿನ

ನೋಟೊಂದನ್ನು ಕೊಟ್ಟು ಹೋಗಿರುವನು. ಇನ್ನೂ ಊರಿಗೆ ಬಂದಿಲ್ಲವೆ? ಬಂದಿರದಿದ್ದರೆ ಜರೂರ ಜರೂರ ತಿಳಿಸಿರಿ."

ತಾತಪ್ಪ ಕೇಳಿ ಹಿಂದಿರುಗಿದ. ಇಲ್ಲಿಯವರೆಗಿನ ಅವನ ಊಹೆಯೆಲ್ಲ ತಲೆ ಕೆಳಗಾಯಿತು. ದಿಗ್ಭ್ರಮೆಯಾದಂತೆನಿಸಿತು. ಯಾವುದಕ್ಕೂ ದಾರಿ ತೋರದಾಯಿತು. ತಾನೊಂದು ಮಾಡುವುದು ಆಗುವುದು ಇನ್ನೊಂದು ಹೀಗಾಗಿಬಿಟ್ಟಿತು. ಹೆಡ್ಡನಂತಾಗಿತ್ತವನ ಸ್ಥಿತಿ.

"ಈ ಕಾರ್ಡ ಒಯ್ಯಲ್ಲ"

ಅಂಗಡಿಯವನು ಇವನು ಹಾಗೇ ಹೊರಟುದನ್ನು ನೋಡಿ ಹೇಳಿದ. ತಾತಪ್ಪ ಈಗ ಸುದ್ದಿಯ ಮೇಲೆ ಬಂದ ಕಾಗದ ಓದುಗನ ಕೈಯಲ್ಲಿಯೇ ಬಿಟ್ಟು ನಡೆದಿರುವೆನೆಂಬ ಎಚ್ಚರ ಬಂತು. ಆದರೂ ತನ್ನ ವೈಮರವನ್ನು ತೋರಗೊಡಬಾರದೆಂದು ಬಗೆದು ಬೇಕಂತಲೇ ಹೇಳಿದ

"ಆಯ್ತಲ್ಲ. ಓದಿಸಿ ಕೇಳಿದ ಮೇಲೆ ಇನ್ನೇನ ಅದರ ಕೆಲಸ ?"

"ಹಾಗಾದರೆ ಇರಲಿ ಬಿಡು."

ಅಂಗಡಿಕಾರ ಹೀಗಂದರೂ ತಾತಪ್ಪ ತಿರುಗಿ ನಾಲ್ಕು ಹೆಜ್ಜೆ ಹೋಗಿ ಕಾಗದ ಇಸಿದುಕೊಂಡು ಹೋಗದೆ ಇರಲಿಲ್ಲ. ಮನೆಯಲ್ಲಿ ಹೋದೊಡನೆಯೇ ಗಂಗವ್ವನಿಗೆ ಕಾಗದದಲ್ಲಿಯ ಸುದ್ದಿಯನ್ನೂ ಕಲ್ಲಪ್ಪ ಆಡಿದ ಮಾತನ್ನೂ ಹೇಳಿದ. ಆಗ ಆತನು ಗಂಗವ್ವನ ಮುಖವನ್ನೇ ತೀಕ್ಷ್ಣ ದೃಷ್ಟಿಯಿಂದ ನಿರೀಕ್ಷಿಸುತ್ತ ಇದ್ದ.

ಗಂಗವ್ವ ಏನನ್ನು ಭಾವಿಸಿದಳೋ ಏನೋ, ಅನುಮಾನಿಸುತ್ತ ನುಡಿದಳು:

"ಸುಂದರಿ ಸುತ್ತ ಬಹಳ ಬಿರಿ ಕೊಟ್ಟಿದ್ದರಂತ, ಪೋಲೀಸ ಮತ್ತ ಗೌಡ ಕೂಡಿ. ಆದರೂ ಆಕೆ ಬಾಬಣ್ಣನ ಹೆಸರ ತಗೊಳಿಲ್ಲ. 'ಹಾದಿಗುಂಟ ಚೇಷ್ಟೆ ಮಾಡಿದರ, ಹೊಲದೊಳಗ ಎಮ್ಮಿ ಬಿಟ್ಟಕೊಟ್ಟರೆ ಎಲ್ಲರೂ ಅದೇ ಮಾಡತಾರೇನು ?' ಎಂದು ತಿರುಗಿ ಕೇಳಿದಳಂತ. 'ಇದ್ದವನನ್ನ ಬಿಟ್ಟ ಸಿಕ್ಕ ಸಿಕ್ಕವರ ಹೆಸರ ಯಾಕ ತಗೋ ಅನತೀರಿ ನನಗ?' ಎಂದು ಸ್ಪಷ್ಟ ಕೇಳಿಬಿಟ್ಟಳಂತ."

ಈ ಮಾತನ್ನು ಕೇಳಿದ ಕೂಡಲೆ ತಾತಪ್ಪನ ತಲೆಯಲ್ಲಿ ಸ್ವಚ್ಛ ಪ್ರಕಾಶ ಬಿತ್ತು. ಕಗ್ಗತ್ತಲೆಯ ರಾತ್ರಿಯಲ್ಲಿ ಕೋಲ್ಮಿಂಚು ಮೂರು ನಾಲ್ಕು ಸಲ ಒಂದೇ ಸವನೆ ಹೊಡೆದಂತಾಯಿತು.

೧೩

“ ಒಂದ್ಸೇ ದಿನ ನಿಂತ ಬಾಬಣ್ಣ ಊರ ಕಡೆಗೆ ಬಂದಾನಂತವ್ವ.

ಸಾಯಂಕಾಲ ಊಟಕ್ಕೆ ಕುಳಿತಾಗ ತಾತಪ್ಪ ಪದ್ಮಾವತಿಗೆ ಹೇಳಿದ. ದನಿ ಜಗ್ಗಿದ್ದಿತು. ಅವನು ಹೊಲ ಕೊಟ್ಟು ಹೋದ ಸುದ್ದಿಯನ್ನೂ ಹೇಳಬೇಕೆಂದ. ಆದರೆ ಪದ್ಮಾವತಿ ಒಮ್ಮೆಲೇ ಎದೆ ಒಡೆದುಕೊಂಡಾಳೆಂದು ತಿಳಿದು ಸುಮ್ಮನಾದ.

ಪದ್ಮಾವತಿಯ ಮುಖ ಮ್ಲಾನವಾಯಿತು ಇಲ್ಲಿಯವರೆಗೆ ತನ್ನ ಗಂಡ ಅಕ್ಕನ ಮನೆಗೇನೇ ಹೋಗಿರುವನೆಂದು ಭಾವಿಸಿದ್ದಳು. ಈಗ ಅಲ್ಲಿಯೂ ಇಲ್ಲವೆಂದೊಡನೆ ಅವಳ ಕೈಕಾಲುಗಳು ತಣ್ಣಗಾದುವು. ಆದರೂ ಅಷ್ಟು ಅಧೀರೆ ಮಾತ್ರ ಆಗಲಿಲ್ಲ. ಊರಲ್ಲಿ ಸುಂದರಿ ಇದ್ದಾಳೆ. ಇವರು ಎಲ್ಲಿ ಹೋಗುವವರು ? ಬೇಸತ್ತಿದ್ದಾರೆ ನಾಲ್ಕು ದಿನ ಎಲ್ಲಿಯಾದರೂ ತಿರುಗಾಡಿ ತಾವೇ ಬರುವರು. ನನ್ನ ಕೂಡ ವಾದಿಸಿ ಬೇರೆ ಹೋಗಿಲ್ಲ. ಏನಿದ್ದರೂ ಸುಂದರಿಯ ಸಂಬಂಧದ ಬಗ್ಗೆ ಸ್ವಲ್ಪ ವೈಗೆ ಹಚ್ಚಿ ಮಾತಾಡಿದ್ದಕ್ಕೆ ನನಗೆ ಹೇಳದೆ ಕೇಳದೆ ಸಿಟಗೊಂಡು ಹೋಗಿರುವರು. ಈಗ ಊರಿಗೆ ಊರೇ ಮಾತಾಡುತ್ತಿರುವುದು. ಅದಕ್ಕೇನು ಹೇಳುವರೋ. ಗಡಗಿಯ ಬಾಯಿ ಮುಚ್ಚಲಿಕ್ಕೆ ಬಂದೀತೆಂದರೆ ಜನರ ಬಾಯಿ ಮುಚ್ಚಲು ಬರುವುದೋ. ಅವಳು ಮೂರು ತಿಂಗಳಿಂದ ಕಡೆಗಾಗಿಲ್ಲ ಬೇರೆಯಂತೆ. ಈ ಪ್ರಸಂಗ ಎಂಥದು ನೋಡು ! ಮನೆಯ ಹೆಂಡತಿ ಒತ್ತಿ ಹೇಳಿದರೆ ಇವರಿಗೆ ಬಿಸಿಹತ್ತುವುದು. ಎಂದೇನೇನೋ ಪಾಪ ಪದ್ಮಾವತಿ ಯೋಚಿಸುತ್ತಿದ್ದಳು.

ತಾತಪ್ಪ ನುಂಗಿದಷ್ಟು ನಾಲ್ಕು ತುತ್ತು ತಿಂದು ಹೊರಗೆ ಹೋಗುವಾಗ ಹೇಳಿದ.—ದನಿಯಲ್ಲಿ ಆದಷ್ಟು ಸಮಾಧಾನವನ್ನು ತೋರಿಸಲು ಯತ್ನಿಸುತ್ತಿದ್ದ,—

“ ಅವನ ಚಿಂತಿ ಬಿಟ್ಟುಬಿಡೋದ ಪದ್ಮಾವತಿ ಇನ್ನು. ಸಧ್ಯಕ್ಕೆ ನಮ್ಮ ಮುಂದಿನ ಹಾದಿ ನಾವು ನೋಡೋದು. ”

“ ನಾವು ಚಿಂತಿ ಮಾಡಿದರೆ ಎಲ್ಲಿ ದಂಡೆಗೆ ಹತ್ತೋದು ? ನಮ್ಮೆಲ್ಲರ ಚಿಂತಿ ಆ ದೇವರೇ ಮಾಡಬೇಕು, ಕಾಪಾಡಬೇಕು. ”

ಎಂದು ಪದ್ಮಾವತಿ ಎಲ್ಲ ಹೊಣೆಯನ್ನು ದೇವರ ಮೇಲೆ ಹಾಕಿದಳು.

" ನಾನು ಕೈಯೊಳಗ ಇರುವತನಕ ಹಿಡಿದ ನೋಡಿದೆ. ಇನ್ನೇನ ಮಾಡಲಿ ನಾ? ಸಣ್ಣ ಹುಡುಗ ಇದ್ದಾನ ಹುಡುಕತ ಹೋಗೋದ ಅದ?"

" ನಾವು ಮಾಡತೇವ ಅನ್ನೋದ ಸುಳ್ಳ ನೋಡ ಮಾಮಾ."

" ನೀ ಅಂದಂತೇನೇ ಆಯ್ತಿಲ್ಲಬೇ ಈಗ?"

' ಬಂಡಿಯೊಳಗ ಕೂತ ಹೊರಟೇವಿ. ನನ್ನ ಗಂಟ ನನ್ನ ಗಂಟ ಅಂತ ಅಕ್ಕಸಬಟ್ಟ ತಲೆ ಮೇಲೆ ಇಟ್ಟಕೊಂಡ ಒತ್ತಿ ಹಿಡಿಯೋದ ಹುಚ್ಚ ತನ ಅಲ್ಲಾ ? ನನ್ನಾ ಹೊತ್ತಕೊಂಡ ಹೋಗುವ ಗಾಡಿ, ನನ್ನ ಗಂಟನ್ನ ಬಿಟ್ಟ ಹೋಗತದ? ಎಲ್ಲ ಮಾತ ಏನು ? ಹೇಗೋ ಪರಮೇಶ್ವರ ಎಳದ ಒಯ್ಯುವ ಅನ್ನೋದು. ಅವನ ಮೇಲೇ ಭಾರಾ ಹಾಕಿ ಸುಮ್ನ ಇರೋದು. ನಮ್ಮ ಪಾಲಿನ ಕೆಲಸಾ ನಾವು ಮಾಡತ ಇರೋದ ಆಯ್ತು."

" ಏನ ಮನಸಿಗೆ ಸಮಜೂತಿ ಹಾಕಿಕೊಳ್ಳುವಿ ಹಾಕಿಕೋ. ಸಮಾಧಾನದಿಂದ ಇರು. ಅವನೊಬ್ಬ ಹಾಗೆ ಮಾಡಿದಂತ."

" ಅವರ ಹಾಗೆ ಮಾಡಿದರ ನನಗೆ ಹೇಗೆ ಮಾಡಲಿಕ್ಕೆ ಬಂದೀತು? ಒಂಭತ್ತ ತಿಂಗಳ ಹೊತ್ತ ಹಡೆದ ಎರಡ ಮಕ್ಕಳ ಇದ್ದಾವ ನನಗ. ಎರಡು ಕೂರಿಗೆ ದುಡಿದ ತಿನ್ನಲಿಕ್ಕೆ ಅಡವಿ ಅದ. ಅವರಾದರೂ ಎಲ್ಲಿ ಹೋಗ್ತಾರ? ಬಂದಾರಲ್ಲ ಇಂದಿಲ್ಲ ನಾಳೆ. ಒಂದೊಂದು ವೇಳೆ ಇರತದ, ಆಗಿನ ಹೊತ್ತಿಗೆ ಹಾಗೆ ಮಾಡಲಿಕ್ಕೆ ಹಚ್ಚತದ."

ಎಂದಳು ಪದ್ಮಾವತಿ. ಮಾತು ಶಾಂತ ಸ್ವರದಲ್ಲಿ ಇತ್ತು. ಇನ್ನು ಈ ಮನೆತನದ ಹೊಣೆಯೆಲ್ಲ ಸಧ್ಯಕ್ಕೆ ತನ್ನ ಮೇಲೆಯೇ ಬಿತ್ತೆಂಬ ಅರಿವು ಆ ಮಾತಿನಲ್ಲಿ ಇಡುಗಿತ್ತು. ತನ್ನನ್ನೂ ತನ್ನ ಮಕ್ಕಳನ್ನೂ ಕಾಪಾಡುವವ ದೇವರಿದ್ದಾನೆ, ಎಂದು ನಿಶ್ಚಿಂತಳಾಗಿದ್ದಳು. ಇದರ ಹೊರತಾಗಿ ಅವಳಿಗೆ ಬೇರೆ ದಾರಿಯೇ ಇರಲಿಲ್ಲ.

" ಏನಾದರೂ ಆಗಲಿ. ಈಗ ಊಟ ಮಾಡು."

ಎಂದು ತಾತಪ್ಪ ಹೊರಟು ನಿಂತವ ಒಳಗೆ ಬಂದು ಕುಳಿತ. ಸೊಸೆಯ ಇಂದಿನ ಮಾತನ್ನು ಕೇಳಿ ಅದೇಕೋ ಅವಳಿಗೆ ಊಟ ಮಾಡಲಿಕ್ಕೆ ಹಚ್ಚಿಯೇ ಹೋಗಬೇಕೆಂದೆನಿಸಿತವನಿಗೆ. ಸುಮ್ಮನೆ ತಂಬಾಕು ಸೇದುತ್ತ ಕುಳಿತ. ಪದ್ಮಾವತಿ ಎಡೆ ಮಾಡಿಕೊಂಡಳು. ಮಾವ ತನಗಾಗಿ ಕುಳಿತಿರುವನೆಂಬುದು

ಅವಳಿಗೆ ಹೊಳೆಯದಿರಲಿಲ್ಲ. ಅವನಿಗೆ ಹೊರಗೆ ಹೋಗಲಿಕ್ಕೆ ವಿಲಂಬವಾಗು ವದೆಂದು ತುಸು ಗಡಬಡಿಯಿಂದಲೇ ಉಣ್ಣತೊಡಗಿದಳು. ಆದರೂ ಅಂದಳು.

“ ನೀವು ಇಂದ ನೆಟ್ಟಗೆ ಉಣಲಿಲ್ಲ ಮಾವಾ. ”

“ ಹೀಗೆ ಆದ ಮೇಲೆ ಏನು ಕೂಳು ಹೋಗತದ? ”

ಎಂದ ತಾತಪ್ಪ. ಆದರೂ ಸೊಸೆ ತನ್ನ ಮಾತಿನಿಂದ ಉಣ್ಣುವುದನ್ನು ಕಡಿಮೆ ಮಾಡಬಾರದಲ್ಲ, ಎಂದುಕೊಂಡು ಮಾತನ್ನು ಮುಂದುವರಿಸಿದ,—

“ ಆದರೂ ಹೊಟ್ಟೆ ಎಲ್ಲಿ ಕೇಳತದ? ತಿನ್ನೋದ ತಿನ್ನಲಿಕ್ಕೆಬೇಕು. ಮಾಡೋದು ಮಾಡಲಿಕ್ಕೆಬೇಕು. ನಾವೂ ಏನು ಕೈಕಾಲೊಳಗಿನ ಶಕ್ತಿ ಕಳ ಕೊಂಡ ಕೂಡೋದ ಅದ? ಊರೂರ ತಿರುಗುವವ ಅವನೇನ ಉಪವಾಸ ಇರತಾನ ? ”

ಎಂದು ತುಸು ಹೆಚ್ಚಾಗಿಯೇ ಮಾತನಾಡಿದ. ಆದರೂ ತಾನಲ್ಲಿ ಕೂಡು ವುದು, ಸೊಸೆಯು ಊಟಕ್ಕೆ ಸಂಕೋಚಪಟ್ಟುಕೊಳ್ಳುವುದಕ್ಕೊಂದು ಕಾರಣ ವಾಗುವದೆಂದು ಅವನಿಗೆನಿಸಿತು. ಉದಕ್ಕೆಂತಲೇ ಮೆಲ್ಲನೆ ಏಳುತ್ತ ಹೇಳಿದ,—

“ ನಾ ಹೋಗತೇನ ಇನ್ನು ಕತ್ತಲೆ ಆಗ್ತದ. ”

“ ಹೋಗರಿ. ಕೈಯೊಳಗ ಲಾಟನ ಒಯ್ಯತೀರಿ, ಹಚ್ಚಿಕೊಡಲಿ ? ”

“ ಏನ ಬೇಡ. ಇದೇತರ ಕತ್ತಲಿ. ಎಂತೆಂಥ ಕತ್ತಲೊಳಗ ಹೋಗಿ ದೇವು ಬಂದಿದೇವು ” ಎಂದು ಹೇಳಿ ಹೋಗಿಬಿಟ್ಟ ತಾತಪ್ಪ.

ಕೆಲವು ದಿನಗಳು ಉರುಳಿದುವು. ಹಿತ್ತಲೊಳಗಿನ ಉರುವಲದ ಸಂಗ್ರಹ ತೀರುತ್ತ ಬಂತು. ಇನ್ನು ಸುಮ್ಮನೆ ಕುಳಿತರೆ ಸಾಗದೆಂದು ಅಡವಿಗೆ ಹೋಗಿ ಕೋಲಿ ಕಾಸಿಗೆಗಳನ್ನು ಕಟ್ಟಿತಂದು ಒಲೆಯಲ್ಲಿ ಹಾಕತೊಡಗಿದಳು. ಮನೆಗೆ ಹತ್ತುವ ಸಾಮಾನುಗಳನ್ನಂತೂ ಅಂಗಡಿಯಿಂದ ಅವಳು ಹೇಳುವದಕ್ಕಿಂತ ಮುಂಚೆ ತಾತಪ್ಪ ತಂದಿಡುತ್ತಿದ್ದ. ಪದ್ಮಾವತಿಯ ತವರುಮನೆ ಎಂಥದು, ಸಣ್ಣಂದಿರುವಾಗ ಅಲ್ಲಿ ಅವಳು ಹೇಗೆ ಬೆಳೆದಿರಬೇಕೆಂಬ ಕಲ್ಪನೆ ಅವನಿಗಿತ್ತು. ಬಾಬಣ್ಣಾ ಇರುವಾಗ ಪದ್ಮಾವತಿ ಏನು ಮಾಡಿದರೂ ಎಂಥ ನಷ್ಟ ಅನುಭವಿ ಸಿದರೂ ಎಲ್ಲ ತನ್ನ ಸಂಸಾರಕ್ಕಾಗಿ ಮಾಡುವಳೆಂದು ಎನಿಸುತ್ತಿದ್ದಿತು. ಈಗ ಗಂಡ ನಾಡ ಮೇಲೆ ಹೋಗಿರುವ, ಇವಳಿಗೆ ಅಡವಿ ಅಡವಿ ತಿರುಗುವ ಸ್ಥಿತಿ ಬಂದಿದೆ, ಎಂದು ಜನ ಸಹಜ ಆಡಿಕೊಳ್ಳಬಹುದಿತ್ತು. ಅದಕ್ಕಾಗಿ ತಾತಪ್ಪನು

ಪದ್ಮಾವತಿ ಒಂದೇ ದಿನ ಉರುವಲಕ್ಕೆ ಹೋದುದನ್ನು ಕಂಡೊಡನೆಯೇ ಅಪ್ಪಣ್ಣನಿಗೆ ಹೇಳಿ, ಬಂಡಿಯಿಂದ ಉರುವಲು ತರಿಸಿ ಒಗೆಯಿಸಿದ. ಅದ ರಂತೆ ಮನೆಯೊಳಗಿನ ಕಾಳು ಕಡಿಗಳೂ ತೀರುತ್ತ ಬಂದಿದ್ದವು ಸ್ವಲ್ಪ ಕೊಂಡು ತಂದುಕೊಟ್ಟನು. ಈ ರೀತಿ ಎರಡೂ ಮನೆಯ ವೆಚ್ಚವನ್ನು ಮುಂದೆಯೂ ನಡೆಯಿಸಿಕೊಂಡು ಹೋಗುವುದು ಅವನಿಗೆ ಕಷ್ಟಸಾಧ್ಯವೆನಿಸ ತೊಡಗಿತು. ಇದಕ್ಕೇನು ಉಪಾಯ ಯೋಚಿಸಬೇಕೆಂಬ ಎಣಿಕೆಯಲ್ಲಿಯೇ ಆತ ಹಗಲಿರುಳು ಇದ್ದ.

ಅಷ್ಟರಲ್ಲಿ ಪದ್ಮಾವತಿಯ ಅಣ್ಣ ಎಕಸಂಬಿಯಿಂದ ಬಂದ. ಬಾಬಣ್ಣ ಹೋದ ಸುದ್ದಿ ಅವನಿಗೂ ಹತ್ತಿದ್ದಿತು. ತಂಗಿಯ ಮನೆಯ ಸ್ಥಿತಿಯನ್ನೆಲ್ಲ ಕಂಡ ಆದರೆ ಅವಳನ್ನು ತವರುಮನೆಗೆ ಕರೆದೊಯ್ಯುವುದು ಅವನಿಗೆ ಸಮಂಜಸವೆನಿಸಲಿಲ್ಲ. ಎರಡು ಮಕ್ಕಳು ಅವಳೂ ಬಂದರೆ ತಮಗೂ ಇಂಥ ತುಟ್ಟಿಯ ದಿನಗಳಲ್ಲಿ ಹಿಡಿಯುವುದು ಸಾಧ್ಯವಿಲ್ಲೆಂದು ಬಗೆದ. ಇಲ್ಲಿಯೇ ಇರಲು ಹೇಳಿ ಹತ್ತಿಪ್ಪತ್ತು ರೂಪಾಯಿಗಳನ್ನು ಕೊಟ್ಟು ಹೋದರೆ ಒಳ್ಳೆಯ ದೆಂದ. ಹೊಲದ ಕಡೆಗೂ ಒಂದು ದಿನ ಹೋಗಿ ಬಂದ. ಉಳಿದ ಒಂದು ಕೂರಿಗೆಯನ್ನು ತಾತಪ್ಪ ಹಸನು ಮಾಡಿಸಿ ಬಿತ್ತಿಸಿದ್ದ. ಆದರ ಚಿಂತೆಯಿರ ಲಿಲ್ಲ. ತಂಗಿಗೆ ಅನೇಕ ಸಮಾಧಾನದ ಮಾತುಗಳನ್ನು ಹೇಳಿ ಕೊನೆಗೆ ಅಂದ,—

" ನಾಲ್ಕ ದಿನ ಬಂದ ಹೋಗತಿದ್ದಿ ಆದರೂ ಇಲ್ಲಿ ತಾತಪ್ಪನ ಅಡಿಗೆಯ ತಾಪತ್ರಯ ಆಗ್ತದ. "

ಈಗ ಇವಳನ್ನು ಕರೆದೊಯ್ದರೆ ಗಂಡ ತಿರುಗಿ ಬರುವವರೆಗೆ ಅಲ್ಲೇ ತಳ ಊರಬಹುದೆಂಬ ಹೆದರಿಕೆ ಅವನ ಸ್ವರದಲ್ಲಿತ್ತು.

" ಎಂದ ಮದುವೆ ಮಾಡಿಕೊಟ್ಟಿರುವಿರಂದೇ ನನಗ ತವರಮನೆ ಸಂಬಂಧ ಕಡದದ. ಈಗ ಯಾತಕ್ಕ ಬರಲಿ ? "

ಎಂದು ಪದ್ಮಾವತಿ ಕೇಳಿದಳು. ಅಣ್ಣ ಸರಳ ಮನಸ್ಸಿನಿಂದ ಕರೆದಿದ್ದರೂ ಆವಳು ಇಂಥ ಸ್ಥಿತಿಯಲ್ಲಿ ಹೋಗಲಿಕ್ಕೆ ಸಿದ್ಧಳಿರಲಿಲ್ಲ. ಕೊನೆಗೆ ಹತ್ತೆಂಟು ರೂಪಾಯಿಗಳನ್ನು ಬೇಡಬೇಡವೆಂದರೂ ಪದ್ಮಾವತಿಯ ಮಕ್ಕಳ ಕೈಯಲ್ಲಿ ಕೊಟ್ಟು ಹೋದ. ಏನಾದರೂ ಕೊಟ್ಟೆ ಹೆಣ್ಣು ಕುಲಕ್ಕೆ ಹೊರತೇ ಎಂದು ಭಾವಿಸಿದ್ದನಾತ.

ಪದ್ಮಾವತಿಯ ಅಣ್ಣ ಬಂದು ಹೋದ. ಅವನೂ ತವರುಮನೆಗೆ ಕರೆದೊಯ್ಯಲಿಲ್ಲ. ಇರಲಿ, ಇಲ್ಲಿ ನಾನೇ ಏನಾದರೂ ವ್ಯವಸ್ಥೆ ಮಾಡಬೇಕು. ಸಂತೆಗಳನ್ನು ತಿರುಗಿ ಒಂದು ಒಳ್ಳೆಯ ಎಮ್ಮೆಯನ್ನು ಕೊಂಡು ತಂದು ಪದ್ಮಾವತಿಯ ಬಾಗಿಲಲ್ಲಿ ಕಟ್ಟಿದ. ಇಗೇನು ಅಡವಿಯಲ್ಲಿ ಹುಲ್ಲು ಆಗಿದೆ. ಹುಡುಗರು ಮೇಯಿಸಿ ತರುವರು. ಒಂದು ಹೊತ್ತಿನ ಹಾಲನ್ನು ಮನೆಗೆ ತಿಂದರೂ ಉಳಿದ ಹಾಲಿನ ಮಾರಾಟದಿಂದ ಮನೆಯ ವೆಚ್ಚವೆಲ್ಲ ಸಾಗುವದೆಂಬುದು ಅವನಿಗೆ ಗೊತ್ತು. ಅದನ್ನು ಮಾಡುವಂತಹ ಯೋಗ್ಯತೆ ಪದ್ಮಾವತಿಯಲ್ಲಿ ಇದೆ ಎಂಬುದನ್ನು ಅವನು ಬಲ್ಲ.

ಹೀಗೆ ಅವಳ ಮನೆಯ ಖರ್ಚಿಗೊಂದು ದಾರಿ ಮಾಡಿಕೊಟ್ಟ ತಾತಪ್ಪ ಅವಳನ್ನು ಸ್ವಾವಲಂಬಿಯನ್ನಾಗಿ ಮಾಡಿದ. ಪದ್ಮಾವತಿಯೂ ತನ್ನ ಹೆರಿಗೆಗ ಬೇಕೆಂದು ಕುರುಳುಗಳನ್ನೂ ಸಿಲ್ಲಕು ಮಾಡತೊಡಗಿದಳು. ಮನೆಯ ವೆಚ್ಚವನ್ನು ಸಾಗಿಸುವಳು. ತಾತಪ್ಪನನ್ನು ಕೃತಜ್ಞತೆಯಿಂದ ಕಾಣುವಳು. ತಿನ್ನುಣ್ಣಲು ಚನ್ನಾಗಿಯೇ ಮಾಡಿ ಹಾಕುವಳು. ತಾನು ತಿನ್ನದಿದ್ದರೂ ಇಲ್ಲ. ದಿನಾಲು ನುಚ್ಚಿನಲ್ಲಿ ಅವನಿಗೆ ಹಾಲು ಬೆಲ್ಲ ಹಾಕುವಳು. ಒಂದೆರಡು ಸಲ ಬೆಣ್ಣೆಯನ್ನು ಮಾರಿದ ರೊಕ್ಕವನ್ನೂ ಅವನ ಕೈಯಲ್ಲಿ ಕೊಡಹೋದಳು. ತಾತಪ್ಪ ಅವುಗಳನ್ನು ತಕ್ಕೊಳ್ಳದೆ ಹೇಳಿದ,—

“ ನನಗೇನ ನೀ ಕೊಡಲಿಕ್ಕೆ ಹೋಗಬೇಡ. ನಿನ್ನ ಮನೆ ಸಾಗಿದರೆ ಸಾಕು ” ಅಷ್ಟಕ್ಕೇ ಅವಳು ಸುಮ್ಮನಾದಳು. ಮುಂದೆ ಆಪತ್ಕಾಲದಲ್ಲಿ ಬೇಕೆಂದು ಕೈಯಲ್ಲಿ ಸ್ವಲ್ಪ ಹಣವನ್ನೂ ಮಾಡಿಕೊಳ್ಳುವ ಹಂಬಲ ಇಟ್ಟಳು. ಹೀಗೆ ಅವಳ ಸಂಸಾರ ರಥ ನಾಗಿದ್ದಿತು. ಆದರೆ ಇದು ಗಂಗವ್ವನ ಮನಸ್ಸಿಗೆ ಬರಲಿಲ್ಲ. ತಾತಪ್ಪ ಇನ್ನೂರು ರೂಪಾಯಿ ಕೊಟ್ಟು ಸೋದರ ಸೊಸೆಗೆ ಎಮ್ಮೆ ಕೊಂಡು ಕೊಟ್ಟದು ಅವಳಿಗೆ ಸಹಿಸಲಿಕ್ಕಾಗಲಿಲ್ಲ. ಸರತಿಗೊಮ್ಮೆ ತಾತಪ್ಪನಿಗೆ ಹಂಗಿಸತೊಡಗಿದಳು.

“ ಹೈನ ಇಲ್ಲದ ಬೇಸಿಗೆಯಲ್ಲ ಕಳೆದೆವು. ಆಗ ಎಮ್ಮೆ ಇಲ್ಲ ಆಯ್ತು ನಮಗ. ”

“ ಯಾರ ಆದರೂ ತಮ್ಮ ಕಳ್ಳಬಳ್ಳಿ ನೋಡುವವರು. ”

" ಈಗ ಹಾಲ ತಿನ್ನಲಿಕ್ಕೆ ಎಂಥ ಚಲೋ ಎಮ್ಮೆ ತಂದ ಕೊಟ್ಟೆ ನೋಡು ಪದ್ಮಾವತಿಗೆ. ಸುಂದರಿ ಮೈಯೊಳಗ ಸಿಪ್ಪಿ ರಕ್ತ ಇಲ್ಲ. ಅದರ ಚಿಂತಿ ಏನ ಆದ ಏನು ಅವರಿಗೆ ? "

ಈ ರೀತಿಯ ಮಾತುಗಳಿಗೆ ತಾತಪ್ಪ ಸೊಪ್ಪು ಹಾಕಲಿಲ್ಲ. ಹಾಗೆಯೇ ಸಂಸಾರ ಸಾಗಿತ್ತು. ಇವುಗಳನ್ನು ಪದ್ಮಾವತಿಯು ಮುಂದೆಯೂ ಆತ ಹೇಳುತ್ತಿರಲಿಲ್ಲ.

ಒಂದು ದಿನ ಸಾಲೆಯ ಮಾಸ್ತರರು ಊರಲ್ಲಿ ಹುಡುಗರನ್ನು ಕೂಡಿಸುತ್ತ ತಿರುಗುತ್ತಿದ್ದರು ಸಾಲೆಯಲ್ಲಿರುವ ಶಿಕ್ಷಕರ ಸಂಖ್ಯೆಗೂ ಹುಡಗರ ಸಂಖ್ಯೆಗೂ ಮೇಳವಿರಲಿಲ್ಲ. ಅದಕ್ಕಾಗಿ ಆದಪ್ಪ ಮಾಸ್ತರರು ಬಾಬಣ್ಣನ ಮನೆಗೆ ಬಂದರು. ಪದ್ಮಾವತಿಯ ಹಿರಿಯ ಹುಡುಗನಿಗೆ ಪಂಚಮಿಗೆ ಆರು ವರ್ಷ ತುಂಬಿದುವೆಂಬುದು ಅವರಿಗೆ ಗೊತ್ತಿತ್ತು. ಬಾಬಣ್ಣನಂತೂ ಓದು ಬರಹ ಕಲಿಯಲಿಲ್ಲ. ಹಾಳೂ ಆಗಿ ಹೋದ ಅವನ ಮಕ್ಕಳಾದರೂ ಕಲಿತು ಜಾಣರಾಗಲಿ, ಮುಂದೆ ಬರಲಿ, ಎಂದು ಆದಪ್ಪ ಮಾಸ್ತರರ ಬಯಕೆ. ಅದಕ್ಕೆಂದೇ ಬುದ್ಧಿಪೂರ್ವಕ ಪದ್ಮಾವತಿಯ ಹತ್ತರ ಬಂದರು. ಜೊತೆಗೆ ಇನ್ನೊಬ್ಬ ಮಾಸ್ತರರೂ ಇದ್ದರು.

ಬಹಳ ದಿವಸಕ್ಕೆ ಆದಪ್ಪ—ಚಂದ್ರವ್ವನ ಮಗ—ಮಾಸ್ತರರು ತಮ್ಮ ಮನೆಗೆ ಬಂದುದರಿಂದ ಪದ್ಮಾವತಿ ಹಿರಿಹಿರಿ ಹಿಗ್ಗಿದಳು. ಅವರ ಉಪಕಾರ ತನ್ನ ಮೇಲೆ ಸಾವಿರ, ತಂದೇನಿದೆ ಎಂದು ವಿಚಾರಿಸಿದಳು. ಕೂಡಲೆ ಎಮ್ಮೆಯನ್ನು ಹಿಂಡಿ, ಇಬ್ಬರೂ ಮಾಸ್ತರರಿಗೂ ಎರಡು ಕಪ್ಪು ಹಾಲು ಕುಡಿಯಲು ಕೊಟ್ಟಳು. ಆದಪ್ಪ ಹಾಲನ್ನು ತಕ್ಕೊಳ್ಳುವ ಮುಂಚೆ ನುಡಿದ,—

" ನಿನ್ನ ಮಗನನ್ನು ಸಾಲಿಗೆ ಕಳಿಸೆಂದರೆ ಹಾಲು ಕುಡಿದಂತಾಯ್ತು!"

" ನಿಮ್ಮ ಮನಸಿಗೆ ಬಂದರೆ ಕರಕೊಂಡ ಹೋಗಿರಲ್ಲ! "

ಇಷ್ಟು ಬೇಗ ಪದ್ಮಾವತಿ ಒಪ್ಪಿದಳಲ್ಲ ಎಂದು ಇನ್ನೊಬ್ಬ ಮಾಸ್ತರರು ತುಂಬ ಸಂತೋಷಬಟ್ಟರು. ಆದರೆ ಆದಪ್ಪ ಮಾಸ್ತರರಿಗೆ ಸಂತಸವಿಲ್ಲ. ಮೆಲ್ಲಗೆ ಮಾತು ಮುಂದುವರಿಸಿದರು.

" ನಿನಗೇನ ಮನೆಯೊಳಗ ತೊಂದರೆ ಆಗುವದಿಲ್ಲವಲ್ಲ ? "

" ಸಣ್ಣ ಹುಡುಗ ಇಗೇನ ಮಾಡತಾನೆ ? "

ಇನ್ನೊಬ್ಬ ಮಾಸ್ತರರೇ ಉತ್ತರ ಕೊಟ್ಟರು. ಅದನ್ನು ಕೇಳಿ ಪದ್ಮಾವತಿ ಅಂದಳು,—

" ಅವನೇ ನಮ್ಮ ಹೊಟ್ಟೆಗೆ ಹಾಕತಾನರೀ ಈಗ. ಅವನನ್ನೇ ನೀವು ಸಾಲೆಗೆ ಕರಕೊಂಡ ಹೋದರೆ ನಾವೇನ ಮಾಡೋಣ? ಸಂಜೆಯ ತನಕ ಎಮ್ಮೆ ತಿರಗಾಡಿಸಿಕೊಂಡ ಬರತಾನಂತೇ ನಾಲ್ಕೆಂಟ ಮಾಪು ಹಾಲ ಕೊಡತದ ಎಮ್ಮೆ ಇಲ್ಲಾದರೆ ನಾಳೆ ನಮ್ಮ ತಂಬಿಗೆ ಒಣಗಿದ್ದೆಂದೇ ತಿಳೀಬೇಕು."

ಪದ್ಮಾವತಿಯ ಮಾತು ಕೇಳಿ ಎಂಥ ಶಿಕ್ಷಣಪ್ರಿಯ ಆದಪ್ಪ ಮಾಸ್ತರರೂ ಸುಮ್ಮನೆ ಹೋಗಬೇಕಾಯಿತು. ಅವಳಿಗೇನೂ ಉತ್ತರ ಕೊಡಲಿಲ್ಲ. ಅವಳ ಜೀವನಕ್ಕೆ ಬೇರೆ ದಾರಿಯಿಲ್ಲವೆಂಬುದನ್ನು ಅವರು ಬಲ್ಲರು. ಅಂತಲೇ ಜೊತೆಯ ಶಿಕ್ಷಕರಿಗೆ ಅಂದರು,

" ಮೊದಲ ಹೊಟ್ಟೆ ತುಂಬಿದ ಮೇಲೇ ಅಕ್ಷರ ಜ್ಞಾನವಲ್ಲ ? "

ಹೌದೆಂದು ಅವರೂ ಹಾಲು ಕುಡಿದೆದ್ದರು. ಶಿಕ್ಷಕರಿಬ್ಬರಿಗೂ ಈ ಸಮಸ್ಯೆಯನ್ನು ಹೇಗೆ ಬಗೆಹರಿಸಬೇಕೆಂಬುದು ಹೊಳೆಯಲಿಲ್ಲ. ಪಾಪ ಪದ್ಮಾವತಿಗೆ ಹೇಗೆ ಹೊಳೆಯಬೇಕು? ಮನಸ್ಸೇನೋ ಮಂದಿಯ ಮಕ್ಕಳಂತೆ ತನ್ನ ಮಗನೂ ಸಾಲೆ ಕಲಿಯಬೇಕೆಂದು ಹಾತೊರೆಯುವುದು. ಅದಕ್ಕೆ ಉಪಾಯವೇನು ?

ಮುಂದೆ ತುಸು ದಿನಗಳಲ್ಲಿಯೇ ಬಾಳವ್ವ ತವರುಮನೆಗೆ ಬಂದಳು. ಈಗ ಅವಳು ತವರುಮನೆಯಲ್ಲಿ ನಾಲ್ಕು ದಿನ ಸುಖದಿಂದ ಕಳೆದು ಹೋಗಬೇಕೆಂದೇನೂ ಬಂದಿರಲಿಲ್ಲ. ತಮ್ಮ ಎಲ್ಲಿ ಹೋಗಿರುವನು? ಇನ್ನೂ ಅವನು ಮನೆಗೆ ಬಂದನೋ ಇಲ್ಲವೋ ? ಎಂಬುದನ್ನು ವಿಚಾರಿಸಿಕೊಂಡು ಹೋಗಲಿಕ್ಕೆ ಬಂದಿದ್ದಳು. ಸಂಗಡ ಹುಡುಗನನ್ನೂ ತಂದಿರಲಿಲ್ಲ. ಅದನ್ನು ನೋಡಿ ಪದ್ಮಾವತಿ ಮೊದಲು ಕೇಳಿದಳು. ಅತ್ತಿಗೆಯ ಸ್ವಾಗತದ ಪಲ್ಲವಿಯೇ ಅದು

" ಅಯ್ಯ, ಹುಡುಗನನ್ನ ಯಾಕ ಬಿಟ್ಟ ಬಂದಿಯೇ ? ಬಹಳ ದಿನ ಆಗಿತ್ತು, ನನಗ ನೋಡುವ ಹಾಗಾಗಿತ್ತು. "

" ಎಲ್ಲಿ ಬೆನ್ನ ಹಚ್ಚಿಕೊಂಡ ಬರಲಿ ಅಂತ ತರಲಿಲ್ಲ ತಾಯಿ ! "

ಎಂದು ಮಾತು ಮುಗಿಸಿದಳು. ಆ ಮೇಲೆ ಬಾಬಣ್ಣ ಹೋದ ವಿಷಯ ವನ್ನೂ ಆಗ ನಡೆದ ಸಂಗತಿಗಳನ್ನೂ ನಾದಿನಿಯಿಂದ ಎಲ್ಲ ಕೇಳಿಕೊಂಡಳು. ಪದ್ಮಾವತಿಯ ಸ್ಥಿತಿಯನ್ನು ಕಂಡು ಮರುಗಿದಳು ತಮ್ಮನಿಗಾಗಿ ಕಣ್ಣೀರು ಸುರಿಸಿದಳು. ಪದ್ಮಾವತಿಯ ದುಃಖದಲ್ಲಿ ಸಮಭಾಗಿಯಾದಳು. ಕೊನೆಗೆ ಬಾಬಣ್ಣನ ಮೇಲೆ ಸಿಟ್ಟಾಗಿ ಎರಡು ಬಿರುನುಡಿಗಳನ್ನಾಡಿದಳು.

ಒಂದೆರಡು ತಾಸುಗಳು ಕಳೆದವು. ದುಃಖದ ಭರತಿ ಇಳಿಯುತ್ತ ಬಂತು. ಭಾವನೆಯ ಆವೇಗ ಕಡಿಮೆಯಾಯಿತು. ಅತ್ತಿಗೆ ನಾದಿನಿಯರ ಕಣ್ಣೀರ ಹಳ್ಳ ಬತ್ತಿತು. ಆಮೇಲೆ ಪದ್ಮಾವತಿ ಮೆಲ್ಲನೆ ಕೇಳಿದಳು,—

" ನಿನ್ನಲ್ಲೆ ಒಂದ ದಿವಸ ಇದ್ದರು ? "

" ಹರಿಹೊತ್ತು ಬಂದ. ಕೈಯಲ್ಲಿ ದೋತರ ಇಲ್ಲ, ಏನಿಲ್ಲ, ಹಾಗೇ ಬಂದಿದ್ದ. ನೋಡಿ ಆಶ್ಚರ್ಯ ಆಯಿತು ನನಗ. ' ಯಾವ ಕಡೆಯಿಂದ ಬಂದಿಯೋ ಬಾಬು ? ' ಅಂತ ಕೇಳಿದೆ. ಏನೋ ಸುತ್ತಾಡಿ ಊರಿಂದ ಬಂದೆ ಅಂತ ಹೇಳಿದ. ಆದರ ನಾನೂ ಹೆಚ್ಚಿಗೆ ಗಟ್ಟಿಗೆ ಹಚ್ಚಿ ಕೇಳಲಿಲ್ಲ. ಅಕ್ಕನ ಮನೆಗೆ ಬಂದರೆ ಇಲ್ಲದ್ದೊಂದ ಹಚ್ಚತಾಳ ಅಂದಾನಂತ ಸುಮ್ನ ಆದೆ. ಅನ್ನಾ ಶ್ಯಾವಿಗೆ ಊಟಕ್ಕ ಮಾಡಿದೆ. ಆದರೂ ನೆಟ್ಟಗ ಉಣಲಿಲ್ಲ. ".

" ಆಗ ಊಟದ ಕಡೆಗೆ ಎಲ್ಲಿ ಚಿತ್ತ ಇರಬೇಕವರದು ? ಇಲ್ಲಿ ಅದೇ ದಿನ ಹೊಲ ಖರೀದಿ ಕೊಟ್ಟು ಬಂದಿದ್ದರು. " ಪದ್ಮಾವತಿ ನಡುವೆ ಅಂದಳು.

ಬಾಳವ್ವ ಮುಂದೆ ಹೇಳ ತೊಡಗಿದಳು:

" ನೋಡಿದರೆ ಅಂದ ಹುಚ್ಚನಂತೆ ಕಾಣತಿದ್ದ ಬಾಬು. ಕಣ್ಣ ಕೆಂಪಗೆ, ಮುಖ ಎತ್ತರ, ಸುತ್ತೆಲ್ಲ ಟಕಮಕ ನೋಡತಿದ್ದ. ಉಂಡ ಮಲಗಿದವ ಆ ದಿನ ಹೊತ್ತ ಹೊರಳುವ ತನಕ ಮಲಗೇ ಬಿಟ್ಟ. ದಣಿದ ಬಂದಿದಾನ ಮಲ ಕೊಳ್ಳಲಿ ಬಿಡು, ಅಂತ ಅವರೂ ಅಂದರು. ನಾನೂ ಸುಮ್ಮನಾದೆ. ಸಂಜೆ, ಇನ್ನೂ ಕೈಮಾರ ಹೊತ್ತ ಇತ್ತು, ದಿಗ್ಗನೆ ಎದ್ದ. ನಾ ಹೋಗ್ತೇನಿ ಅಂತ ನಿಂತ. ಬೇಡ ಅಂದರೂ ಕೇಳಲಿಲ್ಲ. ಹುಡುಗನ ಕೈಯೊಳಗ ಐದು ರೂಪಾ ಯಿಯ ನೋಟೊಂದನ್ನ ಕೊಡಲಿಕ್ಕೆ ಬಂದ. ಬೇಡ ಬೇಡ ಅಂದೆ. ಕಣ್ಣೊ ಳಗ ನೀರ ತಂದ. ಕೊಡಲಿ ಅಂದಕೊಂಡ ಹಿಂದ ಸರಿದೆ. ಅಂದ ಹೋದವನ ತಿರುಗಿ ಬರಲಿಲ್ಲ ನೋಡವ್ವ ! "

ಎಂದು ಹೇಳಿ ಬಾಳವ್ವ ಕಣ್ಣೀರು ತಂದಳು. ಪದ್ಮಾವತಿಯೂ ಅಳ ಹತ್ತಿದಳು. ಹೀಗೆ ತಮ್ಮನ ಕತೆಯನ್ನು ಬಂದು ಹೋದವರ ಮುಂದೆ ಮೂರು ನಾಲ್ಕು ದಿನ ಹೇಳುತ್ತಲೇ ಇದ್ದಳು ಪದ್ಮಾವತಿ ದುಃಖದವಳೆಂದು ತಾನೇ ಮನೆ ಕೆಲಸವನ್ನೆಲ್ಲ ಮಾಡುತ್ತಿದ್ದಳು. ಗಂಡ ಹೋದಂದಿನಿಂದ ನಾದಿನಿ ನೀರನ್ನೇ ಎರೆದುಕೊಂಡಿಲ್ಲವೆಂದು ಒಂದು ದಿನ ಸಂಜೆಗೆ ಹಂಡೆ ತುಂಬ ನೀರನ್ನು ಕಾಯಿಸಿ ಬಡಬಡ ಎರೆದಳು. ತನ್ನ ಕೈಯಿಂದಲೇ ಸ್ವತಃ ಒಂದು ಬಟ್ಟಲ ಎಣ್ಣೆಯನ್ನು ಅವಳ ತಲೆಗೆ ಉಣಿಸಿದಳು. ಮರುದಿವಸ ಪದ್ಮಾವತಿಯೂ ಅತ್ತಿಗೆಗೆ ನೀರೆರೆಯಲು ಆಗ್ರಹ ಮಾಡಿದಳು. ಅವಳು ಒಲ್ಲೆನೆಂದರೂ ಕೇಳದೆ ಎರೆದಳು. ಮಕ್ಕಳಿಗೂ ನೀರು ಹಾಕಿದರು. ಇನ್ನು ಸ್ವಲ್ಪ ದಿನಗಳಲ್ಲಿಯೇ ಬಂದ ಹೆರಿಗೆಯ ಬಗ್ಗೆಯೂ ಇಬ್ಬರಲ್ಲೂ ಮಾತುಕತೆಗಳಾದುವು. " ಬಾಳವ್ವ ತಮ್ಮ ಅತ್ತೆಯನ್ನು ಕೇಳಿ ಎಂಟು ದಿನ ಬಂದು ನಿಂತು ಮಾಡಿ ಹೋಗುವೆನೆಂದಳು. ಪದ್ಮಾವತಿಯು ಇಲ್ಲೇ ಚಂದ್ರವ್ವನ ಕಡೆಯಿಂದ ಮಾಡಿಸಿಕೊಳ್ಳುವದಾಗಿಯೂ ತಿಳಿಸಿದಳು. ಅವಳಿಗೆ ಈ ಹೆರಿಗೆ ಎಂದರೆ ಅಶುಭ ಸೂಚಕವೆನಿಸಿದ್ದಿತು. ಹೊಟ್ಟೆಯಲ್ಲಿ ಇರುವ ಕೂಸು ತನ್ನ ಗಂಡನನ್ನು ನಾಡ ಮೇಲೆ ಕಳಿಸಲಿಕ್ಕೆಂದೇ ಮೂಡಿತಲ್ಲ ಎಂದು ಭಾವಿಸಿದ್ದಳು. ಹುಟ್ಟುವ ಕೂಸಿನ ಬಗ್ಗೆ ಅವಳಲ್ಲಿ ಸಹಾನುಭೂತಿಯೂ ಕಡಿಮೆ ಆಗಿತ್ತು.

ಬಾಳವ್ವ ಹೊರಡುವ ದಿನ ಪದ್ಮಾವತಿಯು ಅತ್ತಿಗೆಗೆ ಕುಪ್ಪಸ ಮಾಡಿಕೊಳ್ಳಲಿಕ್ಕೆಂದು ಎರಡು ರೂಪಾಯಿಗಳನ್ನು ಕೊಡಹೋದಳು.

" ಇಂಥ ಇದರೊಳಗ ನನಗ ಕುಪ್ಪಸ ಗಿಪ್ಪಸ ಏನೂ ಬೇಡ " ಎಂದಳು ಬಾಳವ್ವ.

" ಇರಲಿ ತಗೋ. ತವರಿಗೆ ಬಂದ ಬರಿಗೈಯಿಂದ ಹೋಗುವಿ ಏನು?"

" ಬರಿಗೈಯಿಂದ ಬಂದೆ ಅಂತ ನನ್ನ ಯಾರ ಕೇಳತಾರ ತಗೋ. "

" ಯಾರ ಕೇಳದಿದ್ದರ ಏನಾತು ? ನಮ್ಮ ಆತ್ಮಾರೇ ಅನ್ನತಾವಲ್ಲ !" ಎಂದು ಆಗ್ರಹ ಮಾಡಿದಳು ಪದ್ಮಾವತಿ.

ನಾದಿನಿಯ ಮನಸ್ಸು ನೋಯಿಸಬಾರದೆಂದು ಬಾಳವ್ವ ಆ ಎರಡು ರೂಪಾಯಿಗಳನ್ನು ತಕ್ಕೊಳ್ಳುತ್ತ ಕೇಳಿದಳು,

" ಎಲ್ಲಿಂದ ತಂದೆ ಇವನ್ನ ? "

" ಚಾರ ಚೂರ ಬೆಣ್ಣೆ ಹಾಕಿದುವು ಮಾಡಿದುವು ಇರತಾವಲ್ಲ."

" ಹಾಲಿನ ರತೀಪ ಬೇರೆ ಹಚ್ಚಿರುವಿ ಏನೋ ? "

" ಹೌದ, ಒಪ್ಪತ್ತಿನದು ಎಲ್ಲಾನೂ ಹಾಕತೇನಿ."

" ಹುಡುಗರ ಬಾಯ ಮೇಲೆ ಹೊಡದ ಎಲ್ಲಾನೂ ಮಾರ ಬೇಡ ತಾಯಿ ! ತಿಂದ ಉಂಡ ದೊಡ್ಡವರ ಆಗಲಿ ಮಕ್ಕಳ. ಬಾಬು ಇಲ್ಲಂತ ನಾಲ್ಕ ಹುಂದಿಯೊಳಗ ನೋರೆ ಒಣಗಿಸಿಕೊಂಡ ತಿರಗಾಡೋದ ಬೇಡ."

" ಅವರಿಗೇನ ಕಡಿಮೆ ಮಾಡಿಲ್ಲ ಬಾಳವ್ವಕ್ಕ. ಕೇಳಬೇಕಾದರ ನಿನ್ನ ಅಳಿಯನ್ನ." ಎಂದು ಪದ್ಮಾವತಿ ಮಗನ ಸಾಕ್ಷಿಕೊಟ್ಟು ಹೇಳಿದಳು.

ಬಾಳವ್ವ ಊರಿಗೆ ಹೊರಡುವ ದಿನ ತಾತಪ್ಪನಿಗೂ ಒಂದು ಮಾತು ಸಹಜ ಅಂದಳು :

" ಎಲ್ಲಿ ಹೋಗಿರಬೇಕು ಬಾಬು ? "

" ಏನೋ ಕಣ್ಣು ಕಟ್ಟಿದಂತೇನೇ ಆಗಿದೆ ನೋಡವ್ವ ! "

" ಎಲ್ಲಿಯಾದರೂ ಹುಡುಕಿಸಬಾರದೇನು ? ಅದೂ ಒಂದ ಕೂರಿಗೆ ಹೊಲಾ ಹೋಗಲಿ. ನನ್ನ ತಮ್ಮ ಮನೆಗೆ ಬರಲಿ ಅನ್ನತೇನ ನಾ. "

" ಎರಡನೆಯವರ ಕೈಯಿಂದ ಹುಡುಕಿಸಲಿಕ್ಕೇನು ? ನಾನೇ ಹನ್ನೆರಡ ಸಂತಿ ತಿರಗತೇನ. ಸಾವಿರ ಜನರ ಮುಂದ ಹೇಳಿದೇನೆ. ಆದರೂ ಎಲ್ಲಿ ಪತ್ತೆ ಹತ್ತವಲ್ಲದು. ಸ್ವಲ್ಪ ಎಳೆ ಸಿಕ್ಕರ ಸಾಕು ಹೋಗಿ ಕರಕೊಂಡ ಬರತೇನ. ಆಮೇಲೆ ನೋಡೋದ ಅದ ಈ ಗೌಡ, ಕಲ್ಲಪ್ಪ ಎಂಥವರಿದ್ದಾರ ಅಂಬೂದು. ಬಾಬು ಇಲ್ಲದಕ್ಕ ನಾ ಹರಳ ಹೋದ ಗೆಜ್ಜಿ ಹಾಗೆ ಆಗಿದೇನಿ. ಏನ ಮಾಡೋದ ಅದ. ಶ್ರೀಮಂಧರ ಪಂಡಿತನನ್ನೂ ಕೇಳಿ ಬಂದೆ. ಅವನ ಜೀವಕ್ಕ ಏನೂ ಆಗಿಲ್ಲ, ಇಂದಿಲ್ಲ ನಾಳೆ ತಾನೇ ಬರತಾನ ಎಂದು ಹೇಳಿದಾನ." ಎಂದು ತಾತಪ್ಪ ವಿವರಿಸಿದ.

ಈ ಮಾತನ್ನು ಕೇಳಿ ಪದ್ಮಾವತಿಯ ಮನಸ್ಸಿನಲ್ಲಿ ಮಾವನ ವಿಷಯಕ್ಕಿದ್ದ ಆದರ ಇಮ್ಮಡಿಸಿತು. ತಾನೇ ಹೋಗಿ ಪಂಡಿತನನ್ನೊಮ್ಮೆ ಕೇಳಿ ಬರಬೇಕೆಂದು ಯೋಚಿಸಿದ್ದಳು. ತಾತಪ್ಪ ಈ ಮೊದಲೇ ಕೇಳಿ ಬಂದುದಕ್ಕೆ ಅವಳಿಗೆ ಆನಂದವಾಯಿತು. ಜನ ಏನಂದೀತೋ ಎಂದು ಸಂಕೋಚಪಟ್ಟುಕೊಳ್ಳುವ ಅವಳಿಗೆ ತಾನಾಗಿಯೇ ಒಂದು ಸಮಸ್ಯೆ ಬಗೆ ಹರಿದಂತಾಯಿತು.

ತುಂಬಿದ ಬಸಿರೆಯಾದರೂ ಪದ್ಮಾವತಿ ಮಕ್ಕಳನ್ನು ಕರೆದುಕೊಂಡು, ಎಮ್ಮೆಯನ್ನು ಹೊಡೆದುಕೊಂಡು ಹೊಲಕ್ಕೆ ಹೋಗುವಳು. ಸಂಜೆಯ ವರೆಗೆ ಅಲ್ಲಿಯೇ ಕಳೆಯುವಳು. ಹೊಲದಲ್ಲಿಯ ಬೆಳೆಯನ್ನು ಕಂಡು ಹಿರಿ ಹಿರಿ ಹಿಗ್ಗುವಳು. 'ಬೆಳೆ ಬಂತು, ತಿನ್ನುವವರು ಇಲ್ಲವಾದರಲ್ಲ' ಎಂದು ಮರುಗುವಳು. ಕಣ್ಣೀರು ತರುವಳು. ಸುತ್ತಲೂ ಜೋಳದ ಪೈರು ಕಾಳು ತುಂಬಿ, ಸೀತನಿ ಮೀರಿ ನಿಂತಿದೆ. ಭೂದೇವಿ ಮುತ್ತಿನ ದಂಡಿ ಮುಡಿದಿರುವಳೇನೋ ಅನ್ನುವಂತೆ ಭಾಸವಾಗುವದು. ಹಸಿರೆಲೆ ಹಣ್ಣಾಗತೊಡಗಿವೆ ಅವು ಅವಳ ಮೈಗೆ ಬಳಿದ ಅರಸಿಣದಂತೆ ತೋರುವವು. ಈ ಎಲ್ಲ ನೋಟ ಒಂದು ಕ್ಷಣ ಪದ್ಮಾವತಿಯ ಮನಸ್ಸನ್ನು ಭಾರಗೊಳಿಸುವವು. ತಾನು ಬಾಬಣ್ಣನಿದ್ದಾಗ —ಮೊದಲು ಬಸಿರಿದ್ದಾಗ—ಈ ಹೊಲದಲ್ಲಿ ಕಳೆದ ದಿನಗಳೆಲ್ಲ ಅವಳ ಸ್ಮೃತಿ ಪಟದಲ್ಲಿ ಸಳಿದು ಮಾಯವಾಗುವವು. ದುಃಖವನ್ನು ಉಂಟುಮಾಡುವವು. ಮರುಕ್ಷಣದಲ್ಲಿ ಬಂದಾರಲ್ಲ ಇಂದಿಲ್ಲ ನಾಳೆ, ಎಲ್ಲಿ ಹೋಗುವರು? ಜೀವದಿಂದ ಇದ್ದರೆ ಸಾಕು. ಸುಖದ ನಂತರ ದುಃಖ, ದುಃಖದ ನಂತರ ಸುಖ ಹೀಗೆ ಬರತಕ್ಕುವೇ. ನಮ್ಮಂಥವರದೇನು ? ಈ ಭೂಮಿತಾಯಿಗೂ ಈ ಪಾಡು ಬಿಟ್ಟಿಲ್ಲ ಈಗ ಬೆಳೆಯ ಆಭರಣಗಳನ್ನಿಟ್ಟುಕೊಂಡು ಕುಲು ಕುಲು ನಗುತ್ತಿರುವಳು. ನಾಳೆ ಕೊಯ್ಲಾದ ಮೇಲೆ ಬೇಸಿಗೆಯಲ್ಲಿ ಬಣಬಣ ಕೂಡುವಳು. ಮುಂದೆ ಮತ್ತೆ ಮಳೆಗಾಲ ಬರುವದಿಲ್ಲವೇ ? ಆಗ ಮತ್ತೆ ಹಸುರುಡಿ ತುಂಬಿಕೊಂಡು ಸಂತಸಪಡುವುದು ಇದ್ದೇ ಇರುವುದಲ್ಲ.—ಎಂದು ಲೆಕ್ಕ ಹಾಕುವಳು ಪದ್ಮಾವತಿ.

ಅವಳ ಹೆರಿಗೆಯ ದಿನಗಳು ತೀರ ಸಮೀಪಿಸಿದುವು. ತನಗೆ ಬೇಕಾಗುವ ಎಲ್ಲ ಸಾಮಾನುಗಳ ವ್ಯವಸ್ಥೆಯನ್ನು ಮಾಡಿಟ್ಟುಕೊಂಡಳು. ಔಡಲ ಎಣ್ಣೆಯನ್ನು ತಂದಿಟ್ಟಳು. ಕೊಬ್ಬರಿ ಎಣ್ಣೆಯನ್ನು ತರಿಸಿಕೊಂಡಳು. ಒಡಕು ಕೊಪ್ಪರಿಗೆಯೊಂದನ್ನು ತಂದು ಕುಬಟಿಗೆಗೆ ಸಿದ್ಧಪಡಿಸಿದಳು ಆಮೇಲೆ ಚಂದ್ರವ್ವನ ಮನೆಗೆ ಹೋಗಿ ಎಂಟು ದಿನ ತಮ್ಮಲ್ಲಿಯೇ ಬಂದು ನಿಂತು ಹೆರಿಗೆ ಮಾಡಿ ಹೋಗುವಂತೆ ವಿನಂತಿ ಮಾಡಿಕೊಂಡಳು. ಸುಗ್ಗಿಯ ದಿನಗಳು. ಬಾಳವ್ವನನ್ನು ಕರೆಯಿಸಿ ಅವಳಿಗೆ ಕಷ್ಟ ಕೊಡುವುದು ಬೇಡ. ತಾನು ಕರೆದ ಮೇಲೆ ಅವಳಿಗೆ ಅತ್ತ ಹೊಳೆ ಇತ್ತ ದರಿ ಆಗುವುದು. ಅತ್ತೆಯ

ಮನೆಯ ಸೊಸೆಗೆ ಈ ತೊಡಕನ್ನು ಯಾಕೆ ಹಾಕಬೇಕು ? ಹೋದ ಹೆರಿಗೆ ಯನ್ನು ತಾಯಿ ಬಂದು ಮಾಡಿ ಹೋಗಿದ್ದಳು. ಈ ಸಲ ಅವಳು ದೇವರ ಮನೆಯ ಹಾದೀ ಹಿಡಿದು ಹೋಗಿದ್ದಳು. ಇನ್ನಾರಿದ್ದಾರೆ ಮಾಡಲಿಕ್ಕೆ ಎಂದು ಯೋಚಿಸಿ ಯೋಚಿಸಿಯೇ ಚಂದ್ರವ್ವನಿಗೆ ಸೂಚಿಸಿದ್ದಳು. ಆದರೆ ಅವಳಿಗೆ ಇನ್ನೂ ಒಂದು ಹೆದರಿಕೆ ಇತ್ತು. ತಾತಪ್ಪ ಎಲ್ಲಿ ಗಂಗವ್ವನನ್ನು ಕಳಿಸುವೆನೆನ್ನುವನೋ ಏನೋ ಎಂದು. ಅದಕ್ಕಾಗಿ ಚಂದ್ರವ್ವನ ವಿಚಾರ ಅವನ ಮುಂದೆ ಎತ್ತಿರಲಿಲ್ಲ. ಯಾವುದಕ್ಕಾಗಿಯೂ ಒಂದು ಎಳ್ಳಷ್ಟು ತಾತಪ್ಪನ ಮನಸ್ಸು ನೋಯಬಾರದೆಂದು ಅವಳು ಎಚ್ಚರಿಕೆ ವಹಿಸುತ್ತಿದ್ದಳು. ಅವನು ಗಂಗವ್ವನ ಮನೆಯಲ್ಲಿಯೇ ಹೋಗಿ ಹೆತ್ತು ಬಾ, ಎಂದಿದ್ದರೆ ಅದಕ್ಕೂ ಹಿಂದೆ ಮುಂದೆ ನೋಡುತ್ತಿರಲಿಲ್ಲ ಆಕೆ. ಆದರೆ ತಾನಾಗಿಯೇ ಗಂಗವ್ವನನ್ನು ಕರೆಯಲು ಒಲ್ಲಳು. ಅವರ ಸಂಬಂಧ ಬೆಳಿಸಲು ಮನಸ್ಸು ಮಾಡಳು.

ತಾತಪ್ಪ ಸೊಸೆಯ ಈ ವೃತ್ತಿಯನ್ನು ಬಲ್ಲವನಿದ್ದ. ಅದಕ್ಕಾಗಿ ಅವನೂ ಈ ವಿಷಯದಲ್ಲಿ ಕೈ ಹಾಕುತ್ತಿರಲಿಲ್ಲ. ಅವಳ ಮನಸ್ಸಿನ ತೂಗಾಟ ವನ್ನು ಕಂಡು ತಾನಾಗಿಯೇ ಕೇಳಿದ,—

" ದಿನಗಳು ತುಂಬಿದವು. ಯಾರನ್ನ ಕರೆಸ ಅನ್ನುವಿ ಪದ್ಮಾವತಿ ? ಗಂಡಸರು ನಾವು. ಇದರಲ್ಲಿ ನಮಗೇನೂ ತಿಳಿಯದು. ಹೆರಿಗೆಯ ಹೊತ್ತಿನಲ್ಲಿ ಕರುಳಿನವರು ಹತ್ತರ ಇರೋದು ಒಳ್ಳೇದು. ಎಕಸಂಬಿಯಿಂದ ಯಾರಾದರೂ ಬರುವಂತೆ ಇದ್ದಾರೇನು ? ಅಣ್ಣನ ಹೆಂಡತಿ ಆಗಲಿ ಮತ್ತ ಯಾರಾದರೆ ಆಗಲಿ? "

" ಅತ್ತಿಂದ ಯಾರೂ ಇಲ್ಲ ಬರುವವರು. "

" ಸುಮ್ನ ಬಾಳವ್ವನಿಗೇ ಹೇಳಿ ಕಳಿಸೋಣ ಏನು ? "

" ಅವರಿಗೂ ಸುಗ್ಗಿಯ ದಿವಸ. " ಪದ್ಮಾವತಿ ಅನುಮಾನಿಸಿದಳು.

" ಇದ್ದರೇನಾತು ? ನಾಲ್ಕೆಂಟ ದಿನ ಬಂದ ನಿಂತ ಮಾಡಿ ಹೋದಾಳಲ್ಲ. ಇಂತಹ ಹೊತ್ತಿನೊಳಗಲ್ಲದ ತಗೊಂಡ ಏನು ಮಾಡುವುದು ಹೆಣ್ಣ ಮಕ್ಕಳನ್ನ ? "

"ನಾಲ್ಕ ದಿವಸದ ಸಲುವಾಗಿ ಯಾತಕ್ಕ ಊರಿಂದ ಊರಿಗೆ ಹೇಳಿ ಕಳಿಸೋದು? ಇಲ್ಲೀ ಗಂಗವ್ವತ್ತಿ ಎಲ್ಲ ಇದ್ದಾರೆ, ಯಾರಾದರೂ ಮಾಡಿ ಯಾರಲ್ಲ." ಬೇಕಂತಲೇ ತಾತಪ್ಪನ ಮೇಲೆಯೇ ನಿರ್ಣಯ ಬಿಟ್ಟು ಬದಿಗಾದಳು.

ತಾತಪ್ಪ ತುಸು ಹೊತ್ತು ವಿಚಾರಿಸಿ ನುಡಿದ:—

"ಆಕೆ ಏನು ಶುದ್ಧ ಮಾಡುವಾಕೆ. ಇನ್ನೂ ಚಂದ್ರಾನ್ನ ಬೇಕಾದರೆ ಕರೆ, ನಾಲ್ಕ ದಿನ ನಿಂತ ಮಾಡತೇನಂದರೆ. ಮನಸಿಗೆ ಹಚ್ಚಿಕೊಂಡ ಮಾಡುವ ಹೆಂಗಸ ಅವಳು. ಸುಗ್ಗಿ ದಿನಾ ಅಂತ ಅನುಮಾನಿಸಿದರ ಅನುಮಾನಿಸಿದಳು. ಬೇಕಾದರೆ ಅವರಲ್ಲಿ ಅಡವಿಯೊಳಗ ದುಡಿಯಲಿಕ್ಕೆ ಒಂದ ಆಳ ಕೊಡೋಣ. ಬರತಾಳೇನ ಕೇಳ ಆಕಿನ್ನ ಇನ್ನೂ."

"ಬಂದಾಳಲ್ಲ. ಬರದೆ ಏನ ಮಾಡತಾಳೆ?"

ಎಂದು ಪದ್ಮಾವತಿ ಸುಮ್ಮನಾದಳು. ಮಾವನ ಇಷ್ಟು ಮಾತಿನ ಮೇಲಿಂದಲೇ ಪದ್ಮಾವತಿಯು ತನ್ನ ಹೆರಿಗೆಯ ವ್ಯವಸ್ಥೆಯನ್ನು ಚಂದ್ರವ್ವನನ್ನು ಕರೆಯಿಸಿ ಮಾಡಿಕೊಂಡಳು. ಈ ಸಲ ಪದ್ಮಾವತಿಯು ಹೆಣ್ಣು ಮಗುವನ್ನು ಹೆತ್ತಳು. ಮೊದಲೇ ಅವಳ ಪ್ರಕೃತಿ ಅಶಕ್ತವಾಗಿದ್ದಿತು ಹೆರಿಗೆಗೆ ತುಸು ತ್ರಾಸವಾಯಿತು. ಒಂದು ದಿನವೆಲ್ಲ ಕೂಡಬೇಕಾಯಿತು ತಾತಪ್ಪ ಓಡಾಡಿ ಊರೊಳಗಿನ ಇಬ್ಬರು ಮೂವರು ಸೂಲಗಿತ್ತಿಯರನ್ನು ಕರೆದು ತಂದ. ಗಂಗವ್ವನೂ ತಾನಾಗಿಯೇ ಮೇಲ್ವಿಚಾರಣೆಗೆ ಬಂದಳು ಚಂದ್ರವ್ವ ಹತ್ತರವೇ ಕುಳಿತು ಎಲ್ಲ ವ್ಯವಸ್ಥೆ ಮಾಡಿದಳು. ಇವರೆಲ್ಲರ ಆರೈಕೆಯಿಂದ ರಾತ್ರಿ ಹತ್ತು ಗಂಟೆಗೆ ಪದ್ಮಾವತಿ ಮಗುವಿನ ಮುಖವನ್ನು ಕಂಡಳು.

ನೀರೆರೆಯುವಾಗ ಚಂದ್ರವ್ವ ಸಹಜ ಅಂದಳು:

"ಖೋಡಿ ಎಲ್ಲೀದ ಎಲ್ಲಿಂದ ಹುಟ್ಟಿತೋ ಅಪ್ಪನ ನೆರಳ ಕಾಣದ್ದು."

"ಏಕೋ ನನ್ನ ಎಡಗಣ್ಣ ಹಾರತದನಃ ಅಬಚೀ." ಪದ್ಮಾವತಿ ಅಂದಳು.

"ಬಾಬು ಬಂದಾನ ಏನಬೇ?"

ಈಗ ಗಂಡ ಬರಲಿ, ಬರದಿರಲಿ ಪದ್ಮಾವತಿಯ ಮನಸ್ಸು ಹೆತ್ತು ಹಗುರಾಗಿದ್ದಿತು. ಸುಂದರ ಮಗುವನ್ನು ಕಂಡು ಸಂತಸಗೊಂಡಿದ್ದಿತು. ಅವಳ ಹಿಂದಿನ ಎರಡು ಮಕ್ಕಳುಗಳಿಗಿಂತ ಈ ಕೂಸು ಚಲುವ ಇದ್ದಿತು

"ಬೇಕಾದವ ಬಂದು ನಿನ್ನ ಮಗಳನ್ನ ಗಿಳಿ ಮಾವಿನಹಣ್ಣ ಕಚ್ಚಿ ಕೊಂಡ ಹೋದಂತೆ ಹೋಗತಾನ ನೋಡಬೇ."

ಗಂಗವ್ವನ ಸೌಂದರ್ಯ ದೃಷ್ಟಿ ಹೀಗೆ ನುಡಿಯಿಸಿತು.

"ದೊಡ್ಡಾಕೆ ಆಗಲಿ ತಾಯಿ! ಇನ್ನೂ ಐದ ದಿನದ ಹೂಂಸದ ಮುದ್ದಿ ಅದ." ಎಂದು ಪದ್ಮಾವತಿ ಅಂದು ಸುಮ್ಮನಾದಳು.

೧೪

ಮನೆಯಲ್ಲಿ ಒಂದು ತೆರದ ಸಂತಸ ತಾನೇ ತಾನಾಗಿ ತುಂಬಿಬಂದಿದ್ದಿತು. ಎಮ್ಮೆ ಹಾಲನ್ನು ಕರೆಯುವುದು. ಹೊಲದ ಕಾಳುಗಳು ಬಂದಿದ್ದವು. ಚಂದ್ರವ್ವ ಗಂಗವ್ವ ಸಹಕಾರ ನೀಡಿದರು. ಮೂರು ಮಕ್ಕಳಿಂದ ತುಂಬಿದ ಮನೆ ಸಂತಸದ ಸುಗ್ಗಿಯಾಗಿದ್ದಿತು. ಅದೇಕೋ ನಾಲ್ಕು ದಿನ ಪದ್ಮಾವತಿಗೂ ಮನಸ್ಸಿಗೆ ಆನಂದ. ಒಳಗಿನ ಮನಸ್ಸೊಂದು ಬಾಬಣ್ಣ ಬರಬಹುದೇನೋ ಎಂಬ ನಿರೀಕ್ಷೆಯಲಿತ್ತು.

ಮನಃಪೂರ್ವಕವಾದ ಬೇಡಿಕೆ ಯಾರದೂ ಹುಸಿ ಹೋಗುವದಿಲ್ಲ. ಒಂದು ದಿನ ಅಂಚೆಯಾಳು ಲಕ್ಕೋಟಿಯೊಂದನ್ನು ತಂದು ಕೊಟ್ಟು ಹೋದ. ಅದು ಪದ್ಮಾವತಿಯ ಹೆಸರಿಗೇ ಬಂದಿತ್ತು. ಸರಕಾರೀ ಕವರದು. ನೆರೆ ಮನೆಯ ಓದುಬಲ್ಲ ಹುಡುಗನೊಬ್ಬನನ್ನು ಕರೆಯಿಸಿ ಓದಿಸಿ ಕೇಳಿದಳು.

ಅದು ಬಾಬಣ್ಣನ ಕಾಗದ. ಮಿಲಟರಿ ಆಫೀಸರರಿಂದ ಬಂದಿತ್ತು. ಚನ್ನಾಗಿ ಇರುವ. ಇನ್ನೊಂದು ವಾರದಲ್ಲಿ ರಜೆಯ ಮೇಲೆ ಬರುವನೆಂದು ಬರೆದಿತ್ತು.

ಕಾಗದ ಓದಿಸುತ್ತಿದ್ದಾಗ ಪದ್ಮಾವತಿ ಕೂಸಿಗೆ ಮೊಲೆ ಕುಡಿಸುತ್ತಿದ್ದಳು. ಮಗುವಿನ ಬಾಯಲ್ಲಿ ಹಿಡಿಸದೆ ಹಾಲು ಹೆಚ್ಚಾಗಿ ಹೊರಗೆ ಹರಿಯುತ್ತಿದ್ದುವು. ಅವಳುಟ್ಟ ಸೀರೆಯ ನಿರಿಗೆಯನ್ನು ತೊಯ್ಯಿಸುತ್ತಿದ್ದುವು.

ಬಾಬಣ್ಣ ಊರಿಗೆ ಬರುವನೆಂಬ ಸುದ್ದಿ ಹಲವರಿಗೆ ಹಲವು ತೆರದ ಪರಿಣಾಮವನ್ನುಂಟುಮಾಡಿತು. ಪದ್ಮಾವತಿಗೆ ಗಂಡ ಮನೆಗೆ ಬರುವನೆಂದು ಸಂತಸ. ತಾತಪ್ಪನಿಗೆ ಏನಿದ್ದ ಹುಳುಕು ಹೊರಬೀಳುವದಲ್ಲ, ಎಂಬ ವಿಚಾರ. ಗಂಗವ್ವನಿಗೆ ಇನ್ನು ತನಗೂ ತಾತಪ್ಪನಿಗೂ ಎಲ್ಲಿ ಕೆಡಕುತನ ಬರುವುದೋ

ಎಂಬ ಸಂಶಯ. ಕಲ್ಲಪ್ಪನಿಗೆ ತನ್ನ ಗುಟ್ಟು ಹೊರಬೀಳುವದಲ್ಲ, ಎಂಬ ಹೆದರಿಕೆ. ಗೌಡನಿಗೆ ಇನ್ನೊಂದು ತೆರದ ಯೋಚನೆ. ಹೀಗೆ ಒಬ್ಬೊಬ್ಬರಿಗೆ ಒಂದೊಂದು ರೀತಿಯ ಆಘಾತಗಳು ಉಂಟಾದುವು.

ಹೀಗಿದ್ದೂ ಎಲ್ಲರೂ ಬಾಬಣ್ಣ ಬಂದನೇನೆಂದು ಕುತೂಹಲದಿಂದ ಕೇಳುವವರೇ. ಒಮ್ಮೆ ಆತ ಬಂದು ಬಿಟ್ಟು, ಕಲಕಿದ ವಾತಾವರಣ ಶಾಂತವಾಯಿತೆಂದರೆ ತೀರಿತೆಂದು ಕೆಲವರ ನಿರೀಕ್ಷೆ. ಅವರ ನಿರೀಕ್ಷೆ ಏನೇ ಆಗಲಿ, ಬಾಬಣ್ಣ ತಾನು ಬರುವಂತೆ ರಜೆ ಸಿಕ್ಕೊಡನೆಯೇ ಹೊರಟು ಬಂದ. ಮನೆಯ ಮುಂದೆ ಟಾಂಗಾ ಬಂದು ನಿಲ್ಲುತ್ತಲೇ ಪದ್ಮಾವತಿ ಧಾವಿಸಿ ಹೊರಗೆ ಬಂದಳು. ಆದರೆ ಗಂಡನನ್ನು ಗುರುತಿಸುವುದು ಒಮ್ಮೆಲೇ ಅವಳಿಂದ ಆಗಲಿಲ್ಲ.

ಕಾಲಲ್ಲಿ ಹರಡು ಮುಚ್ಚುವವರೆಗಿನ ಕರೇ ಬೂಟು, ಮೇಲೆ ಉದ್ದವಾದ ಖಾಕೀ ಚೊಣ್ಣ. ಅದರ ಮೇಲೆ ಅರ್ಧತೋಳಿನ ಶರ್ಟು. ತಲೆಯ ಮೇಲೆ ಕ್ರಾಪು. ಬೈತಲ ಅರ್ಧ ಹೊರಗೆ ಕಾಣುವಂತೆ ಅದರ ಮೇಲೆ ಓರೆಯಾಗಿ ಹಾಕಿದ ಮಿಲಟರಿ ಟೊಪ್ಪಿಗೆ. ಭುಜದ ಮೇಲೆ ಸೈನ್ಯಖಾತೆಯೊಳಗೆ ಅವನಿಗಿರುವ ಸ್ಥಾನವನ್ನು ತೋರಿಸುವ ಕೆಂಪು ಕರೇ ಪಟ್ಟಿಗಳ ಪಟ. ಮೀಸೆ ಮಾಯವಾದ ಮುಖ. ಗಂಡನ ಈ ಸೋಗನ್ನು ನೋಡಿ ಬೆರಗಾದಳು ಪದ್ಮಾವತಿ. ಆತ ಟಾಂಗೆಯಿಂದ ಕೆಳಗಿಳಿದು ಬಂದರೂ ಮಕ್ಕಳು ಅವನ ಮುಖವನ್ನೆ ಟಕಮಕ ನೋಡಹತ್ತಿದುವು. ಅಪ್ಪ ಯಾವಾಗ ಬರುವನೆಂದು ದಾರೀ ಕಾಯುತ್ತಿದ್ದರಾದರೂ ಈ ವೇಷದಲ್ಲಿರುವ ಅವನ ಸಮೀಪಕ್ಕೆ ಹೋಗಲು ಹೆದರಹತ್ತಿದರು.

ಇದನ್ನು ಕಂಡು ನೆರೆಮನೆಯ ಹೆಂಗಸೊಬ್ಬಳು ಅಂದಳು :

"ಮಳ್ಳ ಹುಡುಗರೆ, ನಿಮ್ಮ ಅಪ್ಪಾ ಬಂದಾನ ಹತ್ತರ ಹೋಗಿರಲ್ಲೋ."

"ಅವರ ಆ ಅರವಿ, ಬೂಟು ನೋಡಿ ಅಂಜಿದಾರ." ಪದ್ಮಾವತಿ ಸಮಾಧಾನ ಹೇಳಿದಳು.

"ಅಂಜಲಿಕ್ಕೆ ಏನು ? ಮಿಲಟರಿಯೊಳಗ ಹೋಗದ ಮೇಲೆ ಹಾಗೇ ಇರೋವಲ್ಲ."

"ಆದರ ಮಕ್ಕಳಿಗೇನ ಗೊತ್ತ ?"

ಎಂದು ಪದ್ಮಾವತಿ ಟಾಂಗೆಯವನು ಕಟ್ಟೆಯ ಮೇಲೆ ಇಳಿಸಿಟ್ಟ ಬ್ಯಾಗನ್ನು ಎತ್ತಿಕೊಂಡು ಒಳಗೆ ಹೋದಳು. ಬಾಬಣ್ಣ ಜೇಬಿನೊಳಗಿನ ಸಿಗಾರೇಟ ಪ್ಯಾಕ್ ತೆಗೆದು, ಅದರೊಳಗಿನ ಸಿಗಾರೇಟೊಂದನ್ನು ಹೊತ್ತಿಸಿ ಸೇದುತ್ತ ಅಲ್ಲಿಯೇ ನಿಂತ ಹುಡುಗರು ಬೆರಗಿನಿಂದ ನೋಡುತ್ತ ನಿಂತಿದ್ದುವು. ಬಾಬಣ್ಣ ಬಂದ ಸುದ್ದಿಯನ್ನು ಕೇಳಿ ನೆರೆಮನೆಯ ಒಂದಿಬ್ಬರು ಬಾಲಕರೂ ಅಲ್ಲಿ ಬಂದಿದ್ದರು.

"ಒಳಗ ಬರ್ರಿ ಅಲಾ!" ಪದ್ಮಾವತಿ ಆದರದಿಂದ ಕರೆದಳು.

"ಬರತೇನಲ್ಲ. ಇನ್ನೆಲ್ಲಿ ಹೋಗತೇನಂತ ತಿಳದಿದಿ ಏನು?"

ತುಂಟ ನಗೆಯಿಂದ ಬಾಬಣ್ಣ ಕೇಳಿದ. ಆದರೂ ಅವನ ದನಿಯಲ್ಲಿ ಮಿಲಟರಿಯವನ ಗಡಸು ಇರಲಿಲ್ಲ. ಅದರ ಬದಲಾಗಿ ಪದ್ಮಾವತಿ ಏನನ್ನುವಳೋ ಎಂಬ ಹೆದರಿಕೆಯೇ ತುಂಬಿತ್ತು. ಅಲ್ಲದೆ ಅವನು ಬರುವಾಗ ಮನೆಯ ಸ್ಥಿತಿಗತಿಯ ಬಗ್ಗೆ ಒಂದು ಕಲ್ಪನೆಯನ್ನು ಕಟ್ಟಿಕೊಂಡು ಬಂದಿದ್ದ. ಇಲ್ಲಿ ಬಂದು ನೋಡಿದೊಡನೆ ಅದೆಲ್ಲ ಸುಳ್ಳಾಯಿತು. ಮನೆಯ ಮುಂದೆ ಎಮ್ಮೆ ಇದೆ, ಮಕ್ಕಳು ಉಲ್ಲಾಸದಿಂದ ಇದ್ದಾರೆ. ಇಂಥ ಸಂಸಾರದಲ್ಲಿ ತಾನು ತಂದ ನೂರಾರು ರೂಪಾಯಿಗಳಿಂದ ಪದ್ಮಾವತಿಯನ್ನು ಬೆರಗುಗೊಳಿಸುವುದು ಅಶಕ್ಯ. ತಿರುಗಿ ತಾನೇ ಬೆರಗುಗೊಳ್ಳಬೇಕಾಯಿತು. ಪದ್ಮಾವತಿ ಇಷ್ಟು ಸಮರ್ಥಳೇ, ಎಂದು ಬಾಬಣ್ಣ ವಿಚಾರದ ಗೊಂದಲದಲ್ಲಿ ಬಿದ್ದಿದ್ದ.

"ನೀವು ಹೋಗೋದು ನಿಲ್ಲೋದರ ಚಿಂತೆ ನಾ ಮಾಡಿದರೆ ಎಲ್ಲಿಗೆ ಮುಟ್ಟೋದು?"

"ಇಷ್ಟ ಗಟ್ಟಿಯಾದೆ ಏನು ನೀ?"

ಹೀಗೆ ಕೇಳುತ್ತ ಬಾಬಣ್ಣ ಒಳಗೆ ಹೋದ. ಬಹುದಿನಗಳವರೆಗೆ ಆಗಲಿದ್ದ ದಂಪತಿಗಳ ನಡುವೆ ಕವಿದ ಸಂಕೋಚದ ಮಂಜು ಮೆಲ್ಲನೆ ಮಾಯವಾಯಿತು. ಪದ್ಮಾವತಿಯು ತೊಟ್ಟಿಲಿನೊಳಗಿನ ಮಗುವನ್ನು ಎತ್ತಿ ತಂದು ತೊಡೆಯ ಮೇಲೆ ಕೊಟ್ಟಳು. ನಿದ್ದೆಗಣ್ಣಿನಲ್ಲಿದ್ದ ಕೂಸು ಅರ್ಧ ಕಣ್ದೆರೆದು ಚಿಟ್ಟನೆ ಚೀರಿ ಅಳಹತ್ತಿತು.

"ನಿಮ್ಮನ್ನ ನೋಡಿ ಅಂಜಿ ಅಳತದ ನೋಡು ಕೂಸು."

ನಗೆಯಾಡಿದಳು ಪದ್ಮಾವತಿ.

“ ಒಳ್ಳೊಳ್ಳೇ ವೈರಿಗಳೇ ಅಂಜಿ ಓಡತಾರಂತ,ಇದಂತೂ ಕೂಸು ಅದ ”

ರಣಭೂಮಿಯಲ್ಲಿಯ ಅನುಭವದ ಉಪಮೆ ಬಾಬಣ್ಣನ ಬಾಯಿಂದ ಹೊರಬಿದ್ದಿತು.

“ ಈಕೆಯೂ ವೈರಿಯಂತಃ ತಿಳಿದಿರೋ ಏನ ಮತ್ತ ! ”

ಪದ್ಮಾವತಿಯ ಬಾಯಿಂದ ಸಹಜವಾಗಿ ಈ ಉದ್ಗಾರ ಹೊರಬಿತ್ತಾದರೂ ಅವಳ ಮನಸ್ಸಿನ ಪ್ರತೀಕದಂತೆ ಈ ಮಾತು ಇತ್ತು. ಆ ಮಾತು, ಈ ಮಾತು ಆಡುತ್ತ ಬಾಬಣ್ಣ ಸಹಜವೆನಿಸುವಂತೆ ಮಾತನಾಡಿದ,—

“ ಎಷ್ಟ ದಿನಗಳಾದವು ಈಕೆಗೆ ? ”

“ ಒಂದೂವರಿ ತಿಂಗಳಾಯಿತಲ್ಲ ! ”

ಬಾಬಣ್ಣ ಏನೋ ಲೆಕ್ಕದಲ್ಲಿದ್ದ. ತಾನು ಹೋದ ದಿನಕ್ಕೂ ಹುಟ್ಟಿದ ದಿನಕ್ಕೂ ಲೆಕ್ಕ ಹಾಕುತ್ತಿರಬೇಕು ಆತ. ಪದ್ಮಾವತಿ ಏನೂ ತಿಳಿಯದೆ ಅಂದಳು:

“ ಏನು ಯೊಚಿಸುತ್ತೀರಿ ? ”

“ ಏನಿಲ್ಲ. ”

ಎಂದು ಬಾಬಣ್ಣ ಕೂಸನ್ನು ಅವಳ ತೊಡೆಯ ಮೇಲೆ ಕೊಟ್ಟು, ಸ್ನಾನಕ್ಕೆ ಎದ್ದ. ಪದ್ಮಾವತಿಯೂ ಮಗಳನ್ನು ತನ್ನ ಹಿರಿಯ ಮಗನಿಗೆ ಒಪ್ಪಿಸಿ, ಗಂಡನಿಗೆ ಜಳಕಕ್ಕೆ ನೀರು ಕೊಟ್ಟಳು. ಸ್ನಾನ ಮಧ್ಯಾಹ್ನದ ಊಟಗಳೆಲ್ಲ ವಿಶೇಷ ಮಾತು ಕತೆಗಳೇನೂ ನಡೆಯದೆ ಸಾಗಿದುವು.

ತಾತಪ್ಪನೂ ಊಟಕ್ಕೆ ಬಂದ. ಬಾಬಣ್ಣ ಬಂದ ಸುದ್ದಿಯನ್ನು ತಿಳಿದ. ಆದರೆ ಆತ ನಿದ್ದೆಯಲ್ಲಿದ್ದುದರಿಂದ ಹಾಗೆಯೇ ಹೊರಗೆ ಹೋಗಬೇಕಾಯಿತು. ಎಚ್ಚರಾದೊಡನೆಯೇ ಭೆಟ್ಟಿ ಆಗಿ ಮಾತಾಡಿ ಹೋಗಬೇಕೆಂದು ತುಸು ಹೊತ್ತು ತಡೆದ ಆದರೂ ಬಾಬಣ್ಣ ಏಳುವ ಲಕ್ಷಣ-ತೋರಲಿಲ್ಲ. ಸೋದರ ಮಾವನ ಈ ಭಾವವನ್ನು ಅರಿತುಕೊಂಡು ಪದ್ಮಾವತಿ ಮಗನಿಗೆ ಹೇಳಿದಳು:

“ ಮಾಮಾ ಬಂದಾರಂತ ಅವರನ್ನ ಎಬ್ಬಿಸೋ. ”

“ ಬೇಡ ಇರಲಿ. ಬೆಳತನಕ ನಿದ್ದೆ ಇಲ್ಲ ಕಾಣತದ. ಸಾವಕಾಶ ಏಳಲಿ. ಸಂಜೆಗೆ ಭೆಟ್ಟಿ ಆಗತದಲ್ಲ ಮತ್ತ. ”

ಎಂದು ಹೇಳಿ ತಾತಪ್ಪ ಹೊರಗೆ ಹೋಗಿಬಿಟ್ಟ. ಪದ್ಮಾವತಿಯೂ ತನ್ನ ಮನೆಯ ಕೆಲಸದಲ್ಲಿ ತೊಡಗಿದಳು. ಪತಿಯು ಬರುವನೆಂದು ಆ ಸಲದ ಸಕ್ಕರೆಯನ್ನು ಹಾಗೆಯೇ ಕಾಯ್ದಿದ್ದಳು. ಮನೆಯಲ್ಲಿ ಬೆಣ್ಣೆಯೂ ಇತ್ತು. ಆದುದರಿಂದ ತುಸು ಕಡಲೆಯ ಬೇಳೆಯನ್ನು ಬೀಸಿ, ಬೇಸನದ ಉಂಡಿಗಳನ್ನು ಕಟ್ಟಿದಳು. ಮಗನು ಇವೆಲ್ಲ ಆಗುವವರೆಗೆ ನೋಡುತ್ತಲೇ ಕುಳಿತಿದ್ದ. ಇಂದು ಅಪ್ಪ ಬಂದಿದಾನೆ, ಎಮ್ಮೆ ಮೇಯಿಸಲು ಹೋಗಬಾರದೆಂದು ಅವನ ಹವಣಿಕೆ. ಆದರೆ ಮಗನ ಮೈಗಳ್ಳತನ ಪದ್ಮಾವತಿಗೆ ಸೇರಲಿಲ್ಲ. ಕೆಲಸ ಮಾಡುತ್ತ ಮಾಡುತ್ತ ಎರಡು ಮೂರು ಸಲ ಸೂಚಿಸಿದಳು. ಹುಡುಗ ತಾಯಿಯ ಮಾತಿಗೆ ತಿರುಗಿ ಉತ್ತರವನ್ನೇನೂ ಕೊಡಲಿಲ್ಲವಾದರೂ ಎದ್ದು ಎಮ್ಮೆ ಬಿಡಲು ಹೋಗಲಿಲ್ಲ. ಕೊನೆಗೆ ಪದ್ಮಾವತಿ "ಈಗ ಉಂಡಿ ಕಟ್ಟಿ ಕೊಡುವೆ. ತಿಂದು ಹಾಗೇ ತುಸು ಕೆರೆಯ ಸುತ್ತ ತಿರುಗಾಡಿಸಿ ನೀರು ಕುಡಿಸಿ ಕೊಂಡು ಬಾ. ಕಟ್ಟಿದಲ್ಲಿಯೇ ಕಟ್ಟಿದರೆ ಎಮ್ಮೆ ಸಂಜೆಗೆ ಹಾಲ ಕೊಡುವದಿಲ್ಲ. ಈಗಾಗಲೇ ಒದೆಯಲಿಕ್ಕೆ ಬೇರೆ ಆರಂಭಿಸಿದೆ." ಎಂದು ಹೇಳಿ ರಮಿಸಿದಳು. ಹುಡುಗ ಒಪ್ಪಿದಂತೆ ಮಾಡಿದ. ಪದ್ಮಾವತಿಯೂ ಬೇಗ ಬೇಗ ಉಂಡಿ ಕಟ್ಟಿದಳು. ಒಂದನ್ನು ಎತ್ತಿ ಅವನ ಕೈಯಲ್ಲಿ ಕೊಟ್ಟಳು. ಆಮೇಲೆ ಎಂದಳು,—

"ಹೂಂ! ಏಳಿನ್ನು. ತಿಂದ ಎಮ್ಮೆ ಬಿಡು."

ಹುಡುಗ ಮೋರೆ ಬಿಗಿದುಕೊಂಡು ಅಲ್ಲೇ ರಬ್ಬಿದ. ಕೈಯಲ್ಲಿಯ ಉಂಡಿ ಕೈಯಲ್ಲಿಯೇ ಉಳಿಯಿತು.

"ಏಳಲ್ಲ, ಹೀಗೇಕೆ ಸೋಮಾ ಮಾಡತೀನೋ? ಸಂಜೆಗೆ ಹಾಲ ಕೊಡದಿದ್ದರೆ ನೋಡ ಆಮೇಲೆ. ನಾಳೆ ಮೊಸರ ಮಜ್ಜಿಗೆ ಏನ ತಿನ್ನುವಿ?"

"ಇಂದ ಒಂದ ದಿವಸ ಬಿಡದಿದ್ದರೆ ಏನ ಆಗತದ?"

"ನಿನ್ನದೊಂದ ಮಾತೇ ಆಯ್ತಲ್ಲ. ಎಂಥಾ ಮಕ್ಕಳೋ ಏನೋ ಇವು. ಒಂದೊಂದ ಒಂದೊಂದ ರೀತಿ ಕಾಡತಾವು. ಸಾಕು ಏಳು. ತಿಂದ ಎಮ್ಮೆ ಬಿಡು."

ಎಂದು ಪದ್ಮಾವತಿ ಸ್ವಲ್ಪ ರಭಸದಿಂದಲೇ ಹುಡುಗನಿಗೆ ಹೇಳಿದಳು. ಈಗ ಬಾಬಣ್ಣ ಅರ್ಧಮರ್ಧ ಎಚ್ಚರದಲ್ಲಿ ಇದ್ದ. ಹೆಂಡತಿಯ ಮಾತಿನ ಏನೋ—ಎಲ್ಲಿಯದೋ ಒಂದು ಭಾಗವನ್ನು ಅವನ ಬುದ್ಧಿ ಗ್ರಹಿಸಿತು.

'ಅವಳಿಗೆ ಕಾಡುವಂಥವುಗಳಲ್ಲಿ ನಾನೂ ಒಬ್ಬ' ಇರಬೇಕೆಂದು ಭಾವಿಸಿದ. ಭಾವದ ಬೀಜ ಬಾಬಣ್ಣನ ಮನದಲ್ಲಿ ಬಿದ್ದು ಹೇಗೋ ಬೆಳೆಯುತ್ತ ನಡೆಯಿತು. ಹಾಗೆಯೇ ಹಾಸಿಗೆಯಲ್ಲಿ ಹೊರಳಾಡುತ್ತಲಿದ್ದ. ಹುಡುಗ ಮಾತ್ರ ತಾಯಿಯ ಅಪ್ಪಣೆಗೆ ಒಳಗಾಗಿ ಎಮ್ಮೆಯನ್ನು ಬಿಟ್ಟುಕೊಂಡು ಕೆರೆಯ ಕಡೆಗೆ ಹೊರಟ. ಆದರೂ ತಾಯಿಯು ಕರುಳು ಕೇಳಲಿಲ್ಲ. ಅಂಗಳದವರೆಗೆ ಹೋಗಿ, ಮಗನನ್ನು ಕರೆದು ಹೇಳಿದಳು,—

"ಹಾಗೇ ಕೆರೆಯವರೆಗೆ ಹೊಡೆದುಕೊಂಡು ಹೋಗಿ, ನೀರ ಕುಡಿಸಿಕೊಂಡು ಲಗೂನ ತಿರುವಿಕೊಂಡ ಬಾ ಅದರ ಕಾಲ ಸಡಿಲು ಆದಂತೂ ಆಯಿತು, ನಾವು ನೀರು ಹೊತ್ತ ತಂದ ಹಾಕೋದೂ ತಪ್ಪಿತು."

ಹುಡುಗ ತಾಯಿಯ ಸವಲತ್ತಿನ ಮಾತಿಗೆ ಪ್ರತಿಯಾಗಿ ಏನೂ ಹೇಳಲಿಲ್ಲ. ಹಾಗೆಯೇ ಸಿಟ್ಟನಿಂದ ಎಮ್ಮೆಗೆ ಎರಡೇಟು ಬಿಗಿದು ಓಡಿಸಿಕೊಂಡು ಹೋದ.

ಪದ್ಮಾವತಿಯು, ಎಮ್ಮೆ ಹೊರಗೆ ಹೋದೊಡನೆಯೇ ಕೊಟ್ಟಿಗೆಯೊಳಗಿನ ಕಸವನ್ನೆಲ್ಲ ತೆಗೆದಳು. ದವಣಿಯೊಳಗಿನ ಕಣಕಿಯ ದಂಟುಗಳನ್ನು—ಎಮ್ಮೆ ತಿಂದುಳಿದ ಬೊಡ್ಡೆಗಳನ್ನು—ಸಂಜೆಗೆ ಒಲೆಯಲ್ಲಿ ಹಾಕಲೆಂದು ಒಯ್ದು ಜಳಕದ ಒಲೆಯ ಮುಂದಿಟ್ಟಳು. ಇನ್ನೂ ಬಾಬಣ್ಣ ಏಳಲಿಲ್ಲ. ತೊಟ್ಟಿಲ ಕಡೆಗೆ ಹಣಿಕಿ ಹಾಕಿ ನೋಡಿದಳು. ಕೂಸು ಇನ್ನೂ ಮಲಗಿದ್ದಿತು. ಅಲ್ಲಿಯವರೆಗೆ ಹಿತ್ತಲಿಗೆ ಹೋಗಿ ಕುರುಳು ತಟ್ಟಿ ಬರಬೇಕೆಂದು ಯೋಚಿಸಿದಳು. ಹಾಗೆಯೇ ಅಂಗಳದಲ್ಲಿ ಆಡುವ ನಡುವಿನ ಹುಡುಗನಿಗೆ, "ಕೂಸು ಎದ್ದರೆ ನನಗೆ ಹೇಳು" ಎಂದು ಹೇಳಿ, ಹಿತ್ತಲಿಗೆ ಸೆಗಣಿಯ ಬುಟ್ಟಿ ಹೊತ್ತುಕೊಂಡು ಹೋದಳು.

ಪದ್ಮಾವತಿ ಹಿತ್ತಲಿಗೆ ಹೋಗಿ ಸ್ವಲ್ಪ ಹೊತ್ತು ಕಳೆದಿರಬೇಕು. ಬಾಬಣ್ಣ ಹಾಸಿಗೆಯಲ್ಲಿ ಎದ್ದು ಕುಳಿತ. ಇದೀಗ ನಿದ್ರೆಯಿಂದ ಎಚ್ಚತ್ತುದರಿಂದ ಕಣ್ಣುಗಳು ಕೆಂಪಗಾಗಿದ್ದುವು. ಹಾಸಿಗೆಯಲ್ಲಿ ಹೊರಳಾಡಿ ಹೊರಳಾಡಿ ತಲೆಯ ಕೂದಲುಗಳು ಕೆದರಿದ್ದುವು. ಅವನ ಮನಸ್ಸಿನಂತೆ ಅಸ್ತವ್ಯಸ್ತವೂ ಆಗಿದ್ದುವು. ಮೈಯಲ್ಲಿ ಗಂಜಿಫ್ರಾಕು ತೊಟ್ಟಿದ್ದ. ಹಣೆಗೆ ಗಂಟು ಹಾಕಿ ಎಲ್ಲಿಯೋ ನೋಡುತ್ತ ಬೇಸರದಿಂದ ಕುಳಿತಿದ್ದ. ಈ ಮನೆಯೆಲ್ಲ ಅವ್ಯ

ವಸ್ಥೆಯು ಮಟ್ಟ ಎಂದು ಅವನಿಗೆ ಅನ್ನಿಸುತ್ತಿದ್ದಿತು. ಮಿಲಟರಿಯ ಶಿಸ್ತು ಮನೆಯಲ್ಲಿ ಎಲ್ಲಿಂದ ಬಂದೀತು? ಆದರೆ ಅವನ ಮನಸ್ಸಿಗೆ ಆ ವಿಚಾರ ಹೊಳೆಯದು.

ಇಷ್ಟರಲ್ಲಿ ಕೂಸು ತೊಟ್ಟಿಲಲ್ಲಿ ಎಚ್ಚರಾಗಿ ಚೀರಹತ್ತಿತು. ಅದರಿಂದ ಬಾಬಣ್ಣನ ಮನಸ್ಸಿಗೆ ಇನ್ನಿಷ್ಟು ಬೇಸರ ಉಂಟಾಯಿತು. ಎದ್ದು ಬೇಸರ ದಿಂದ ತೊಟ್ಟಿಲ ಕಡೆಗೆ ಹೋದ. ಮನದಲ್ಲಿಯೇ 'ಎಲ್ಲಿ ಹೋದಳೋ, ಕೂಸನ್ನು ಮಲಗಿಸಿ.' ಎಂದೂ ಬೇಸರದಿಂದ ಅಂದುಕೊಳ್ಳದೆ ಇರಲಿಲ್ಲ.

ತಂಗಿಯ ಅಳುವ ಸ್ವರವನ್ನು ಕೇಳಿ ಪುಟ್ಟ ಹುಡುಗ ಮೊದಲು ತೊಟ್ಟಿಲ ತೂಗಿ ಆಮೇಲೆ ತಾಯಿಯನ್ನು ಕರೆಯಲು ಓಡಬೇಕೆಂದು ಮನೆ ಯೊಳಗೆ ಬಂತು. ತಂದೆ ಎದ್ದು ಮುಂದುವರಿದದ್ದನ್ನು ಕಂಡು, ಹಾಗೆಯೇ ಮರಳಿ ಆನಂದದಿಂದ ಹಿತ್ತಲ ಕಡೆಗೆ ಧಾವಿಸಿತು. ಎದುರಿಗೇನೇ ಹೊಟ್ಟಿನ ಬುಟ್ಟಿ ತುಂಬಿಕೊಂಡು ಪದ್ಮಾವತಿ ಬಂದಳು.

"ಯಾಕೋ ಎದ್ದಳೇನು ಕುಸುಮಿ?"

ಎಂದು ಪದ್ಮಾವತಿ ಮಗನಿಗೆ ಕೇಳಿದಳು. ಮಗ ಆನಂದದಿಂದ ಗೋಣು ಹಾಕಿ ಹೇಳಿದ.

"ಅಪ್ಪಾ, ಎದ್ದ ತಗೊಂಡಾನ...."

ಅವರು ಎದ್ದು ಬಹಳ ಹೊತ್ತಾಗಿ ಹೋಯಿತೇನೋ ಎಂದುಕೊಂಡು ಪದ್ಮಾವತಿ ಲಗುಬಗೆಯಿಂದ ಮನೆಗೆ ಬಂದಳು. ಒಳಗೆ ಹೋಗುತ್ತ ಸವಿ ಯಾದ ಸ್ವರದಿಂದ ಕೇಳಿದಳು.

"ನಿಮ್ಮ ನಿದ್ದೆ ಕೆಡಿಸಿದಳೇನೋ?"

"ಹೂಂ!"

ಎಂದು ಬಾಬಣ್ಣ ಸುಮ್ಮನಾದ. ಮಕ್ಕಳ ಜೋಪಾನ ಮಾಡುವುದು ಗಂಡಸರಿಗೇನು ಗೊತ್ತು? ಹೆಂಗಸರಿಗೆಂದೇ ಅದು ಸಹನವಾಗುವುದು, ಎಂದು ಮನದಲ್ಲಿಯೇ ಅಂದುಕೊಂಡು ತೊಟ್ಟಿಲ ಬಳಿಗೆ ಹೋಗಿ ಮಗಳನ್ನು ಎತ್ತಿಕೊಂಡಳು.

"ಬರೇ ನೋಡ್ತ ನಿಂತಿದೀರಿ. ಎತ್ತುಕೊಂಡಿದ್ದರೆ ಏನಾಗತಿತ್ತು?"

ಸಲಿಗೆಯಿಂದ ಬಾಬಣ್ಣನಿಗೆ ಕೇಳಿದಳು.

" ಸುಡುಗಾಡ ಅವು ನಮ್ಮ ಹತ್ತರ ಒಂದು ಬರಬೇಕಲ್ಲ. "

ಎಂದು ಬಾಬಣ್ಣ ಬಚ್ಚಲ ಕಡೆಗೆ ಮುಖ ತೊಳೆದುಕೊಳ್ಳಲು ಹೋದ. ಪದ್ಮಾವತಿಯೂ ಗಂಡ ತಿರುಗಿ ಅಡಿಗೆಯ ಮನೆಯತ್ತ ಬರುವಷ್ಟರಲ್ಲಿ ಕೂಸನ್ನು ಮಲಗಿಸಬೇಕೆಂದು ಲಗುಬಗೆಯಿಂದ ಮೊಲೆಯೂಡಿಸಿ ತೊಟ್ಟಿಲದಲ್ಲಿ ಹಾಕಿ ತೂಗಿದಳು. ಆದರೂ ಮಗಳು ಮಲಗುವ ಲಕ್ಷಣ ತೋರಲಿಲ್ಲ. ಆಡುದರಿಂದ ಹಾಗೆಯೇ ಎತ್ತಿಕೊಂಡು ಒಳಗೆ ಹೋದಳು. ಮಣೆ ಹಾಕಿ, ಬಟ್ಟಲಲ್ಲಿ ಉಂಡಿಯೊಂದನ್ನು ಇಟ್ಟು ಗಂಡನನ್ನು ಸ್ವಾಗತಿಸಿದಳು.

ಬಾಬಣ್ಣ ಬಂದ. ಮಣೆಯ ಮೇಲೆ ಮನಸ್ಸಿಲ್ಲದೆ ಕುಳಿತುಕೊಂಡ. ಅವನಿಗೆ ಈಗ ಕುಡಿಯಲು ಚಹ ಬೇಕಾಗಿದ್ದಿತು. ಮಿಲಟರಿಗೆ ಹೋದಾಗಿನಿಂದ ಮಧ್ಯಾಹ್ನ ಚಹ ಕುಡಿದ ರೂಢಿ ಅವನಿಗೆ. ಇದು ಪದ್ಮಾವತಿಗೆ ಗೊತ್ತಿರಲಿಲ್ಲ. ಮುಂಜಾನೆ ಆತ ನಿಲ್ದಾಣದಲ್ಲಿಯೇ ಚಹ ಕುಡಿದು ಬಂದಿದ್ದ. ಮೊದಲು ಮನೆಯಲ್ಲಿ ಚಹ ಕುಡಿಯುತ್ತಿರಲಿಲ್ಲ. ಆದುದರಿಂದ ಅವಳು ಇದ್ದ ಸಕ್ಕರೆಯನ್ನೆಲ್ಲ ಹಾಕಿ ಉಂಡಿಯನ್ನು ಕಟ್ಟಿದ್ದಳು. ಬಾಬಣ್ಣ ಹೇಳಿದ:

" ಚಹ ಮಾಡು. " ಮಿಲಟರಿಯ ಆರ್ಡರಿನ ಪದ್ಧತಿಯಲ್ಲಿ ಮಾತು ಇತ್ತು.

" ಸಕ್ಕರೆ ತೀರಿತಲ್ಲ ! " ಎಂದಳು ಪದ್ಮಾವತಿ ಹೆದರಿಕೆಯಿಂದ.

" ಸಕ್ಕರೆ ಎಲ್ಲಾ ತೀರಿಸಿ, ಉಂಡಿ ಕಟ್ಟಲಿಕ್ಕೆ ಯಾರು ಹೇಳಿದ್ದರು ನಿನಗೆ ? " ತುಸು ತಡೆದು " ನಾ ಇಲ್ಲದ ವೇಳೆಯೊಳಗ ಕಟ್ಟಿ ಕಟ್ಟಿ ಹೊಡಿಯುವಿ ಕಾಣತದ " ಎಂದ.

" ತಿಂದವರನ್ನ ದೇವರ ನೋಡಿಕೊಳ್ಳಲಿ ಅಲ್ಲ. " ಎಂದಳು ಪದ್ಮಾವತಿ ಮರುಕದಿಂದ.

ಅವಳು ಪತಿಯು ಊರು ಬಿಟ್ಟು ಒಮ್ಮಿಂದೊಮ್ಮೆ ಹೋದುದೇಕೆ ? ಹೊಲವನ್ನು ಕೊಡುವಂಥ ಪ್ರಸಂಗ ಅಂಥದೇನು ಬಂದಿತ್ತು ? ಕಲ್ಲಪ್ಪನ ಹೆಂಡತಿ ತನಗೆ ಕೇಳುವಂತೆ ಮಾತಾಡಿದ ಮಾತುಗಳು, ಇವನು ತನಗೆ ಹೇಳದೆ ಹೋದ ರೀತಿ ಇದರ ಹಿನ್ನೆಲೆ ಏನು ? ಎಂಬುದನ್ನೆಲ್ಲ ಪತಿಯಿಂದ

ವಿವರವಾಗಿ ಕೇಳಿಕೊಳ್ಳಬೇಕು. ಇನ್ನು ಸಾಧ್ಯವಿದ್ದರೆ ಗಂಡ ಮನೆಯಲ್ಲಿಯೇ ಇರಬೇಕು, ಇಬ್ಬರೂ ಇನ್ನೊಬ್ಬರಲ್ಲಿ ದುಡಿದು ತಿಂದರೂ ಅಡ್ಡಿಯಿಲ್ಲ, ಅಗಲಿರುವುದು ಬೇಡ—ಎಂದೇನೇನೋ ಹೇಳಬೇಕು, ಕೇಳಿಕೊಳ್ಳಬೇಕು ಎಂದು ಬಗೆದಿದ್ದಳು. ಆದರೆ ಬಾಬಣ್ಣನ ಮನಸ್ಸು ಇನ್ನೂ ಸಮನಾದಂತೆ ತೋರಲಿಲ್ಲ. ಅಂಜುತ್ತಂಜುತ್ತಲೇ ಮತ್ತೆ ಕೇಳಿದಳು,—

"ಬೆಲ್ಲ ಹಾಕಿ ಚಹಮಾಡಿ ಕೋಡಲೇನು?"

ಬಾಬಣ್ಣನಿಗೆ ಈ ಮಾತು ಸೇರಲಿಲ್ಲ. ಬೆಲ್ಲದ ಚಹ ಕುಡಿಯಲೇ? ಎಂದು ತನ್ನ ಮನಸ್ಸಿನಲ್ಲಿಯೇ ಅಂದುಕೊಂಡ. ಸಿಟ್ಟಿನಿಂದ ಮುಂದಿರುವ ಬಟ್ಟಲವನ್ನು ದೂಡಿ,—

"ಬೆಲ್ಲದ ಚಹ ಮಾಡಿ ಕೊಡತಾಳ, ಬೆಲ್ಲದ ಚಹ ನನಗ?"

ಎನ್ನುತ್ತ ಎದ್ದು, ಸಿಗಾರೇಟ ಒಂದನ್ನು ಹೊತ್ತಿಸಿ ಸೇದುತ್ತ ಹೊರಗೆ ಹೋದ. ಅಲ್ಲಿ ಇಲ್ಲಿ ಅಡ್ಡಾಡಿ ತನ್ನ ಮಿಲಟರಿ ಡ್ರೆಸ್ಸಿನ ಪ್ರದರ್ಶನವನ್ನು ಹಳ್ಳಿಯಲ್ಲೆಲ್ಲ ಮಾಡಿ, ಕಡೆಗೆ ಹೊಟೇಲೊಂದರಲ್ಲಿ ಹೋದ. ಅಲ್ಲಿ ಸಕ್ಕರೆಯ ಚಹವೆಂದು ಹೇಳಿ ಕೊಟ್ಟ ಬೆಲ್ಲದ ಚಹವನ್ನು ಕುಡಿದು ಮನೆಗೆ ಮರಳಿದ.

ದಾರಿಯಲ್ಲಿ ಹಲವರು ಹಲವು ಪ್ರಶ್ನೆಗಳನ್ನು ಕೇಳಿದರು.

"ಯಾವಾಗ ಬಂದೆ? ಅಲ್ಲಿ ಏನು ವಿಶೇಷ?"

"ಮತ್ತೆ ಹೋಗಬೇಕೇನು?"

"ಎಷ್ಟು ದಿವಸ ರಜೆ ಇದೆ?"

"ಎಲ್ಲಾ ಬಿಟ್ಟ ಮಿಲಟರಿ ಯಾಕ ಸೇರತಿದ್ದೀ? ಅಲ್ಲೇನ ಜಾತಿಯೋ ಕೋತಿಯೋ?"

ಅನೇಕರಿಗೆ ಅನೇಕ ತರದ ಉತ್ತರಗಳನ್ನು ಕೊಟ್ಟ. ಮಿಲಟರಿಯಲ್ಲಿರುವ ಸುಖವನ್ನೂ ತಾನು ನೋಡಿದ ದೇಶವಿದೇಶಗಳನ್ನೂ ವರ್ಣಿಸಿ ಹೇಳಿದ. ತನ್ನ ಹುದ್ದೆ, ತನ್ನ ವಿದ್ಯೆಗಳನ್ನೆಲ್ಲ ಪ್ರದರ್ಶಿಸಿದ. ಸೈನ್ಯದಲ್ಲಿ ಸೇರಿದುದರಿಂದ ತನ್ನ ಹೊಲಗಳನ್ನೆಲ್ಲ ಸರಕಾರ ಮರಳಿ ಕೊಡಿಸುವುದೆಂದೂ ಆ ಮಾತಿನ ಭರದಲ್ಲಿ ಹೇಳದೆ ಇರಲಿಲ್ಲ. ಹಾಗೆಯೇ ಮುಂದುವರಿದು ಕಲ್ಲಪ್ಪ, ಗೌಡರನ್ನು ಒಂದು ಕೈ ನೋಡುವೆನೆಂದೂ ಆಡಿದನು.

ಹಳ್ಳಿಯಲ್ಲಿಯ ಅಶಿಕ್ಷಿತರು ಕೆಲವರು ಬಾಬಣ್ಣ ಮಿಲಟರಿ ಸೇರಿ ಒಳ್ಳೇದು ಮಾಡಿದ. ಅಲ್ಲಿ ಎರಡು ಹೊತ್ತು ಸಕ್ಕರೆಯ ಚಹ ಬಿಸ್ಕೀಟಂತೆ ಊಟಕ್ಕೆ ಚಪಾತಿ ಅನ್ನ. ಮೇಲೆ ಅರಿವೆ, ಹಾಸಿಗೆ ಹೊದಿಕೆಗಳನ್ನು ಅವರೇ ಕೊಟ್ಟು ಕೈತುಂಬ ಸಂಬಳ ಕೊಡುವರು ಬೇರೆ. ಇಂಥ ಸುಖ ಇಲ್ಲಿ ತಮಗೆ ಎಲ್ಲಿಂದ ಸಿಕ್ಕೀತು ಎಂದೂ ಹಳಹಳಿಸಿದರು. ಬ್ರಿಟಿಷ ಸರಕಾರ ಅವನ ಹೊಲವನ್ನೂ ತಿರುಗಿ ಕೊಡಿಸುವುದು ನಿಜವೆಂದೇ ಭಾವಿಸಿದರು. ಬಲ್ಲವರು ಇವನ ಮಾತಿಗೆ ಅಷ್ಟು ಬೆಲೆ ಕೊಡದೆ, ತಮಗೆ ಬೇಕಾದ ಯುದ್ಧದ ಸುದ್ದಿ, ಆ ಮಾತು ಈ ಮಾತುಗಳನ್ನು ಕೇಳಿಕೊಂಡು ಬಿಟ್ಟರು. ಇವನು ಅಂದು ತೋರಿಸುವ ಮಿಲಟರಿ ಆರ್ಡರುಗಳನ್ನೂ ಮಾಡಿತೋರಿಸುವ ಸಲಾಮಿನ ಪದ್ಧತಿಯನ್ನೂ ಅವರು ಕಂಡು ನಗುವರು. ಅನೇಕರು ಬೆರಗು ಗೊಳ್ಳುವವರೂ ಇಲ್ಲದಿಲ್ಲ.

ಇದನ್ನೆಲ್ಲ ಮುಗಿಸಿಕೊಂಡು ಮನೆಗೆ ತಿರುಗಿದಾಗ ಒಂದು ಮುದುಕಿ ಕೇಳಿತು:

" ಏನಪ್ಪಾ ಬಾಬು, ನೀ ಹೋದ ಮೇಲೆ ಒಬ್ಬ ಮಗಳ ಹುಟ್ಟಿ ದಾಳಲ್ಲಪ್ಪ? "

" ಹೌದ " ಅವಳ ಮಾತನ್ನು ಅಷ್ಟಕ್ಕೇ ತಡೆದು ಬಾಬಣ್ಣ ನುಡಿದ.

" ಏನಾದರೂ ಕೂಸ ನಿನ್ನ ಹಾಗೂ ಇಲ್ಲ. ತನ್ನ ಅವ್ವನ ಹಾಗೂ ಇಲ್ಲ. ಯಾರ ಮುಖ ತಂದದ ಏನೋ? " ಎಂದು ಮುಂದೆ ಸಾಗಿದಳು ಮುದುಕಿ.

ಬಾಬಣ್ಣ ಮನೆಯ ಕಡೆಗೆ ಬಂದ. ಆದರೆ ಮುದುಕಿಯ ಆ ಮಾತು ಅವನ ತಲೆಯಲ್ಲಿ ಇನ್ನೂ ಸುತ್ತುತ್ತಲೇ ಇತ್ತು.

ತಾತಪ್ಪ ಸಾಯಂಕಾಲದ ಊಟಕ್ಕೆ ಸ್ವಲ್ಪ ಬೇಗನೇ ಮನೆಗೆ ಬಂದಿದ್ದ. ಅವನಿಗೆ ಸೋದರಳಿಯನನ್ನು ಕಾಣುವ ಆತುರವಿತ್ತು. ಪದ್ಮಾವತಿಯು ಮಧ್ಯಾಹ್ನ ನಡೆದ ಸಂಗತಿಯನ್ನೆಲ್ಲ ಮಾವನ ಮುಂದೆ ವಿವರಿಸಿದಳು ಕಣ್ಣೀರು ತಂದಳು. ಅಳಿಯನ ನಡತೆಯನ್ನು ಕೇಳಿ ಅವನೂ ಮರುಗಿದ.

" ತಾನೇ ಮೊದಲು ತಪ್ಪಿ ನಡೆದಿರುವ. ಈಗ ಇನ್ನೊಬ್ಬರ ಮೇಲೆ ಸಿಟ್ಟಿಗೆ ಬಂದರೆ ಏನಾಗುವುದು? "

ಎಂದ ತಾತಪ್ಪ. ಅದೇ ವೇಳೆಗೆ ಬಾಬಣ್ಣ ಹೊರಗಿನಿಂದ ಬಂದ. ಮೆಟ್ಟುಗಲ್ಲಿನ ಮೇಲಿರುವಾಗಲೇ ಮಾವನ ಮಾತು ಅವನ ಕಿವಿಗೆ ಬಿತ್ತು. ಆ ಮಾತಿನ ಹಿಂದು ಮುಂದಿನ ಸಂಬಂಧವೇನೂ ಅವನಿಗೆ ಗೊತ್ತಿರಲಿಲ್ಲ. ದಾರಿಯಲ್ಲಿ ದೊರಕಿದ ಮುದುಕೆಯ ಮಾತಿನ ಮುಲಕಿನಲ್ಲಿಯೇ ಆತ ಸುತ್ತುತ್ತ ಬಂದಿದ್ದ. ಈ ಮಾವನ ಮಾತಿಗೊಂದು ಅವನಿಗೆ ವಿಪರೀತ ಅರ್ಥವೇ ಹೊಳೆಯಿತು. ಅದಕ್ಕಾಗಿ ಆತ ಸಂಕೋಚದಿಂದಲೇ ಮನೆ ಯೊಳಗೆ ಕಾಲು ಹಾಕಿದ. ಇದೇ ಅವನು ಮೊದಲನೆಯ ಸಲ, ಊರಿಂದ ಬಂದಮೇಲೆ ಮಾವನಿಗೆ ಭೆಟ್ಟಿ ಆಗುತ್ತಿರುವುದು. ತಾತಪ್ಪ ಕ್ಷೇಮವನ್ನೆಲ್ಲ ಕೇಳಿಕೊಂಡ ಮಾವ ಅಳಿಯಂದಿರು ಕೂಡಿ ಊಟಮಾಡಿದರು. ಊಟ ವಾಗುವ ವರೆಗೂ ಬಾಬಣ್ಣ ಮೆತ್ತಗೆ ಇದ್ದ. ಮೌನನಾಗಿಯೂ ಇದ್ದ. ಉಂಡು ತಾತಪ್ಪ ತಂಬಾಕು ಸೇದುತ್ತ ಕುಳಿತ. ಬಾಬಣ್ಣನಿಗೂ ಸಿಗಾ ರೇಟಿನ ತಲುಬಾಯಿತು. ಆದರೆ ಮಾವನ ಎದುರಿಗೆ ಸೇದಲಾರದೆ ತುಸು ಹೊತ್ತು ಸುಮ್ಮನೆ ಕುಳಿತ ಹೊರಗೆ ಒಳಗೆ ಸುಳಿದಾಡಲಿಕ್ಕೆ ಆರಂಭ ಮಾಡಿದ. ತಾತಪ್ಪನಿಗೆ ಇವನ ಚಟದ ಕಲ್ಪನೆ ಇರಲಿಲ್ಲ. ಎಲ್ಲಿಯೋ ಹೊರಗೆ ಹೋಗಲು ಹಾತೊರೆಯುವನೆಂದು ಭಾವಿಸಿದ. ಮೆಲ್ಲನೆ ಮಾತಿನ ಎಳೆ ತೆಗೆದ:

"ನನಗ ಹೇಳದ ಕೇಳದ ಮಿಲಟರಿಗೆ ಏಕೆ ಹೋದಿಯೋ ಬಾಬು?"

"ಗೌಡ ಒಯ್ದು ಹಾಕಿದ ಏಳ ಸೂ....ಮಗ" ಎಂದು ಹೇಳಿ ಬಾಬಣ್ಣ ಮಾತು ಮುಗಿಸಲು ಯತ್ನಿಸಿದ.

ತಾತಪ್ಪನಿಗೆ ಈಗ ಎಳೆ ಸಿಕ್ಕಂತಾಯಿತು. ಅವನು ಇಷ್ಟಕ್ಕೇನೇ ಬಿಡುವನೇ?

"ನೀನೂ ಏನ ಸಣ್ಣ ಹುಡುಗ ಏನೋ?" ಎಂದು ಮಾತೊಡೆದ.

"ಬಲೆಯೊಳಗ ಸಿಕ್ಕ ಮೇಲೆ ದೊಡ್ಡವ ಏನು ಸಣ್ಣವ ಏನು?"

ತಿರುಗಿ ಕೇಳಿದ ಬಾಬಣ್ಣ. ಪದ್ಮಾವತಿಯು ಇವರ ಮಾತನ್ನು ಕುತೂಹಲದಿಂದ ಕೇಳುತ್ತಿದ್ದಳು. ತುಂಬ ಆಸ್ಥೆಯನ್ನೂ ವಹಿಸಿದ್ದಳು. ತಾತಪ್ಪನಿಗೂ ಅಳಿಯ ಎಂಥ ಸಂಕಟದಲ್ಲಿ ಸಿಕ್ಕು, ಹೊಲ ಖರೀದಿ ಮಾಡಿಕೊಟ್ಟರ

ಬೇಕು, ಮಿಲಟರಿಗೂ ಭರತಿಯಾಗಿರಬೇಕು, ಎಂಬೆಲ್ಲ ಕಲ್ಪನೆಗಳು ಹೊಳೆದುವು. ಅಂತಲೇ ಸಾಮಾನ್ಯವಾಗಿ ಕೇಳಿಬಿಟ್ಟ.

" ಅದೇ ಸುಂದರಿಯದೇ ತೊಡಕಲ್ಲೇನು ? "

ಹೆಂಡತಿಯ ಎದುರಿಗೆ ಬಾಬಣ್ಣ ಹೇಳಲು ಸಂಕೋಚಪಟ್ಟುಕೊಂಡಿರಬೇಕು. ಸುಮ್ಮನಾದ. ಅವನ ಮೌನದ ರೀತಿಯನ್ನು ಅರಿತು ತಾತಪ್ಪ ಮುಂದೆ ನುಡಿದ:

" ಬೇಕಂತಲೇ ಗೌಡ ನಿನ್ನ ಮೇಲೆ ತಂದನೋ? ಏನು ಇವರಿಂದೇನಾದರೂ ನಿನ್ನ ಹೆಸರು ಬಂತೊ? "

" ................ "

" ನನಗ ಇದು ಸ್ಪಷ್ಟವಾಗಿ ತಿಳಿಯಬೇಕಾಗೇದ. ಆದಕ್ಕೆ ಕೇಳತೇನೆ ಈ ಹೆಂಗಸರದಾದರೂ ಏನು ನಂಬಿಗೆ? ಸುಳ್ಳ ಸುಳ್ಳೇ ಯಾರ ಹೆಸರನ್ನಾದರೂ ಹೇಳಿ, ತಾವು ಜಾರಲಿಕ್ಕೆ ನೋಡುವವರು. "

ಎಂದು ಸೋದರಳಿಯನನ್ನು ವಿಶ್ವಾಸದಲ್ಲಿ ತಕ್ಕೊಳ್ಳಲಿಕ್ಕೆ ತಾತಪ್ಪ ಯತ್ನಿಸಿದ. ಆಮೇಲೆ ಬಾಬಣ್ಣ ದಿನಕ್ಕೊಂದು ಸಂಗತಿಯಂತೆ ಎಲ್ಲವನ್ನೂ ಮಾವನಿಗೆ ಗಂಟಲು ಸಡಿಲು ಬಿಟ್ಟು ಹೇಳಿ ಮುಗಿಸಿದ. ಸುಂದರಿ ಆ ಕುತ್ತಿನಿಂದ ಈಗ ಪಾರಾಗಿರುವಳೆಂಬುದನ್ನೂ ತಿಳಿದುಕೊಂಡ. ಆನಂತರ ಮೆಲ್ಲಮೆಲ್ಲನೆ ಒಂದು ದಿವಸ ಗಂಗವ್ವನ ಮನೆಗೂ ಹೋಗಿ ಬಂದ. ಅಪ್ಪಣ್ಣನೂ ಇವನ ಕ್ಷೇಮಸಮಾಚಾರ ಕೇಳಿದ. ಇವನಿಲ್ಲದಾಗ ಪದ್ಮಾವತಿಗೆ ತಾನು ನೆರವಾದ ಬಗೆಯನ್ನೂ ವಿವರಿಸಿದ. ಸುಂದರಿಯೂ ನಗುತ್ತ ನಗುತ್ತ ಕೇಳಿದಳು:

" ಒಂದ ದಿವಸ ಪದ್ಮಾವತಿಯನ್ನ ಬಿಟ್ಟ ಇರದವ ಈಗ ಹೇಗೆ ವರ್ಷ ವರ್ಷಾನಗಟ್ಟಲೆ ಇರತಿ ನೀನು ? "

" ಇರುವಂತಹ ವೇಳೆ ಬಂದ ಮೇಲೆ ಇರಲಿಕ್ಕೇಬೇಕಲ್ಲ "

" ಮಳೆ ಮೂಗಾವುದ ಇರುವಾಗ ಇಲ್ಲಿ ಒಡ್ಡ ಒಡೆಯಿತಂತ ! "

ಎಂದು ನಕ್ಕು ನುಡಿದಳು. ಅಪ್ಪಣ್ಣನೂ ಅವಳ ಮಾತಿಗೆ ನಕ್ಕ. ಅದೇಕೋ ಬಾಬಣ್ಣನಿಗೆ ಮಾತ್ರ ನಗೆ ಬರಲಿಲ್ಲ. ಇಷ್ಟರಲ್ಲಿ ಒಳಗಿನಿಂದ ಗಂಗವ್ವನೂ ಬಂದು ಮಾತಿನಲ್ಲಿ ಭಾಗವಹಿಸಿದಳು.

“ ಆ ದಿನ ಮುಂಜಾನೆ ನಮ್ಮ ಮನೆಗೆ ಬಂದವ ತಿರುಗಿ ಭೆಟ್ಟಿಯೇ ಆಗಲಿಲ್ಲವಲ್ಲ ? ”

“ ಭೆಟ್ಟಿ ಆಗಲಿಕ್ಕೆ ಕೊಟ್ಟರೆ ಆಗೋದು ? ”

“ ಆಮೇಲೆ ಬಾಳವ್ವನ ಕಡೆಗೆ ಹೇಗೆ ಹೋಗಿದ್ದಿ ? ”

“ ಆಗ ಮಿಲಟರಿಯೊಳಗ ಹೆಸರ ಕೊಟ್ಟೇ ಹೋಗಿದ್ದೆ. ”

“ ಇದು ಯಾವ ಕಡೆಯಿಂದ ದೇವರ ಬುದ್ಧಿ ಹಾಕಿದ ನಿನಗ ? ”

“ ದೇವರ ಹಾಕಲಿಲ್ಲ; ಗೌಡ ಹಾಕಿದ. ಅವನು ಹದಿನೈದ ಜನರನ್ನ ಭರತಿ ಮಾಡಬೇಕಾಗಿತ್ತಂತ. ಇಲ್ಲಾದರ ಗೌಡಕಿ ಹೋಗತಿತ್ತಂತ. ಅದರೊಳಗ ನನ್ನಂಥವ ಇಂಥ ಬಲೆಯೊಳಗ ಸಿಕ್ಕ ಮೇಲೇನು ? ಹೊಲವನ್ನೂ ಕಸಿದುಕೊಂಡರು. ಮಿಲಟರಿಯಲ್ಲಿಯೂ ತುರುಕಿಬಿಟ್ಟರು ! ”

“ ಯಾರ ತುರುಕಿದರೆ ಹೋಗತಾರೇನ ತಗೋ ! ತನಗೇ ಬೇಕಾಗಿ ಹೋಗಿದಾನ. ” ಎಂದು ಸುಂದರಿ ಬೇಕಂತಲೇ ನುಡಿದಳು.

“ ಸುಮ್ಮನೆ ನನ್ನ ಕೆಣಕಿ ನಿನ್ನ ಪುರಾಣ ತೆಗೆಯಿಸಿಕೋಬೇಡ. ”

ಬಾಬಣ್ಣನ ಮಾತನ್ನು ನಡುವೆಯೇ ತಡೆದು ಗಂಗವ್ವ ಮಗಳಿಗೆ ಹೇಳಿದಳು,—

“ ಬೇಕಂತಲೇ ಯಾತಕ್ಕ ಹೋಗಿದಾನಬೇ ? ಸಾಕು ಹೋಗು. ಬಾಬಣ್ಣನಿಗೆ ಒಂದು ಕಪ್ಪು ಚಹ ಮಾಡಿ ತಂದಕೊಡು. ”

ಹೀಗೆ ಬಾಬಣ್ಣ ಅವರಿವರ ಮನೆಗಳಲ್ಲಿ ಚಹ ಕುಡಿಯುತ್ತಲೇ ತನ್ನ ಹದಿನೈದು ದಿನಗಳ ರಜೆಯನ್ನು ಕಳೆದ. ಚಂದ್ರವ್ವನ ಕಡೆಗೂ ಒಂದೆರಡು ಸಲ ಹೋಗಿಬಂದ. ಇವನು ಹೋದ ನಂತರ ಪದ್ಮಾವತಿಯು ಪಟ್ಟ ಪಾಡನ್ನೆಲ್ಲ ಅವಳು ಕತೆಮಾಡಿ ಹೇಳಿದಳು. ಇನ್ನು ಮುಂದೆ ಮತ್ತೆ ತಿರುಗಿ ಹೋಗಬೇಡವೆಂದೂ ಸೂಚಿಸಿದಳು.

“ಇಂಥಾ ಹೆಂಡತಿ ಸಲುವಾಗಿ ನಿಲ್ಲ ಅನ್ನುವಿ ಹೌದಃ ಅಬಚಿ ನನಗ?” ಎಂದು ಬಾಬಣ್ಣನೇ ಅವಳಿಗೆ ತಿರುಗಿ ಕೇಳಿದ.

“ ಇಂಥಾ ಹೆಂಡತಿ ಅಂದರೆ ? ” ಚಂದ್ರವ್ವನ ಮರು ಪ್ರಶ್ನೆಯಿದು.

ಅ[illegible] ಆದಪ್ಪ ಮಾಸ್ತರರು ಹೊರಗಿನಿಂದ ಬಂದು ಹೇಳಿದರು:

“ [illegible] ನಿಲ್ಲುವೆನೆಂದರೂ ಸರಕಾರ ಬಿಡಬೇಕಲ್ಲ. ”

" ಹೋಗದಿದ್ದರೆ ಏನು ಮಾಡುವರು ತಗೋ." ಬಾಬಣ್ಣ ಸಹಜ ಹೇಳಿದ.

" ನಿನಗಿನ್ನೂ ಗೊತ್ತಿಲ್ಲ, ಮಿಲಟರಿ ಕಾಯಿದೆ. ಪೋಲೀಸರು ಬಂದು ಹಿಡಿದ ಒಯ್ಯುವರು. ತಿಳದ ಅದಿ ನೀ ! "

ಮಾಸ್ತರರು ಇವನ ಬಿಂಕದ ಮಾತನ್ನು ಕಂಡು ವಿವರಿಸಿದರು. ಬಾಬಣ್ಣ ಸುಮ್ಮನಾಗಿ ಎದ್ದು ಬಂದ. ಮುಂದೆರಡು ದಿನಗಳಲ್ಲಿ ಅವನಕ್ಕ— ಬಾಳವ್ವ—ತಮ್ಮನನ್ನು ಕಾಣಲು ಬಂದಳು. ಸಂಗಡ ಮಗನನ್ನೂ ತಂದಿದ್ದಳು. ಈಗ ಬಾಬಣ್ಣ ತಾನು ತಂದ ರೂಪಾಯಿಗಳನ್ನು ಹೊರಗೆ ತೆಗೆದ. ಎಲ್ಲರಿಗೂ ಧಾರಾಳವಾಗಿ ಖರ್ಚು ಮಾಡತೊಡಗಿದ. ಇನ್ನು ಅವನು ಮರಳಿ ಹೋಗುವುದು ಮೂರೇ ದಿನ ಉಳಿದಿದ್ದಿತು. ಪದ್ಮಾವತಿಯು ಮನೆತನವನ್ನು ಸಾಗಿಸಿದ ರೀತಿ–ನೀತಿಗಳೂ ಅಕ್ಕನಿಂದ ತಿಳಿದುವು. ತಮ್ಮನಿಗೆ ಅವಳು ಚೆನ್ನಾಗಿ ಛೀ ಹಾಕಿದಳು :

" ಮನೆಯೊಳಗ ತಿಂಗಳು, ಒಂದೂವರಿ ತಿಂಗಳ ಬಸಿರು ಹೆಂಡತಿ, ಕಟ್ಟಿನ ಕಡಿದೇನ ಅಂದರ ಒಂದು ಕಾಳೂ ಇಲ್ಲ. ಹೊಲ ಮಾರಿದಿ ಮಿಲಟರಿ ಸೇರಿಬಿಟ್ಟಿ. ನನ್ನಲ್ಲೆ ಬಂದಾಗ ಒಂದ ಮಾತನ್ನಾದರೂ ಉಸುರು ಒಡೆಯುಬಾರದು ? ಮನೆಯೊಳಗ ಹೆಂಗಸೊಬ್ಬಾಕೆ ಏನು ಮಾಡಬೇಕು ? ನಿನ್ನ ಹೆಸರಿಸಿಂದ ಹಾಡಿ ಹಾಡಿ ಅಳಬೇಕೇನು ? ಗರತಿ ಮಗಳಂತೇ ಅವಳು ಬಾಳ್ವೆ ಮಾಡಿದಳು. ಮತ್ತೊಬ್ಬಾಕೆ ಸುಂದರಿ ಅಂಥಾಕೆ ಆದರೆ ಎದ್ದು ಹೋಗುವಾಕೆ ಇನ್ನೊಬ್ಬನ ಮನೆಗೆ ತಿಳೀತು ? "

" ಆರು ಏಳು ವರ್ಷ ಆಯ್ತು, ಗಂಡ ಇಲ್ಲದೆ ಇಲ್ಲೇನ ಆಕೆಂಯೂ? "

ಎಂದ ಬಾಬಣ್ಣ. ಆದರೂ ಅವನ ಮುಖದಲ್ಲಿ ಹಠಾತ್ತಾಗಿ ಮುಗುಳು ನಗೆಯೊಂದು ಮೂಡದೆ ಇರಲಿಲ್ಲ.

" ಎಲ್ಲಾ ಗೊತ್ತದ ನನಗೂ ಕತೆ " ಎಂದಳು ಬಾಳವ್ವ.

ಈ ಮಾತು ಕತೆಗಳೆಲ್ಲ ನಡೆದುವು, ಬಾಬಣ್ಣ ಊರಿಗೆ ಹೊರಡುವ ಮುನ್ನಾದಿನ. ಆ ದಿನ, ಮರುದಿನ ಅಳಿಯ ಹೊರಡುವನೆಂದು ತಾತಪ್ಪನೂ ಮನೆಯಲ್ಲಿಯೇ ಮಲಗಿಕೊಂಡಿದ್ದ. ಬಾಳವ್ವನೂ ತಮ್ಮನು ಹೋದ

ಮೇಲೆಯೇ ಹೋಗಬೇಕೆಂದು ತವರುಮನೆಯಲ್ಲಿಯೇ ಉಳಿದುಕೊಂಡಿದ್ದಳು. ಹೀಗಾಗಿ ಬಾಬಣ್ಣನ ಮನಸ್ಸಿದ್ದರೂ ಪದ್ಮಾವತಿಯನ್ನು ಏಕಾಂತದಲ್ಲಿ ಸಂಧಿಸುವುದು ಆಗಲಿಲ್ಲ.

ಹದಿನೈದು ದಿನಗಳವರೆಗೆ ರಜೆ ಪಡೆದುಕೊಂಡು ಊರಿಗೆ ಬಂದ ಪತಿಯು ಒಂದು ದಿನವೂ ತನ್ನ ಹತ್ತಿರ ಬರಲಿಲ್ಲ. ಮೊದಲಿನಂತೆ ಪ್ರೀತಿಯ ಮಾತುಗಳನ್ನು ಆಡಲಿಲ್ಲ. ಆದರೂ ಪಾಪ! ಪದ್ಮಾವತಿ ಬೆಳಗಿನಲ್ಲಿ ಎದ್ದು ಗಂಡನಿಗೆ ಹಾಲಿನೊಳಗೆ ಚಪಾತಿ ಮಾಡಿದಳು, ಉಂಡಿ ಕಟ್ಟಿದಳು. ಡಬ್ಬಿ ತುಂಬಿ ಕೊಟ್ಟಳು. ಬಾಗಿಲಲ್ಲಿ ಟಾಂಗೆಯೂ ಬಂದು ನಿಂತಿತು. ಚಂದ್ರವ್ವ ಗಂಗವ್ವ ಎಲ್ಲರೂ ಕಳಿಸಲು ಬಂದಿದ್ದರು. ಬಾಬಣ್ಣ ಹೊರಡಲು ಸಿದ್ಧನಾದ. ಉಳಿದವರೆಲ್ಲರೂ ಹೊರಗೆ ಇದ್ದರು. ಸಮೀಪದಲ್ಲಿ ಯಾರೂ ಇಲ್ಲದ್ದನ್ನು ಕಂಡು ಪದ್ಮಾವತಿ ಒಂದು ಮಾತನ್ನು ಮೆಲ್ಲನೆ ಅಂದಳು:

"ನನಗ ಏನು ಹೇಳಿ ಹೋಗತೀರಿ?"

ಇಬ್ಬರ ಕಣ್ಣುಗಳಲ್ಲಿಯೂ ನೀರು ತುಂಬಿ ತುಳುಕುತ್ತಿದ್ದವು.

೧೫

ಬಾಬಣ್ಣ ಊರಿಗೆ ಬಂದು ಹೋದ. ಅದರಿಂದ ಪದ್ಮಾವತಿಗೇನೂ ಸುಖವಾಗಲಿಲ್ಲ. ತಿರುಗಿ ಚಿಂತೆಗೀಡಾದಳು. ಅವಳಿಗೆ ಹಗಲಿರುಳೂ ಒಂದೇ ಚಿಂತೆ. ಬಾಬಣ್ಣನಿಗೆ ಯಾರು ಏನು ಹೇಳಿರಬೇಕು? ನನ್ನ ಮೇಲೆ ಸಂಶಯವೇಕೆ? ಹೀಗಾದರೆ ನನ್ನ ಬಾಳು ನಾಯಿಯ ಬಾಳಲ್ಲವೆ? ಇದಕ್ಕೆ ಉಪಾಯವೇನು? ಹೀಗೆ ಅನೇಕ ಪ್ರಶ್ನೆಗಳನ್ನು ತನ್ನ ಮನಸ್ಸಿಗೆ ತಾನೇ ಕೇಳಿಕೊಳ್ಳುವಳು. ಗಂಡನು ತನ್ನನ್ನು ಈ ರೀತಿ ನೋಡಬೇಕಾದರೆ ತನ್ನ ನಡತೆಯಲ್ಲಿ ಅವನಿಗೇನಾದರೂ ವ್ಯತ್ಯಾಸ ಕಂಡಿತೆ? ಎಂದುಕೊಂಡು ತನ್ನ ನಡೆ ನುಡಿಗಳನ್ನೆಲ್ಲ ನೆನೆದುಕೊಂಡು ಒರೆಗೆ ಹಚ್ಚಿ ನೋಡುವಳು. ಮೇಲೆ ಕಣ್ಣೀರು ಹಾಕುವಳು. ಈ ಚಿಂತೆಯಿಂದ ಪದ್ಮಾವತಿ ತಿಂಗಳೊಪ್ಪತ್ತಿನಲ್ಲಿ ಸೊರಗಿ ಕಡ್ಡಿಯಂತಾದಳು. ಅವಳ ಮೊಲೆಯೊಳಗಿನ ಹಾಲೂ ಆಟ್ಟಿಸಿದುವು. ಬಾಳೆಯ ಗೊನೆಯಂತಿರುವ ಕೂಸೂ ಬಾಡಿ ಒಣಗತೊಡಗಿತು.

ಇದೇ ಕಾಲಕ್ಕೆ ಮನೆಯೊಳಗೆ ಎಮ್ಮೆಯೂ ಹಾಲು ಕೊಡುವದನ್ನು ನಿಲ್ಲಿಸಿತು. ಸಂಸಾರದ ವೆಚ್ಚಕ್ಕೆ ಚಕ್ರಬಂದಿತು. ಬಾಬಣ್ಣ ಊರಿಗೆ ಬಂದಾಗ

ಮನೆಯಲ್ಲಿ ತಿನ್ನುವ ಜನ ಹೆಚ್ಚಾದುದರಿಂದ ಕಾಳು ಕಡಿಗಳೂ ತೀರುತ್ತ ಬಂದುವು. ಮುಂದೆ ಬದುಕುವ ದಾರಿ ಪದ್ಮಾವತಿಗೆ ಕಾಣದಾಯಿತು.

ತಾತಪ್ಪ ಮನದಲ್ಲಿಯೇ ಅಂದುಕೊಳ್ಳುತ್ತಿದ್ದ:

“ ಬಾಬಣ್ಣನ ಸುದ್ದಿಯೇ ಇಲ್ಲದಾಗ ಪದ್ಮಾವತಿ ಎಂಥ ಚನ್ನಾಗಿ ಮೈ ಕೈ ತುಂಬಿಕೊಂಡಿದ್ದಳು. ಅವನು ಊರಿಗೆ ಬಂದು ಹೋದೊಡನೆಯೇ ಹೀಗೇಕೆ ಇಳಿದಳು ? ”

ಈ ಪ್ರಶ್ನೆಗೆ ಅವನೂ ಉತ್ತರವನ್ನು ಕಾಣದಾದ. ತನಗೆ ಬಂದ ಸಮಸ್ಯೆಯನ್ನು ಸಹಜವಾಗಿ ಗಂಗವ್ವನ ಮುಂದೆಯೂ ಇಟ್ಟ. ಅವಳು ಯಾವ ವಿಚಾರವನ್ನೂ ಮಾಡದೆ ಉತ್ತರವಿತ್ತಳು.

“ ಹೆಂಗಸರ ನೆಲೆ ಒಳ್ಳೆ ಒಳ್ಳೆಯವರಿಗೂ ಹತ್ತದು. ”

ತಾತಪ್ಪ ಗಂಗವ್ವ ತೋರಿದ ದಾರಿಯಲ್ಲಿ ಮುಂದೆ ಸಾಗಿ ಪದ್ಮಾವತಿಯ ನಡೆನುಡಿಗಳನ್ನೆಲ್ಲ ವಿಮರ್ಶಿಸತೊಡಗಿದ. ಹಿಂದೆ ಪದ್ಮಾವತಿಯು ಪತಿಯ ವಿಷಯಕ್ಕೆ ಆಡಿದ ನಿರಾಶಾಮಯ ಮಾತುಗಳೂ ಅವಳ ಗಾಂಭೀರ್ಯದ ನಡೆಯೂ ಈಗೊಂದು ಅರ್ಥದಿಂದ ಕೂಡಿಕೊಂಡು ತಾತಪ್ಪನ ಮುಂದೆ ನಿಲ್ಲ ತೊಡಗಿದವು ಸೊಸೆಯಬಗ್ಗೆ ಇದ್ದ ಆದರ ತುಸು ತುಸು ಕಡಿಮೆಯಾಗ ತೊಡಗಿತು. ದಿನಾಲು ಊಟಕ್ಕೆ ಹೋದಾಗ ಸಂಶಯ ದೃಷ್ಟಿಯಿಂದ ಪದ್ಮಾವತಿಗೆ ಏನು ಏನಾದರೂ ಪ್ರಶ್ನೆಮಾಡುವ. ಇರುಳು ಒಂದೊಂದು ದಿನ ಬಹಳ ಹೊತ್ತಾದ ನಂತರ ಊಟಕ್ಕೆ ಹೋಗುವ. ಒಮ್ಮೊಮ್ಮೆ ವೇಳೆ ತಪ್ಪಿಸಿ ಮನೆಗೂ ಹೋಗುವದುಂಟು.

ಪದ್ಮಾವತಿಗೆ ಮಾವನ ನಡತೆಯ ಅರ್ಥ ಆಗಲಿಕ್ಕೆ ಬಹಳ ದಿವಸ ಹಿಡಿಯಲಿಲ್ಲ. ರಜೆಯ ಮೇಲೆ ಬಂದಾಗ ಅವರೇನಾದರೂ ಹೇಳಿ ಹೋಗಿರಬೇಕು. ಅದಕ್ಕಂತಲೇ ಇವರು ಹೀಗೆ ನನ್ನ ಮೇಲೆ ಕಣ್ಣು ಇಟ್ಟಿರುವರು. ಇಡಲಿ. ದೈವ ಹಚ್ಚಿದಲ್ಲಿ ಹೋಗುವದು, ಎಂದುಕೊಳ್ಳುವಳು. ತಾತಪ್ಪನ ಬಗ್ಗೆ ತನ್ನಲ್ಲಿ ಯಾವ ಅನಾದರವನ್ನೂ ಉಂಟು ಮಾಡಿಕೊಂಡಿರಲಿಲ್ಲ. ತನ್ನ ದೈವ ಕೆಡಕಿರುವಾಗ ಅನ್ಯರ ಮೇಲೆ ಮುನಿದರೆ ಏನಾಗುವುದೆಂದು ಬಗೆದಿದ್ದಳು. ತಿರುಗಿ ಬಾಬಣ್ಣನ ವಿಷಯಕ್ಕೆ ಅವಳಲ್ಲಿ ಕನಿಕರ ಉತ್ಪನ್ನವಾಯಿತು. ಪಾಪ, ತಿರುಗಿ ಕಾಳನ್ನಾಯ್ದು ತಿನ್ನುವ ಕೋಳಿಯ ಕಾಲನ್ನೋ

ಮುರಿದು ಹೋದನಲ್ಲ, ಎಂದು ಮರುಗುವಳು. ಬಾಳಿನ ನೆಲಗಟ್ಟೇ ಕುಸಿದು ಬೀಳುವಂತೆ ತೋರುವುದು. ಆದರೂ ಪದ್ಮಾವತಿ ಯಾರ ಮುಂದೆಯೂ ಏನೂ ಹೇಳಲರಿಯಳು.

ಇನ್ನು ಅವಳು ಸುಮ್ಮನೆ ಕೂಡುವಂತೆಯೂ ಇರಲಿಲ್ಲ. ಮನೆಯಲ್ಲಿ ಒಂದು ವಾರದ ಧಾನ್ಯ ಮಾತ್ರ ಉಳಿದಿದ್ದಿತು. ಈಗ ತಾತಪ್ಪ ಹೆಸರಿಗೇನೋ ಉಣ್ಣಲಿಕ್ಕೆ ಬರುತ್ತಿದ್ದ. ಮನೆಗೆ ಏನೂ ಸಾಮಾನು ತಂದು ಕೊಡುತ್ತಿರಲಿಲ್ಲ. ಮನೆಯ ಕಡೆಗೆ ಅವನ ಮನಸ್ಸೂ ಇರಲಿಲ್ಲ. ಬಾಬಣ್ಣ ರಜೆಗೆ ಬಂದಾಗ ತನ್ನ ಮನೆತನದ ಮುಂದಿನ ವ್ಯವಸ್ಥೆಯ ಬಗ್ಗೆ ಏನಾದರೂ ಮಾಡಿ ಹೋಗಬಹುದೆಂದು ಆತ ನಿರೀಕ್ಷಿಸಿದ್ದ. ಅವನು ಏನೂ ಮಾಡಲಿಲ್ಲ, ತಾತಪ್ಪನಿಗೂ ಇನ್ನು ಮೇಲೆ ಮನೆಯ ಭಾರ ಹೊರುವುದು ಬೇಕಾಗಿರಲಿಲ್ಲ. ಆದರೂ ಆಗಾಗ ಗಂಗವ್ವನ ಮುಂದೆ ಮನಸ್ಸು ಕೇಳದೆ ಅನ್ನುವನು:

" ಮೂರು ಮಕ್ಕಳು ತಾನು, ದೆವ್ವಿನಂತಹ ಹೊಟ್ಟೆಗಳು ಏನು ಮಾಡುವಳು ಪದ್ಮಾವತಿ ? ಗಂಡನೂ ಬಂದಾಗ ವ್ಯವಸ್ಥೆ ಮಾಡಿ ಹೋಗಲಿಲ್ಲ. "

" ಇಂಥವರಿಗೆ ವ್ಯವಸ್ಥೆ ಮಾಡಿಕೊಟ್ಟ ಹೋಗತಾರ ? ಹುಚ್ಚ ಇದ್ದೀದಿ ನೀ. "

ಗಂಗವ್ವನ ಸಮಾಧಾನವಿದು !

" ನಮ್ಮ ಕಣ್ಣ ಏನು ಕಂಡೀತೇನು ಬಿಡು ! " ತಾತಪ್ಪನ ವಿಚಾರ ಹೀಗೆ.

" ಹಾಗಾದರ ಮತ್ತೊಂದ ಹೈನದ ಎಮ್ಮಿ ತಂದು ಕಟ್ಟರಲ್ಲ. ಇನ್ನೂ ಏಕೆ ಸುಮ್ಮನಿದ್ದೀರಿ ? " ಗಂಗವ್ವನ ಕೊಂಕುನುಡಿ.

" ಅದೇ ಗೊಡ್ಡನ್ನು ಒಯ್ದು ಸಂತೆಗೆ ಮಾರಬೇಕೆಂದಿರುವೆ ಸುಮ್ಮನೆ ಇಂಥಾ ದಿನದೊಳಗ ಕಟ್ಟಿ ಕಣಕಿ ಹಾಕೋದು ಆಗಿದೆ. "

" ಮಾರೋದೇ ಆದರ ನಮ್ಮಲ್ಲೇನೇ ಕಟ್ಟಿಬಿಡು. ಈಗೇನ ಅದಕ್ಕ ದುಡ್ಡ ಬರುವವು ? ಮುಂದೆ ಈಯಲಿಕ್ಕೆ ಆವಾಗ ಮಾರಲಿಕ್ಕೆ ಬಂದೀತು. ಈಗೇನ ಅದು ದನಗಳ ಮುಂದಿನ ಚಿಪ್ಪಾಡಿ ತಿಂದ ಬೀಳತದ. ನಾವೇನ ತುದಿ ತುದಿ ಕಣಕಿ ಹಾಕಬೇಕಿಲ್ಲ, ಏನಿಲ್ಲ. "

ಹೀಗೆ ಗಂಗವ್ವ ಬೇಡಿಕೆಯನ್ನು ಮುಂದೆ ಚಾಚಿದಳು. ಅವಳಿಗೆ ಮುಂದೆಯಾದರೂ ಎಮ್ಮೆ ಮಾರುವ ಯೋಚನೆ ಇರಲಿಲ್ಲ. ಹೈನಕ್ಕೆ ಎಮ್ಮೆ ಚನ್ನಾಗಿದ್ದಿತು ಹಾಲನ್ನೂ ಬಹಳ ಕೊಡುವುದು. ಅದಕ್ಕೆ ತಕ್ಕಂತೆ ಬೆಣ್ಣೆಯೂ ಬರುವುದು. ಇದನ್ನೆಲ್ಲ ಪದ್ಮಾವತಿಯ ಮನೆಯಲ್ಲಿರುವಾಗಲೇ ಅವಳು ಕಂಡಿದ್ದಳು. ಅದರಿಂದ ಹಲವು ದಿನಗಳಿಂದ ಅದರ ಮೇಲೆ ಅವಳು ಕಣ್ಣಿಟ್ಟಿದ್ದಳು. ಈಗ ಅನಾಯಾಸವಾಗಿಯೇ ಆ ಮಾತು ಬರಲು ಗಂಗವ್ವ ಸುಮ್ಮನಿದ್ದಾಳೆಯೇ ?

ತಾತಪ್ಪನಿಗೆ ಎಮ್ಮೆಯನ್ನು ಸಂತೆಗೆ ಹೊಡೆದರೇನು? ಗಂಗವ್ವನ ಮನೆಯಲ್ಲಿ ತಂದು ಕಟ್ಟಿದರೇನು? ಎಲ್ಲ ಒಂದೇ ಇದ್ದಿತು. ಆದರೆ ಪದ್ಮಾವತಿಗೆ ಏನು ಹೇಳಿ ಎಮ್ಮೆಯನ್ನು ತರುವುದು? ಅವಳ ಮನಸ್ಸು ನೋಯಲಿಕ್ಕಿಲ್ಲವೇ? ಎಂಬ ವಿಚಾರ ಅವನಿಗೆ ಕಾಡುತ್ತಿದ್ದಿತು. ಗಂಗವ್ವ ಎಮ್ಮೆಯನ್ನು ತರಲಿಕ್ಕೆ ದಿನಾಲು ದುಂಬಾಲು ಬಿದ್ದಿದ್ದಳು. ಇವನು 'ಹೂ!' ಅನ್ನುವ.. ಆದರೂ ಮನೆಯಲ್ಲಿ ಹೋದಾಗ ಪದ್ಮಾವತಿಗೆ ಹೇಳಲಿಕ್ಕೆ ಬಾಯಿ ಬಾರದು. ಹೀಗೆಯೇ ನಾಲ್ಕೈದು ದಿನಗಳು ಉರುಳಿದವು.

ಈ ನಾಲ್ಕೈದು ದಿನಗಳಲ್ಲಿ ಪದ್ಮಾವತಿಯೂ ಒಂದು ತೂಗಾಟದಲ್ಲಿಯೇ ಇದ್ದಳು. ತಾತಪ್ಪನಿಂದ ಇಂಥ ಸಂದರ್ಭ ಏನಾದರೊಂದು ಬಂದರೆ ತಾನು ಮಾತೆತ್ತಬೇಕೆಂದು ದಾರೀ ಕಾಯುತ್ತಿದ್ದಳು ಆದರೂ ಮಾವನಿಂದ ಮನೆಯ ವೆಚ್ಚದ ವಿಷಯಕ್ಕೆ ಏನೂ ಮಾತು ಬರುವಂತೆ ತೋರಲಿಲ್ಲ. ಮನೆಯೊಳಗಿನ ದಾನ್ಯ ತೀರುತ್ತ ಬಂದುವು. ಇನ್ನು ಸುಮ್ಮನಿರುವುದು ತರವಲ್ಲವೆಂದು ಬಗೆದು ನುಡಿದಳು,—

" ನಾಳೆ ಚಂದ್ರವ್ವ ಅಬಚಿಯವರಲ್ಲಿ ಕೋಲಿ ಆರಿಸಲಿಕ್ಕೆ ಒಬ್ಬರು ಕಡಿಮೆ ಬಿದ್ದಾರಂತೆ; ಹೋಗಲೇನು ? "

ಕೂಲಿಗೇ ಹೋಗುವದೆಂದ ಮೇಲೆ ಯಾರಲ್ಲೇನು ? ದುಡಿಯುವುದು, ತಿನ್ನುವುದು, ಎಂಬ ನಿರ್ಧಾರಕ್ಕೇನೋ ಪದ್ಮಾವತಿಯು ಬಂದಿದ್ದಳು. ಚಂದ್ರವ್ವನಲ್ಲಿ ಕೋಲಿಯನ್ನು ಆರಿಸುವರೆಂಬ ಸುದ್ದಿಯನ್ನೂ ಅವಳು ಕೇಳಿರಲಿಲ್ಲ. ಆದರೂ ಅವಳು ಮಾವನಿಂದ ಕೆಲಸಕ್ಕೆ ಹೋಗಲು ಒಪ್ಪಿಗೆ ಪಡೆಯಬೇಕಿತ್ತು. ಚಂದ್ರವ್ವ ಎಷ್ಟಾದರೂ ಮನೆಯವಳಂತೆ ಇರುವಳು. ಅದಕ್ಕೆ

ಮಾವನ ಒಪ್ಪಿಗೆ ಬೇಗ ಸಿಕ್ಕುವುದು, ಎಂಬ ವಿಚಾರ ಅವಳದು. ಅಲ್ಲದೆ ಮಾತಿನ ಧ್ವನಿಯುಲ್ಲಿ ಮನೆಯ ವೆಚ್ಚಕ್ಕೆ ಏನಾದರೂ ಬೇಡುವಂತಹ ಅರ್ಥ ಹುಟ್ಟಿರಬಾರದು, ಎಂಬ ಎಚ್ಚರವೂ ಅವಳಲ್ಲಿತ್ತು.

ಪದ್ಮಾವತಿಯ ಪ್ರಶ್ನೆಗೆ ತಾತಪ್ಪ ಸ್ವಲ್ಪ ಹೊತ್ತು ಸ್ತಬ್ಧನಾಗಿ ಕುಳಿತ. ಅವನ ಮನಸ್ಸು ಬಧಿರವಾದಂತಿತ್ತು. ಕೊನೆಗೆ ಹೇಳಿದ:

" ಏನ ಹೋಗಬೇಕನ್ನುವಿ? ಹಾಗಾದರ ಒಂದು ದಿನ ಹೋಗು. "

ಇಷ್ಟು ಮಾತು ಅವನ ಬಾಯಿಂದ ಬರಬೇಕಾದರೆ ಸಾಕುಬೇಕಾಗಿ ಹೋಯಿತು. ಮೈ ನಸು ಬೆವರೊಡೆಯಿತು. ಇದನ್ನರಿತು ಪದ್ಮಾವತಿಯೇ ತಿರುಗಿ ಸಮಾಧಾನ ಹೇಳಬೇಕಾಯಿತು.

" ಇನ್ನು ಕೂಲೀ ಮಾಡದ ಗತಿ ಎಲ್ಲಿ ಅದ? "

" ದೇವರ ವೇಳೆ ತಂದಾತೆ ಇರಲಿಕ್ಕೆಬೇಕು. ಆದರೂ ..."

ಏನೇ ಇರಲಿ, ಮಾವನಿಂದ ಕೆಲಸಕ್ಕೆ ಹೋಗಲು ಅಪ್ಪಣೆ ಸಿಕ್ಕಿತು. ಇಷ್ಟೇ ಸಾಕಾಗಿತ್ತು ಪದ್ಮಾವತಿಗೆ. ಮರುದಿನದಿಂದಲೇ ಜನರಲ್ಲಿ ದುಡಿಯು ಲಿಕ್ಕೆ ಹೋಗಲು ಆರಂಭಿಸಿದಳು. ಮೊದಮೊದಲು ಅವಳಿಗೆ ಬಹಳ ಕೆಡಕೆ ನಿಸಿತು. ಇಂಥ ಹೊತ್ತು ಬಂತಲ್ಲ ಎಂದು ನೊಂದುಕೊಂಡಳು. ಕಾಲಲ್ಲಿ ಚಪ್ಪಲಿಗಳಿಲ್ಲ. ಬಿಸಿಲಲ್ಲಿ ಕಾಲು ಸುಡುವವು. ಮಾಡಿಸಿಕೊಳ್ಳಲಿಕ್ಕೆ ಕೈಯಲ್ಲಿ ಕಾಸಿಲ್ಲ. ಈ ರೀತಿ ದುಡಿದು ಮೈಗೆ ಪರಿಪಾಠವಿಲ್ಲ. ದಣಿವು ತುಂಬ ಆಗು ವುದು. ಮನಸ್ಸಿಗಾದರೂ ಶಾಂತಿಯಿದೆ ಎನ್ನಬೇಕೆ? ಅದೂ ಇಲ್ಲ. ಆದರೂ ಎಲ್ಲವನ್ನೂ ಸಹಿಸಿಕೊಂಡಳು. ದುಡಿಯಲು ಹೋಗಹತ್ತಿದಳು. ಹೋಗದೆ ಗತಿಯಿರಲಿಲ್ಲ. ಮೂರು ಮಕ್ಕಳ ತಾಯಿ ಪದ್ಮಾವತಿ!

ತಾತಪ್ಪ ಮೊದಲಿನಂತೆಯೇ ಊಟಕ್ಕೆ ಬರುವ. ಪದ್ಮಾವತಿ ಅನ್ಯರಲ್ಲಿ ಕೆಲಸಕ್ಕೆ ಹೋಗುವುದರಿಂದ ಹೊತ್ತಿಗೇನೇ ಉಣ್ಣಲು ಬರಬೇಕಾಗುತ್ತಿದ್ದಿತು. ಬೇಕಾದ ಕಾಲಕ್ಕೆ ಬಂದರೆ ಸಿಕ್ಕುತ್ತಿರಲಿಲ್ಲ. ಮನೆಯಲ್ಲಿ ಹುಡುಗರು ಇರು ತ್ತಿದ್ದರು. ತಾನೇ ಕೈಯಿಂದ ಬುಟ್ಟಿಯೊಳಗಿನ ರೊಟ್ಟಿ, ಏನಿದ್ದ ಕಾಯಿಪಲ್ಲೆ ಹಾಕಿಕೊಂಡು ತಿನ್ನಬೇಕಾಗುತ್ತಿದ್ದಿತು. ಇಷ್ಟಾಗಿಯೂ ಆತ ಗಂಗವ್ವನ ಮನೆಯಲ್ಲಿ ಊಟ ಮಾಡುತ್ತಿರಲಿಲ್ಲ. ಅವಳೂ ಮಾಡು ಅನ್ನುತ್ತಿರಲಿಲ್ಲ. ಅವರು ಇರುವ ರೀತಿಯೇ ಹಾಗಿರಬೇಕಿತ್ತು.

ಆದುದರಿಂದ ತಾತಪ್ಪ ವಾರದಲ್ಲಿ ಏನಿಲ್ಲೆಂದರೂ ಸ್ವಲ್ಪ ಕಾಳು ಕಡಿಗಳನ್ನೂ ಎಣ್ಣೆ ಉಪ್ಪುಗಳನ್ನೂ ಪದ್ಮಾವತಿಗೆ ತಂದು ಕೊಡಲೇಬೇಕಾಗುವುದು. ತಂದೂ ಕೊಡುವನು. ಇದ್ದದ್ದನ್ನು ಹೆಸರಿಗೆ ಉಂಡೂ ಹೋಗುವನು. ನಡುವೆ ತಿನ್ನುಣ್ಣಲಿಕ್ಕೆ ಗಂಗವ್ವನ ಮನೆ ಇದ್ದೇ ಇದ್ದಿತು.

ಹೀಗೆ ದಿನಗಳು ಸಾಗಿದಾಗ ತಾತಪ್ಪನಿಗೆ ಎಮ್ಮೆ ಒಯ್ಯಲಿಕ್ಕೆ ಸಹಜ ಮಾರ್ಗವೊಂದು ಸಿಕ್ಕಂತಾಯಿತು. ಒಂದು ದಿನ ಪದ್ಮಾವತಿಗೆ ಅವನೇ ಕೇಳಿದ:

" ನೀನೂ ದಿನಾ ಒಬ್ಬರಲ್ಲೆ ಕೆಲಸಕ್ಕ ಹೋಗಬೇಕು. ಮನೆಯೊಳಗ ಗೊಡ್ಡ ಯಾತಕ್ಕ ಕಟ್ಟಿಕೊಂಡ ಕೂಡಬೇಕು ? "

" ಹಾಲ ತಿನ್ನುವಾಗ ಬೇಕು; ಈಗ ಬೇಡ ಅಂದರೆ ಹೇಗೆ ? "

ಎಂದು ಪದ್ಮಾವತಿ ಸಮಾಧಾನ ಹೇಳಿದಳು. ಆದರೂ ತಾತಪ್ಪ ವಿವರಿಸಿದ:

"ಸುಮ್ಮನೆ ನೀರ ಹೊತ್ತ ಹಾಕಲಿಕ್ಕೆ ನಿನಗೂ ಕಷ್ಟ ಆಗತದ. ಬೇಕಾದರೆ ನಮ್ಮಲ್ಲೇ ತಂದ ಕಟ್ಟರಿ, ದನಗಳ ಮುಂದಿನ ಚಿಪ್ಪಾಡಿ ತಿಂದ ಬೀಳತದ, ಎಂದು ಗಂಗವ್ವ ಅನ್ನುತ್ತಿದ್ದಳು "

" ಹಾಗಾದರೆ ಒಯ್ದು ಬಿಡರಿ ! "

ಎಂದು ಪದ್ಮಾವತಿ ತಟ್ಟನೆ ಒಪ್ಪಿಗೆ ಕೊಟ್ಟುಬಿಟ್ಟಳು. ಈ ರೀತಿಯು ತಾತಪ್ಪನಿಗೆ ಮನಸ್ಸಿಗೆ ಹತ್ತಿತು. ಅದರಿಂದಲೇ ಮುಂದೆ ಒಂದೆರಡು ದಿನಗಳು ಕಳೆದರೂ ಎಮ್ಮೆಯನ್ನು ಆತ ಒಯ್ಯಲಿಲ್ಲ. ಒಂದು ದಿನ ಮಧ್ಯಾಹ್ನ ಪದ್ಮಾವತಿ ಕೆಲಸಕ್ಕೆ ಹೋದಾಗ ಸುಂದರಿಯೇ ಹೋಗಿ ಎಮ್ಮೆಯನ್ನು ಹೊಡೆದುಕೊಂಡು ಬಂದಳು. ಹಾಗೇ ತರಲಿಕ್ಕೆ ಮಗಳಿಗೆ ಗಂಗವ್ವನೇ ಸೂಚಿಸಿದ್ದಳು.

ಸಾಯಂಕಾಲ ಪದ್ಮಾವತಿ ಅಡವಿಯಿಂದ ಬರುವಷ್ಟರಲ್ಲಿ ಕೊಟ್ಟಿಗೆ ತೆರವಾಗಿದ್ದಿತು. ಮನೆ ಭಣಭಣವೆನ್ನುತ್ತಿದ್ದಿತು. ಅದನ್ನು ಕಂಡು ಅವಳ ಮನಸ್ಸು ಬರಿದಾಯಿತು. ಹಿರಿಯ ಹುಡುಗ ಎದುರಿಗೆ ಬಂದು ಹೇಳಿದ.

" ಅವ್ವಾ, ಸುಂದರಕ್ಕ ಬಂದು ನಮ್ಮ ಎಮ್ಮೆ ಒಯ್ದಳು. "

ಮಗನ ಕಣ್ಣಲ್ಲಿ ನೀರನ್ನು ಕಂಡು ಪದ್ಮಾವತಿಯ ಕಣ್ಣುಗಳೂ ತೇವು ಗೊಂಡವು; ಬಾಯಿ ಜಿಗುಟಾಯಿತು. ಆದರೂ ಮಗನಿಗೆ ಸಮಾಧಾನ ಹೇಳಿ ದಳು:

" ಮತ್ತ ತರೋಣಂತ ಏಳು ಬಾಳಾ. "

" ಈಗ ನೀನೇ ಒಯ್ಯ ಅಂತ ಹೇಳಿದ್ದಿ ? " ಮಗನ ಪ್ರಶ್ನೆಯಿದು.

" ಹೌದು ! "

" ಏಕೆ ? "

" ನನಗ ಕೆಲಸಕ್ಕ ಹೋಗಬೇಕಾಗತದ. ಅದರ ಉಸಾಬರಿ ಯಾರ ಮಾಡತಾರಂತ ಹೇಳಿದ್ದೆ ಮಗು. "

" ನಾನು ಮಾಡತಿರಲಿಲ್ಲೇನವ್ವಾ ? "

" ನಿನಗ ಯಾತಕ್ಕ ಕಷ್ಟ ಅಂತ ಕಳಿಸಿದೆ. ಮತ್ತ ಈಯಲಿಕ್ಕೆ ಆದ ಮೇಲೆ ತರೋಣಲ್ಲ. "

ಎಂದು ಮಗನಿಗೆ ಪದ್ಮಾವತಿ ಸಮಾಧಾನ ಹೇಳಿದಳು ಎಮ್ಮೆ ಇನ್ನು ಮೇಲೆ ತಮಗೆ ತಿರುಗಿ ಸಿಗುವದಿಲ್ಲೆಂಬುದು ಗೊತ್ತಿದ್ದೂ ಕೂಡ ಅವಳು ಹಾಗೆ ನುಡಿಯಬೇಕಿತ್ತು. ಆದರೂ ತಾಯಿಯ ಮಾತಿಗೆ ಹುಡುಗ ಸುಮ್ಮ ನಾಗಲಿಲ್ಲ.

" ಈಗಲೇ ತರೋಣಲ್ಲ. ನಮ್ಮ ಮನೆಯಲ್ಲೇ ಇರಲಿ. ನಾ ಮೇಯಿಸಿ ತರತೇನ, ನೀರ ಕುಡಿಸಿ ತರತೇನ...."

" ಈಗ ಬೇಡ, ಅವರು ಬಂದ ಮೇಲೆ ತರೋಣಂತ. ನೀ ಬೇಕಾದರೆ ನಾಳೆಯಿಂದ ಸಾಲೆಗೆ ಹೋಗು. ಅದಪ್ಪ ಮಾಸ್ತರಿಗೆ ಹೇಳ್ತೇನ. "

" ಅಪ್ಪಾ ಯಾವಾಗ ಬರತಾನ ಅವ್ವಾ ? "

" ಇನ್ನು ಸ್ವಲ್ಪ ದಿನಗಳಲ್ಲಿ ಬಂದಾರಪ್ಪ ! "

ಎಂದು ಉಸ್ಸೆಂದು ಪಡಸಾಲೆಯಲ್ಲಿ ಕುಳಿತಳು. ಅಂದು ಅವಳಿಗೆ ತುಂಬ ದಣಿವು ಎನಿಸಿತು. ಈ ಸಂಸಾರ ಅಸಾರವೆಂದು ಅವಳಿಗೆ ಭಾಸವಾಗ ತೊಡಗಿತು. ಆದರೆ ಈ ಅವಸ್ಥೆ ಅವಳಿಗೆ ಬಹುದಿನ ಉಳಿಯಲಿಲ್ಲ. ಮಹಾ ಯುದ್ಧ ಮುಗಿಯಿತು. ಸರಕಾರ ಮಿಲಟರಿಯನ್ನು ಕಡಿಮೆ ಮಾಡಹತ್ತಿತು.

ಬಾಬಣ್ಣನ ಬಿಡುಗಡೆಯ ಸರತಿಯೂ ಬೇಗ ಹತ್ತುವಂತೆ ತೋರಹತ್ತಿತು. ಅವನಿಂದ ಆಗಾಗ ಕಾಗದಗಳೂ ಬರಹತ್ತಿದುವು.

ಮಹಾಯುದ್ಧ ನಿಂತಿತು! ಜಗತ್ತಿಗೇನೇ ಆನಂದದ ಸುದ್ದಿಯನ್ನು ತಂದಿತು. ಹಲವು ದಿನಗಳಿಂದ ಸುಧಾರಿಸಿದುವೆಂದು ಹೇಳಿಕೊಳ್ಳುವ ರಾಷ್ಟ್ರಗಳೇ ಮಾನವತೆಯನ್ನು ತೊರೆದು ಹೋರಾಡುತ್ತಿದ್ದುವು. ಎರಡು ಮದ್ದಾನೆಗಳ ಕಾದಾಟದಲ್ಲಿ ಕಾಲೊಳಗೆ ಸಿಕ್ಕ ಕಪ್ಪೆಯ ಸ್ಥಿತಿಯಂತೆ ಹಲವು ಚಿಕ್ಕ ದೇಶಗಳ ಗತಿಯಾಗಿದ್ದಿತು. ಎಷ್ಟೋ ಜನ ವ್ಯಾಪಾರಿಗಳಿಗೆ ಹಿಟ್ಲರನೊಬ್ಬ ದೇವನಾಗಿದ್ದ. ದಿನಾಲು ಬೆಳಗಾದರೆ ಅವನ ಹೆಸರನ್ನು ಅವರು ನೆನೆಯುವರು. ಅವನು ಯುದ್ಧ ಹೂಡದಿದ್ದರೆ ಇವರೆಲ್ಲಿ ಇಷ್ಟು ದುಡ್ಡು ಗಳಿಸುತ್ತಿದ್ದರು? ವ್ಯಾಪಾರಿಗಳಿಗೆ ಯುದ್ಧವೊಂದು ಸುಗ್ಗಿಯಾದರೆ ಮಧ್ಯಮ ವರ್ಗದ ಕುಟುಂಬಗಳಿಗೆ ಅದೊಂದು ಕುತ್ತು ಎನಿಸಿದ್ದಿತು. ಎಷ್ಟೋ ಮನೆಗಳು ಮಣ್ಣು ಮುಕ್ಕಿದುವು. ಮನೆಯೊಳಗಿನ ಪಾತ್ರೆಗಳನ್ನು ಮಾರಿಯೂ ತಿಂದಾಯಿತು. ಹಿರಿಯರು ಗಳಿಸಿದ ಆಸ್ತಿಯನ್ನು ಕಳಕೊಂಡು ಕಂಗಾಲ ಆದರು. ಇದೇ ದಾರಿಗೆ ಹತ್ತಿದ ಮನೆತನ ಬಾಬಣ್ಣನದು. ಯುದ್ಧದ ಬಿರುಗಾಳಿಯಲ್ಲಿ ಸಿಕ್ಕ ತರಗೆಲೆಯ ಚೂರೊಂದದು! ಯುದ್ಧ ಮುಗಿದರೆ ಬಿರುಗಾಳಿ ನಿಲ್ಲಲಿಲ್ಲ. ಬಿರುಗಾಳಿ ಹೋಗಿ ಸುಟ್ಟರೆ ಗಾಳಿಯಾಯಿತು. ಪದಾರ್ಥಗಳ ದರಗಳು ಇನ್ನಿಷ್ಟು ಏರಿದುವು. ಹೊಟ್ಟೆಗಾಗಿ ಅಣ್ಣ ತಮ್ಮಂದಿರ ಕುತ್ತಿಗೆ ಕೊಯ್ಯುವ ಕೆಲಸ ಮತ್ತಿಷ್ಟು ಹೆಚ್ಚಿತು.

ಇಂಥ ಕಾಲದಲ್ಲಿ ಬಾಬಣ್ಣ ನವಕರಿ ಕಳೆದುಕೊಂಡು ಮನೆಗೆ ಮರಳಿದ್ದ. ಅವನಿಗೆ ಕೆಲಸ ಹೋದುದಕ್ಕೆ ದುಃಖವಿಲ್ಲ. ಆತ ಮನೆಗೆ ಬರಲಿಕ್ಕೇನೇ ಆತುರನಾಗಿದ್ದ. ಸುಖದುಃಖದಲ್ಲಿ ಸಹಚಾರಿಣಿಯಾದ ಪದ್ಮಾವತಿಯ ಬಗೆಗೆ ಎರಡು ಬಗೆದು ಊರನ್ನು ಬಿಟ್ಟಿದ್ದ. ಈಗ ಒಡೆದ ಮನಸ್ಸನ್ನು ಒಂದುಗೂಡಿಸಿಕೊಳ್ಳುವ ಹವಣಿಕೆಯಲ್ಲಿದ್ದ. ಹೆಂಡತಿಯ ಹತ್ತಿರ ತನ್ನೆಲ್ಲ ಅಪರಾಧಗಳನ್ನು ಒಪ್ಪಿಬಿಡಬೇಕೆಂದು ಯೋಚಿಸಿದ. ಮುಂದಿನ ವಿಚಾರವನ್ನು ಮಾಡದೆ ತಾನು ಹಾಗೆ ನಡೆದುದಕ್ಕೆ ಪಶ್ಚಾತ್ತಾಪವನ್ನೂ ಪಟ್ಟುಕೊಂಡ. ಮನೆಗೆ ಹೋದೊಡನೆಯೇ ಪದ್ಮಾವತಿ ತನನ್ನು ಹೇಗೆ ಕಾಣುವಳೋ ಎಂಬ ಚಿಂತೆಯಿಂದಲೇ ಬಂದ. ಅವಳಿಗೂ ಹುಡುಗರಿಗೂ ಹೊಸ

ಹೊಸ ಅರಿವೆಗಳನ್ನು ಮುಂಬಯಿಯಲ್ಲಿ ಕೊಂಡು ತಂದಿದ್ದ. ಹಣ್ಣು ಹಂಪ ಲಗಳನ್ನು ಸಾಕಷ್ಟು ತಂದಿದ್ದ.

ಮುಂಜಾನೆ ಒಂಭತ್ತು ಗಂಟೆಗೆ ಆತ ಟಾಂಗೆಯನ್ನು ಹತ್ತಿ ಸ್ಟೇಶನ ದಿಂದ ಬರುವಷ್ಟರಲ್ಲಿ ಪದ್ಮಾವತಿಯು ಇನ್ನೊಬ್ಬರಲ್ಲಿ ಕಸತೆಗೆಯಲಿಕ್ಕೆ ಹೊರ ಡಲು ಸಿದ್ಧವಾಗಿದ್ದಳು. ತಲೆಯಮೇಲೆ ನೀರಿನ ತಂಬಿಗೆ, ಕೈಯಲ್ಲಿ ಕುರ್ಚಿಗೆ, ಹಣೆಯಲ್ಲಿ ಅಗಲವಾದ ಕುಂಕುಮ. ಬಾಬಣ್ಣನಿಗೆ ಲಕ್ಷ್ಮಿಯೇ ಎದುರು ಬಂದಂತಾಯಿತು. ಟಾಂಗೆಯಿಂದ ಇಳಿದವನೇ ಪತ್ನಿಯ ತಲೆಯ ಮೇಲಿನ ತಂಬಿಗೆ ಇಳಿಸಿಕೊಂಡು ಎರಡು ಗುಟುಕು ನೀರು ಕುಡಿದ. ಕಣ್ಣಿಗೂ ಹಚ್ಚಿ ಕೊಂಡ. ಹೆಂಡತಿಯನ್ನು ಆದರದಿಂದ ಒಂದು ಕ್ಷಣ ನೋಡಿದ. ಅವಳ ಅಂದಿನ ಇಂದಿನ ರೂಪುಗಳನ್ನು ನೆನೆದು ಕಳವಳವಾಯಿತವನಿಗೆ. ಇಂಥ ಹೂವನ್ನು ತುಳಿದೆನಲ್ಲ, ಎಂದು ಮರುಗಿದ.

ಬಾಬಣ್ಣನ ಹಿರಿಯ ಮಗ ಟಾಂಗೆಯೊಳಗಿನ ಸಾಮಾನು ಇಳಿಸಲು ಹಾತೊರೆಯುತ್ತಿದ್ದ ಅದು ಅವನಿಗೆ ಮೀರಿದ ಕೆಲಸವಾಗಿತ್ತು. ಅವನನ್ನು ಪದ್ಮಾವತಿ ಕರೆದು ಹೇಳಿದಳು,—

" ಚಂದ್ರವ್ವ ಅಬಚಿಗೆ ಹೇಳಿ ಬಾ ಹೋಗು. ಇಂದ ನನಗ ಕಸತೆಗೆ ಯಲಿಕ್ಕೆ ಬರಲಿಕ್ಕೆ ಆಗುವದಿಲ್ಲಂತ. "

ಹುಡುಗ ಉತ್ಸಾಹದಿಂದ ಕೇಕೆ ಹೊಡೆಯುತ್ತ ಓಡಿದ. ಚೇತನದ ಚಿಲುಮೆಯಾಗಿದ್ದ.

" ಅಪ್ಪಾ ಬಂದ ! ಅವ್ವಾ ಮನೆಯಲ್ಲಿರುವಳು ಇಂದು ! "

ಎಂಬುದು ಅವನು ಪಠಿಸುವ ಮಂತ್ರವಾಗಿದ್ದಿತು. ಆ ದಿನವನ್ನು ಅವ ರೆಲ್ಲರೂ ಆನಂದದಿಂದ ಕಳೆದರು. ಬಾಬಣ್ಣ ಮಧ್ಯಾಹ್ನದಲ್ಲಿಯೂ ಮಲಗ ಲಿಲ್ಲ. ಏನಾದರೂ ಒಂದು ನಿಮಿತ್ತ ತೆಗೆದು ಹೆಂಡತಿಯ ಕೂಡ ಮಾತಾಡು ತ್ತಲೇ ಇದ್ದ. ತಂದ ಅರಿವೆಗಳನ್ನೆಲ್ಲ ಬ್ಯಾಗಿನಿಂದ ತೆಗೆದುಕೊಟ್ಟ. ಹೊಲಿದ ಬಟ್ಟೆಗಳವು. ಹುಡುಗರು ತೊಟ್ಟುಕೊಂಡು ಅಂಗಳಕ್ಕೆ ಆಡಲಿಕ್ಕೆ ತೆರಳಿದುವು. ಬಹುದಿನಗಳಿಂದ ಅವರು ಹೊಸ ಅರಿವೆಗಳನ್ನು ಕಂಡಿರಲಿಲ್ಲ. ಆದರಿಂದ ಅಂದು ಅವರಿಗೆ ತುಂಬ ಸಂತಸವಾಗಿದ್ದಿತು.

ಬಾಬಣ್ಣ ಮಕ್ಕಳಿಗೆ ಕಿತ್ತಿಳೀ ಹಣ್ಣುಗಳನ್ನು ಸುಲಿದುಕೊಟ್ಟ. ಹೆಂಡತಿಗೂ ಎರಡು ತೊಳೆಗಳನ್ನು ತಿನ್ನಿಸಿದ. ಬ್ಯಾಗಿನೊಳಗಿನ ಸುವಾಸನೆಯ ಎಣ್ಣೆಯ ಬಾಟಲಿಯನ್ನು ತೆಗೆದು ಅವಳ ಮೂಗಿಗೆ ಹಿಡಿದ. ಪದ್ಮಾವತಿ ನಕ್ಕು ನುಡಿದಳು,—

"ಇದರೊಳಗೇ ಎಲ್ಲ ದುಡ್ಡ ಹಾಕತ ಇರ್ರಿ!"

"ನೀನೂ ಹತ್ತರ ಇಲ್ಲ, ಇಂಥದೇನಾದರೂ ಮಾಡಲಿಕ್ಕೆ ಬೇಕಲ್ಲ."

"ನಾನಿಲ್ಲವಾದರೂ ಮತ್ತು ಯಾರಾದರೂ ಇದ್ದಾದಾರಲ್ಲ."

"ಮತ್ತ ಯಾರ ಇರತಾರಃ?"

ಸಲಿಗೆಯಿಂದ ಬಾಬಣ್ಣ ಅವಳ ಗಲ್ಲದ ಮೇಲೆ ಒಂದು ಮೆಲ್ಲನೆ ಏಟು ಕೊಟ್ಟ. ಈ ರೀತಿ ಆ ದಿನ ಅವರು ಒಬ್ಬರೊಬ್ಬರು ವಿಶ್ವಾಸದಲ್ಲಿ ಬರಹತ್ತಿದಳು. ಅಂದು ಕಳೆದುಕೊಂಡ ತನ್ನ ಗಂಡನನ್ನು ಪದ್ಮಾವತಿ ಮರಳಿ ಪಡೆದರು. ಆನಂದಗೊಂಡಳು. ತೆರವಿದ್ದ ಮನೆಯೆಲ್ಲ ಅವಳಿಗೆ ಸಂಪತ್ತಿನಿಂದ ತುಂಬಿದಂತೆ ಎನಿಸಿತು. ಹರುಷದಲ್ಲಿ ತೇಲಾಡಿದಳು.

ಮರುದಿನದಿಂದ ಸಂಸಾರದ ಚಿಂತೆ ಇದ್ದೇ ಇದೆಯಲ್ಲ. ಆದರೂ ಬಾಬಣ್ಣ ಹೆಂಡತಿಯನ್ನು ಇನ್ನು ಮೇಲೆ ಕೂಲಿಗೆ ಹೋಗಗೊಡಲಿಕ್ಕಿಲ್ಲವೆಂದೂ ನಿಶ್ಚಯಿಸಿದ. ಪ್ರಸಂಗ ಬಂದರೆ ತಾನೇ ದುಡಿದು ತರಬೇಕು ಎಂದೂ ಲೆಕ್ಕ ಹಾಕಿದ. ಬರುವಾಗ ಸಂಗಡ ಸ್ವಲ್ಪ ಹಣವನ್ನೂ ತಂದಿದ್ದ. ಅದರಿಂದ ಅವನಿಗೆ ತುಸು ಧೈರ್ಯವೂ ಇತ್ತು. ಅದು ತೀರುವಷ್ಟರಲ್ಲಿ ಏನಾದರೂ ಮಾಡಿದರಾಯಿತೆಂದು ನಿಶ್ಚಿಂತೆಯಿಂದ ಇದ್ದ. ಆದರೆ ಪದ್ಮಾವತಿಯ ಮನಸ್ಸಿಗೆ ಶಾಂತಿಯಿಲ್ಲ. ಹೀಗೆ ಮೈಮರೆತು ಕುಳಿತರೆ ಮುಂದೆ ಮನೆ ಸಾಗದೆಂದು ಅವಳು ಅರಿತಿದ್ದಳು. ಮುಂಜಾಗ್ರತೆಯಿಂದ ಬಾಳಲು ಅವಳು ಹವಣಿಸುತ್ತಿದ್ದಳು. ಅದರಂತೆ ಗಂಡನಿಗೆ ಆಗಾಗ ಎಚ್ಚರಿಸುತ್ತಿದ್ದಳು.

"ಅದರ ಚಿಂತೆ ಬಿಡ ನೀ." ಎನ್ನುವ ಬಾಬಣ್ಣ.

"ಏನ ಚಿಂತೆ ಬಿಡ ಅಂತೀರಿ?"

"ಏನೂ ಯೋಚಿಸಬೇಡ ನೀ. ಇನ್ನು ನಾ ಬಂದಿದೇನಲ್ಲ."

"ಬಂದೀದೀರಿ ಆದರೂ...."

ಎಂದು ತನ್ನ ಚಿಂತೆಯನ್ನು ಮುಂದೊಡ್ಡುತ್ತಲೇ ಇದ್ದಳು. ಬಾಬಣ್ಣನೂ ವಿಚಾರ ಮಾಡದೆ ಇರಲಿಲ್ಲ. ಒಂದು ಕೂರಿಗೆ ಹೊಲದಲ್ಲಿ ತಮ್ಮ ಕುಟುಂಬ ಸಾಗದೆಂಬುದು ಅವನಿಗೂ ಗೊತ್ತಿತ್ತು. ಅನ್ಯರ ಅಡವಿಯನ್ನು ಸಾಗುವಳಿ ಮಾಡಲಿಕ್ಕೆ ಹಿಡಿಯಲಿಕ್ಕೇಬೇಕು. ಆದರೆ ಈ ದಿನಗಳಲ್ಲಿ ಹೊಲಗಳು ಸಿಕ್ಕುವದೆಂತು? ಬಿತ್ತಿಗೆಗಳು ಇಷ್ಟರಲ್ಲಿಯೇ ಆಗಿಹೋಗಿದ್ದುವು. ಏನು ಮಾಡಬೇಕು? ಯಾರನ್ನು ಕೇಳಬೇಕು? ಎಂಬ ವಿಚಾರದಲ್ಲಿಯೇ ಇದ್ದ. ಆದರೂ ಹೆಂಡತಿಗೆ ತನ್ನ ಚಿಂತೆಯ ಸುಳುವು ಹತ್ತಗೊಟ್ಟಿರಲಿಲ್ಲ. ಮೇಲಾಗಿ ಅವಳಿಗೆ ಧೈರ್ಯವನ್ನೇ ಹೇಳುತ್ತ ಸಾಗಿದ್ದ.

ಬಾಬಣ್ಣನಿಗೆ ಊರಲ್ಲಿ ಯಾರ ಹತ್ತರ ಹೋಗಬೇಕೆಂಬುದು ತಿಳಿಯದಾಯಿತು. ನೇರವಾಗಿ ಇನ್ನೊಬ್ಬರಲ್ಲಿ ಕೂಲೀ ಮಾಡಿ ಹೊಟ್ಟೆ ತುಂಬಿಕೊಳ್ಳಲಿಕ್ಕೆ ಅವನ ಮನಸ್ಸು ಒಗ್ಗದು. ಮಿಲಟರಿಯ ಪಗಾರ ಹೋದರೂ ಅಲ್ಲಿಯ ಜೀವನದ ರೀತಿ ಹೋಗಿರಲಿಲ್ಲ. ದಿನಾಲು ಎರಡು ಹೊತ್ತು ಚಹ ಬೇಕು. ಸಿಗಾರೇಟು ಬೇಕು. ಇವೆಲ್ಲ ಬೇಕು ನಿಜ. ಆದರೆ ತರುವುದೆಲ್ಲಿಂದ? ಬಾಬಣ್ಣ ಯೋಚಿಸಿ ಯೋಚಿಸಿ ಚೆನ್ನಪ್ಪ ಸೆಟ್ಟರ ಹತ್ತರ ಹೋದ ಮೊದಲಿನಿಂದಲೂ ಸೆಟ್ಟರು ನೆರವಾಗುತ್ತ ಬಂದವರು. ಸರಳ ವ್ಯವಹಾರಿಗಳವರು. ಹಿಂದಕ್ಕೆ ಬಾಬಣ್ಣನ ಒಂದು ಕೂರಿಗೆ ಹೊಲವನ್ನು ತಕ್ಕೊಂಡಿದ್ದರೂ "ನನಗೆ ಹೊಲ ಬೇಡ, ನಿನ್ನ ಹೊಲ ನಿನಗೇ ಇರಲಿ. ಆಡವಿ ಹಿರಿಯರು ಗಳಿಸಿದ್ದು, ಮನೆತನಕ್ಕೆ ಇರುವುದು ಒಳ್ಳೇದು. ಮಾರಬೇಡ. ಹೊಲವು ಒಕ್ಕಲಿಗನಿಗೆ ಒಂದು ವಿಭೂತಿ ಇದ್ದಂತೆ. ಅದನ್ನು ಕಳಕೊಳ್ಳಬೇಡ. ನನ್ನ ರೂಪಾಯಿಗಳನ್ನು ಈಗ ನಿನಗೆ ಕೊಡಲಿಕ್ಕೆ ಆಗದಿದ್ದರೆ ಇನ್ನಾರು ತಿಂಗಳಿಗೆ ತಂದುಕೊಡು" ಎಂದು ಬುದ್ಧಿವಾದ ಹೇಳಿದ್ದರು. ಅಂದರೂ ಬಾಬಣ್ಣನೇ ಅವರ ಬೆನ್ನು ಹತ್ತಿ ಹೊಲ ಕೊಟ್ಟಿದ್ದ ಇದನ್ನೆಲ್ಲ ನೆನೆದುಕೊಂಡು ಅವರಲ್ಲಿ ಹೋಗುವುದೇ ಹಿತಕರವೆಂದು ಯೋಚಿಸಿದ. ಕಲ್ಲಪ್ಪನನ್ನೂ ಸೆಟ್ಟರನ್ನೂ ತೂಗಿ ನೋಡಿದ. ಸೆಟ್ಟರ ಪರಡಿಗೆಯೇ ನೆಲಕ್ಕೆ ಕುಳಿತಿತು. ಕಲ್ಲಪ್ಪನನ್ನು ಸರಿಸಿ ಅಲ್ಲಿ ಗೌಡನನ್ನು ಇಟ್ಟ. ಆದರೂ ಆ ಪರಡಿಗೆಯೂ ಹಗುರಾಯಿತು. ಗಂಗವ್ವನ ಸಂಬಂಧ ಸಮನಲ್ಲವೆಂಬುದನ್ನಂತೂ ಅವನು ಬಲ್ಲ. ಮಾಸ್ತರರ ಮನೆಯಿಂದ ಇಂಥ ನೆರವು ಸಿಗುವುದು ಅಶಕ್ಯವೆಂದು ಭಾವಿಸಿದ. ಅದಕ್ಕಂತಲೇ ಆತ ಸೆಟ್ಟಿಯ ಹತ್ತರ ಹೋಗಿ ಕೇಳಿದ:—

ಆದ ಮೇಲೆ ಕೊಡರಿ. ನನ್ನ ಪಾಲಿನಲ್ಲಿ ಉಳಿದ ಒಂದ ಎತ್ತ ನಮ್ಮದಾಗಿ ದುಡಿತದ. ಆಯ್ತಿಲ್ಲೋ ? ”

“ ಎತ್ತ ಕೊಡತೀರಿ, ತೋಟಾ ಕೊಡತೀರಿ, ಮಾಡಲಿಕ್ಕೆ ನಮ್ಮದೇನ ನೋಯಿಸತದ?” ಬಾಬಣ್ಣ ಹಿಗ್ಗಿ ನುಡಿದ.

“ ಎಲ್ಲಾ ಸರಳ ಹೋಗಬೇಕು ಇಷ್ಟೇ. ” ಎಂದ ತಾತಪ್ಪ.

“ ಸರಳ ಹೋಗಲಿಕ್ಕೇನು ? ನನ್ನ ಸ್ವಭಾವ ಅಂತೂ ಬಾಬಣ್ಣನಿಗೆ ಮೊದಲಿನಿಂದೂ ಗೊತ್ತದ. ಯಾವಾಗಾದರೂ ನಮ್ಮ ಅಂಗಡಿಯ ಸಾಮಾನು ಬಂದರೆ ಸ್ಟೇಶನಕ್ಕ ಎರಡ ಸಾರಿಗೆ ಗಾಡಿ ತಗೊಂಡ ಬರಬೇಕ ಮಾತ್ರ. ”

“ ಎರಡೇಕೆ ಹತ್ತ ಸಾರಿಗೆ ಬಂದಾನ ಬಿಡಿರಿ. ನಿಮ್ಮ ಎತ್ತು ನಿಮ್ಮ ಗಾಡಿ, ಬರದೆ ಏನು ಮಾಡತಾನ?” ಎಂದ ತಾತಪ್ಪ.

“ ಆಯ್ತು: ಅವನ ಎತ್ತಿಗೆ ಏನ ಕೊಡೋದ ಕೊಡತೇವ ನಾವು. ಪುಕ್ಕಟ ಸಾಮಾನ ತರಲಿಕ್ಕೂ ಕರೆಯುವದಿಲ್ಲ. ”

“ ಸೆಟ್ಟರ, ನೀವು ಲೆಕ್ಕ ಇಲ್ಲದ ಇರತೀರಿ ಏನರಿ ? ” ಬಾಬಣ್ಣ ನಕ್ಕು ಕೇಳಿದ.

“ ಲೆಕ್ಕಾ ಹಾಕಿ ಮಾಡಲಿಕ್ಕೆ ಹೋಗೇ ಈ ತೊಡಕಿನೊಳಗ ಬಿದ್ದೇವ ನಾವು ಯಾರ ಮಾಡಬೇಕು ಅವರೇ ಮಾಡಬೇಕು. ನಿಮ್ಮ ಕಡೆಯಿಂದ ವ್ಯಾಪಾರ ಆಗುವದಿಲ್ಲ, ನಮ್ಮ ಕೈಯಿಂದ ತೋಟ ಮಾಡಲಿಕ್ಕೆ ಆಗುವದಿಲ್ಲ.”

ಸೆಟ್ಟರ ಮಾತಿನ ಕಡೆಗೆ ತಾತಪ್ಪನ ಲಕ್ಷ್ಯವಿರಲಿಲ್ಲ. ಆತ ವಿಚಾರದಲ್ಲಿ ಇದ್ದ. ಈ ತೋಟವನ್ನು ಸಾಗಿಸುವ ಸಾಮರ್ಥ್ಯ ಬಾಬಣ್ಣನಲ್ಲಿದೆಯೇ? ಈಗ ಎತ್ತಿನ ಬೆಲೆ ಸಾಲವೆಂದೇ ತಿಳಿಯಬೇಕು. ಮುಂದೆ ಬೆಲ್ಲ ಮಾರಿ ಕೊಡಲಿಕ್ಕೇನೋ ಬರುವದು. ಆದರೆ ಹಗಲಿರುಳು ತೋಟದಲ್ಲಿ ಇರಲಿಕ್ಕೆ ಬೇಕು. ಊರ ನೆರೆಯ ತೋಟ. ಜನರ ಕಾಟ, ದನಕರಗಳ ಹಾವಳಿ ಬಹಳ. ಚನ್ನಾಗಿ ಕಾಯಲಿಕ್ಕೆ ಬೇಕು. ಅದೆಲ್ಲ ಆಗದ್ದಕ್ಕೆ ಸೆಟ್ಟರು ಬೇಸತ್ತು ನಮ್ಮ ಕೊರಳಲ್ಲಿ ಹಾಕಲು ನೋಡುತ್ತಿದ್ದಾರೆ. ಇರಲಿ. ಈಗ ತೋಟ ಮಾಡದಿದ್ದರೆ ಬಾಬಣ್ಣನಿಗೆ ಉಪಜೀವನದ ದಾರಿಯಿಲ್ಲ. ಸದ್ಯಕ್ಕೆ ಕಾಯಿಪಲ್ಲೆ ಮಾರಿದ ಜೋಳದಿಂದ ಇವರ ಕುಟುಂಬ ಸಾಗುವುದು. ಒಮ್ಮೆ ದೈವಪರೀಕ್ಷೆ

ಮಾಡಿನೋಡಬೇಕು. ಬಾಬಣ್ಣ ಕಳಕೊಳ್ಳುವದನ್ನೆಲ್ಲ ಕಳಕೊಂಡಿದ್ದಾನೆ. ಇನ್ನೇನು ಆಗಬೇಕಾಗಿದೆ? ಇದರಿಂದ ಅವನ ಪ್ರಪಂಚ ಸುಧಾರಿಸಬಾರ ದೇಕೆ? ಎಂದು ವಿಚಾರಿಸಿ, ತಾತಪ್ಪ ಸೆಟ್ಟರಿಗೆ ಹೇಳಿದ:

"ಇನ್ನೊಂದು ತಾಸಿನಲ್ಲಿ ಏನಂಬೋದು ಬಂದ ತಿಳಸ್ತೇವೆ."

"ತಿಳಸರಿ ಅಲ್ಲ. ವಿಚಾರಮಾಡಿ ಸಂಜೆಯುವರೆಗೆ ತಿಳಿಸಿರಿ." ಸೆಟ್ಟರು ಅಂದರು.

"ನಮ್ಮನ್ನು ಕೇಳದೆ ಮತ್ತ ಯಾರಿಗಾದರೂ ವಚನ ಕೊಟ್ಟೇರಿ ಮತ್ತ!"

ಬಾಬಣ್ಣ ಎದ್ದು ಬರುವಾಗ ಸೆಟ್ಟರನ್ನು ಎಚ್ಚರಿಸಿದ. ತಾತಪ್ಪ ಅಂಗಡಿ ಬಿಟ್ಟು ತುಸುದೂರ ಬಂದಮೇಲೆ ಅಳಿಯನಿಗೆ ಕೇಳಿದ:

"ನಿನ್ನ ಕೈಯಿಂದ ಆದೀತಲ್ಲ?"

"ಆಗದೇನು? ಒಳ್ಳೇ ಮಾಡತೇನೆ." ಬಾಬಣ್ಣ ನಿಶ್ಚಿತ ಸ್ವರದಲ್ಲಿ ಹೇಳಿದ.

"ಪದ್ಮಾವತಿಗೂ ಒಂದು ಮಾತ ಕೇಳು. ಈಗ ತೋಟ ಮಾಡಿದರೆ ನಾಲ್ಕನೂರು ರೂಪಾಯಿ ಸಾಲ ಮಾಡಿಕೊಂಡಂತೇನೆ. ಆದರೂ ಎತ್ತ ಇರ ತದ. ದುಡಿಯುವವರಿಗೆ ಇದೇನೂ ಕೆಟ್ಟಲ್ಲ ಮಾಡೋದೇ ಆದರೆ ಇಂದ ಶುಕ್ರ ವಾರ ಅದೆ. ತೋಟ ನೋಡಿ ಬರೋಣ. ಪದ್ಮಾವತಿಗೂ ಬರಲಿಕ್ಕೆ ಹೇಳು."

"ಆಕೆಗೇನು ತಿಳಿಯುವದು?"

"ಹುಚ್ಚ ಇದ್ದೀದಿ ಬಾಬು ನೀ. ನಮಗೇನ ತಿಳಿತದ ಆಕೆಗೆ ತಿಳಿದಷ್ಟು ತೋಟದೊಳಗ? ಸಣ್ಣಂದಿರುವಾಗ ತವರುಮನೆಯೊಳಗ ತೋಟಪಟ್ಟಿ ನೋಡಿದಾಕೆ ಕಾಯಿಪಲ್ಲೆ ಎಷ್ಟ ಹೊರಟೇತು, ಮಾರಿ ಎರಡಪಾಲ ಸೆಟ್ಟ ರಿಗೆ ಕೊಟ್ಟ ನಮ್ಮ ಹೊಟ್ಟೆ ಈಗ ನಡೆಯುವಂತೆ ಅದೆಯೋ ಇಲ್ಲವೋ ಎಲ್ಲ ವನ್ನೂ ಆಕೆಯೇ ನೋಡುವಾಕೆ. ಅದಕ್ಕೇ ಎಲ್ಲರೂ ಕೂಡಿ ಹೋಗೋಣ."

ತಾತಪ್ಪ ಅಳಿಯನಿಗೆ ಸರಿಯಾಗಿ ಬೋಧಿಸಿದ. ಅದರಂತೆ ಮೂವರೂ ಹೋಗಿ ಮಧ್ಯಾಹ್ನ ತೋಟ ತಿರಗಾಡಿ ನೋಡಿ ಬಂದರು. ಹಾಗೆಯೇ ಅಲ್ಲಿಯೇ ಕಟ್ಟಿದ ಎತ್ತುಗಳನ್ನೂ ತಾತಪ್ಪ ಪರೀಕ್ಷಿಸಿದ. ಎರಡೂ ಎತ್ತಿನ ಬಾಲ ಜಗ್ಗಿ ನೋಡಿದ. ಸುಳಿಯನ್ನೂ ಪರೀಕ್ಷಿಸಿದ. ಆಮೇಲೆ ಅಳಿಯನಿಗೆ ಮಾಸಲು

ಬಣ್ಣದ ಎತ್ತು ಇರಲೆಂದು ಹೇಳಿದ. ಪದ್ಮಾವತಿಯೂ ತೋಟಮಾಡಲಿಕ್ಕೆ ಒಪ್ಪಿಗೆ ಕೊಟ್ಟಳು. ಆದರೆ ಮನೆಬಿಟ್ಟು ಇಲ್ಲೇ ಇರಬೇಕಾಗುವದೆಂದೂ ಸೂಚಿಸಿದಳು.

"ಬೇಕಾದಮೇಲೆ ಇರೋದಲ್ಲ!" ಎಂದ ಬಾಬಣ್ಣ.

"ನಿಮ್ಮದಾದರೂ ಊರೊಳಗ ಏನದ? ಇಲ್ಲೇ ಹೇಗಾದರೂ ಹಾಕಿದ ಜೋಪಡಿ ಅದ. ಬಂದ ನಿಂತಬಿಟ್ಟರಾಯಿತು." ತಾತಪ್ಪ ಹೇಳಿದ.

"ನಿಲ್ಲೋದ ಆಯ್ತು. ನಿಮ್ಮ ಹೊಟ್ಟೆಯ ತಾಪತ್ರಯ ಆಗತದ ಅಲ್ಲ!"

ಪದ್ಮಾವತಿಯ ಚಿಂತೆಯ ಮಾತಿದು. ಸೊಸೆಯ ಲೆಕ್ಕದ ಮಾತಿಗೆ ತಾತಪ್ಪನೂ ತಲೆದೂಗದಿರಲಿಲ್ಲ. ಅವಳ ಪ್ರೇಮಕ್ಕೆ ಮನಸೋತು ನುಡಿದ:

"ನೀವು ಇಲ್ಲಿ ಬಂದ ಮೇಲೆ ನನ್ನ ಕೆಲಸ ಏನು ಊರೊಳಗೆ ಇದೆ? ನಾನೂ ಇಲ್ಲೇ ಬಂದಬಿಡತೇನಿ."

"ಆಮೇಲೆ ನಮ್ಮ ಪ್ರಪಂಚ ಸಿಸ್ತ ಕೂತಿತೆಂದೇ ತಿಳಿಯಿರಿ ಮಾಮಾ. ಇವರು ಇಂಥವರು. ಹೋದರೆ ಹೋಯ್ತು ಬಂದರೆ ಬಂತು ಅನ್ನುವವರು. ನನ್ನ ಸುತ್ತ ಮೂರು ಮಕ್ಕಳು. ಎಲ್ಲಾ ಕಡೆಗೂ ನಾನೇ ಹೇಗೆ ನೋಡಲಿ? ಇವರ ಮೊಟ್ಟೆ ಹೂಡಿದರೆಂದರೆ ನಾನೇ ನೀರ ಉಣಿಸಲಿಕ್ಕೆ ಹೋಗಲಿಕ್ಕೆ ಬೇಕು. ಹುಡುಗನಿಗೇನ ಕಬ್ಬಿನೊಳಗ ಹಾಯಲಿಕ್ಕೆ ಬರತದ? ಇನ್ನೂ ಅವನಿಗೆ ಸಲಿಕೆ ಹಿಡಿದು ಏನು ಗೊತ್ತು?"

"ಇಲ್ಲದ ಒಂದನ್ನ ತಕ್ಕೊಂಡ ಕೂಡತಾಳ ಈಕೆ." ಬಾಬಣ್ಣ ಹರಿಹಾಯ್ದ.

"ಅವಳ ಅನ್ನೋದೇ ಸರಿ ಅದ ಬಾಬು. ತೋಟದೊಳಗಿನ ಕೆಲಸ ನಿನಗಿನ್ನೂ ಗೊತ್ತಿಲ್ಲ. ಹೆಂಗಸಾಗಿ ಅವಳಿಷ್ಟ ಹೇಳತಾಳ. ಕೇಳಕೊಂಡ ಹೋಗು."

ತಾತಪ್ಪ ಅಳಿಯನಿಗೆ ಸಮಾಧಾನ ಹೇಳಿದ.

"ನೀನೂ ಒಳ್ಳೇ ಹೇಳುವವನಾದಿಯಲ್ಲ? ಹೆಂಡತಿ ಮಾತ ಕೇಳಕೊಂಡ ಇರ ಅನ್ನುವಿ ಏನು ನನಗೆ?" ಬಾಬಣ್ಣ ಕೆರಳಿ ಕೇಳಿದ.

"ಹೆಂಡತಿ ಆದರೆ ಏನಾಯ್ತು? ಹಿತದ ಮಾತ ಇದ್ದಾಗೆ ಕೇಳಬಾರದೇನು?"

ತೋಟ ನೋಡಿ ತಿರುಗಿ ಮನೆಗೆ ಬರುವಾಗ ಮಾವ ಅಳಿಯಂದಿರಲ್ಲಿ ಹೀಗೆ ವಾದ ನಡೆದಿತ್ತು.

೧೬

ಬಾಬಣ್ಣ ತೋಟ ಮಾಡಿದ. ಎತ್ತು, ಹಗ್ಗ, ಹಂಗಡಗಳನ್ನೆಲ್ಲ ಸೆಟ್ಟರನ್ನೂ ಕರೆದುಕೊಂಡು ಹೋಗಿ ಅವರ ಸಮಕ್ಷಮ ತನ್ನ ಸ್ವಾಧೀನ್ಯತಕ್ಕೊಂಡ. ಆಮೇಲೆ ಎತ್ತಿನ ಬಗ್ಗೆ ಮಾತು ಬಂತು. ಮಾವನು ಹೇಳಿದಂತೆ ಮಾಸಲು ಬಣ್ಣದ ಎತ್ತು ತನಗೆ ಇರಲೆಂದು ಹೇಳಿದ. ಆಗ ಸೆಟ್ಟರು ಆ ಎತ್ತಿನ ಪಾಲಿಗೆ ಇಪ್ಪತ್ತೈದು ರೂಪಾಯಿ ಹೆಚ್ಚಿಗೆ ಹಾಕಬೇಕಾಗುವದೆಂದು ಹೇಳಿದರು. ಬಾಬಣ್ಣ ಸ್ವಲ್ಪ ಹಿಂದೆ ಮುಂದೆ ನೋಡಿದ ಇಷ್ಟೆಲ್ಲ ಆದ ಮೇಲೆ ಸ್ವಲ್ಪ ಹಣದಲ್ಲಿಯೇ ಎಲ್ಲ ವ್ಯವಹಾರ ಮುರಿಯುವುದು ಒಳಿತಲ್ಲವೆಂದು ಬಗೆದ. ಅದರಂತೆ ಕಾಗದ ಒಂದನ್ನೂ ಸೆಟ್ಟರಿಗೆ ಮಾಡಿಕೊಟ್ಟ. ಆಮೇಲೆ ಮರುದಿನ ತೋಟದೊಳಗಿನ ತನ್ನ ಬಂಡಿಯನ್ನೇ ಹೂಡಿಕೊಂಡು ಬಂದು ಮನೆಯಲ್ಲಿಯ ಸಾಮಾನುಗಳನ್ನೆಲ್ಲ ಹೇರಿಕೊಂಡು ತೋಟಕ್ಕೆ ಹೋದ. ಪದ್ಮಾವತಿಯು ಬಂಡಿಯಲ್ಲಿ ಒಯ್ಯಲಿಕ್ಕೆ ಬಾರದಂಥ ಗಡಿಗೆ ಮಡಿಕೆಗಳನ್ನು ಬುಟ್ಟಿಯಲ್ಲಿ ತುಂಬಿಕೊಂಡು ತಲೆಯ ಮೇಲಿಂದ ತೋಟಕ್ಕೆ ಸಾಗಿಸಿದಳು. ಅಂದು ಅವಳು ತೋಟಕ್ಕೂ ಮನೆಗೂ ಐದಾರು ಸಾರಿಗೆ ಮಾಡಿದರೂ ದಣಿವೆಂಬುದು ಅವಳ ಕನಸಿನಲ್ಲಿಯೂ ಇಲ್ಲ. ಹಗಲೆಲ್ಲ ಇಷ್ಟು ಎಡತಾಕಿಯೂ ಇರುಳು ತೋಟದೊಳಗಿನ ಜೋಪಡಿಯನ್ನೆಲ್ಲ ಸ್ವಚ್ಛ ಮಾಡಿದಳು, ಸಾರಿಸಿದಳು. ಮರುದಿನದ ಒಳ್ಳೆಯ ಮುಹೂರ್ತದಲ್ಲಿ ಅಲ್ಲಿಯೇ ಅಡಿಗೆ ಮಾಡಲು ಬರುವಂತೆ ಅಣಿಗೊಳಿಸಿದಳು.

ಆ ದಿನ ತಾತಪ್ಪನೂ ಅಲ್ಲಿಯೇ ಊಟಕ್ಕೆ ಬಂದ. ಮೊದಲಿನ ದಿನ ತಣಿವಿಗೆಂದು ಅನ್ನ ಮೊಸರನ್ನೇ ಮೊದಲು ಊಟಕ್ಕೆ ಮಾಡಿದ್ದಳು. ಎಲ್ಲರೂ ಕೂಡಿ ಆನಂದದಿಂದ ಊಟ ಮಾಡಿದರು. ಚಂದ್ರವ್ವ ಗಂಗವ್ವರಿಬ್ಬರನ್ನೂ ಪದ್ಮಾವತಿ ತಮ್ಮ ತೋಟ ನೋಡಲಿಕ್ಕೆ ಕರೆಯಿಸಿದ್ದಳು. ಅದರಂತೆ ಆ ದಿನ ಅಲ್ಲಿಯೇ ಊಟಕ್ಕೂ ಬರಲಿಕ್ಕೆ ಹೇಳಿದ್ದಳು.

ಊಟವಾದ ಮೇಲೆ ಮೂವರೂ ಹೆಂಗಸರು ಕೂಡಿ ತೋಟ ನೋಡಲಿಕ್ಕೆ ಹೋದರು. ಆನಂದದಿಂದ ಮುಂದಾಗಿ ಎಲ್ಲವನ್ನೂ ತೋರಿಸುತ್ತ

ಪದ್ಮಾವತಿ ಹೊರಟಳು. ಕಬ್ಬಿನ ಬೆಳೆ, ಮೆಣಸಿನ ಗಿಡ, ಕಾಯಿಪಲ್ಲೆ ಇತ್ಯಾದಿಗಳ ಉತ್ಪನ್ನವನ್ನು ವಿವರಿಸಿ ಹೇಳಿದಳು. ತಾವು ಮಾಡಬೇಕಾದ ಶ್ರಮವನ್ನು ಸೂಚಿಸಿದಳು. ಎಲ್ಲವನ್ನೂ ಕೇಳಿಕೊಂಡು ಚಂದ್ರವ್ವ ಹೇಳಿದಳು:

" ಏನಡ್ಡಿಯಿಲ್ಲ. ಸಿಸ್ತಿನಿಂದ ಮಾಡಿಕೊಂಡರೆ ನಿಮಗೂ ನಾಲ್ಕು ದುಡ್ಡು ಉಳಿಯುವವು. ಮಾಲಕರಿಗೂ ನಾಲ್ಕು ದುಡ್ಡು ಮುಟ್ಟುವವು. ಮಾಡುವವರು ಮಾತ್ರ ಬೇಕು. ನಾಲ್ಕೆಂಟ ಜನರ ಕುಟುಂಬ. ಇಂದಿಗೆ ಹೊಟ್ಟೆಯ ಚಿಂತೆಯಾದರೂ ಬಿಟ್ಟಿತಲ್ಲ. ಹೊಟ್ಟೆ ತುಂಬಿಕೊಳ್ಳೋದೇನು ಈ ದಿನದೊಳಗ ಸಣ್ಣ ಕೆಲಸ ಅಲ್ಲ. "

" ಏನಾದರೂ ಹೊಟ್ಟಿಗೆ ಇವರಿಗೆ ಗುತ್ತಿಗೆ. ಮನೆಗೆ ಬರುವಾಗ ಮತ್ತೆ ನಾಲ್ಕೈದುನೂರ ರೂಪಾಯಿ ಸಾಲ ಹೊತ್ತುಕೊಂಡೇ ಬರಬೇಕು. "

ಗಂಗವ್ವ ಅಭಿಪ್ರಾಯಪಟ್ಟಳು. ಅವಳಿಗೆ ಇದನ್ನೆಲ್ಲ ನೋಡಿ ಸಹನವೂ ಆಗಿರಲಿಲ್ಲ.

" ಆದೇಕೆ ಗಂಗಾ? ಏನಿಲ್ಲೆಂದರೂ ಒಂದೆರಡ ವಾರ ಗಾಣ ಹೋಗತದ. ಸಾವಿರ ಹನ್ನೆರಡ ನೂರ ರೂಪಾಯಿ ಬೆಲ್ಲ ಆಗ್ತದ, ಇಂಥಾ ಧಾರಣಿಯೊಳಗ. ಮೆಣಸಿನ ಗಿಡ ಅವ. ತೋಟದೊಳಗಿನ ಬದಕ ಏನ ಕಾಣಸ್ತದ?"

ಗಂಗವ್ವನ ಮಾತನ್ನ ಖಂಡಿಸಿ ಚಂದ್ರವ್ವ ನುಡಿದಳು. ಪದ್ಮಾವತಿಯು ಇಬ್ಬರ ಮಾತನ್ನೂ ಕೇಳುತ್ತ ಸುಮ್ಮನೆ ಇದ್ದಳು. ಯಾರ ಮಾತಿನಿಂದಲೂ ಅವಳು ಉಬ್ಬಬೇಕಾಗಿರಲಿಲ್ಲ, ತಗ್ಗಬೇಕಾಗಿಯೂ ಇರಲಿಲ್ಲ. ಎಷ್ಟೆಷ್ಟು ಬೆಳೆ ಬಂದೀತೆಂಬ ಲೆಕ್ಕ ಅವಳಿಗೆ ಇದ್ದೇ ಇದ್ದಿತು.

ಮುಂದೆ ಪದ್ಮಾವತಿಯ ಸಲಹೆಯಂತೆ ತೋಟದ ಕೆಲಸಗಳೆಲ್ಲ ನಡೆದುವು. ಕೆಲವು ದಿನ ತಾತಪ್ಪ ತೋಟದಲ್ಲಿ ಊಟ ಮಾಡಿ, ಊರೊಳಗೆ ಹೋಗುವನು. ಸಾಯಂಕಾಲ ಮತ್ತೆ ತೋಟಕ್ಕೆ ಊಟ ಮಾಡಲಿಕ್ಕೆ ಬರುವನು. ಒಂದೊಂದು ದಿನ ತೋಟದಲ್ಲಿ ಹೆಚ್ಚಿಗೆ ಕೆಲಸಗಳು ಇದ್ದರೆ ಮಧ್ಯಾಹ್ನ ಊರೊಳಗೆ ಹೋಗುತ್ತಲೇ ಇರಲಿಲ್ಲ. ಸಂಜೆಯ ಊಟ ತೀರಿಸಿಕೊಂಡೇ ಮಲಗಲಿಕ್ಕೆ ಹೋಗುವನು. ಬರಬರುತ್ತ ಅವನ ಮನಸ್ಸು ಅಳಿಯನ ಪ್ರಪಂಚದ ಕಡೆಗೆ ಒಲಿಯುತ್ತ ನಡೆಯಿತು. ಅವನ ಮನಸ್ಸನ್ನು ಸೆರೆ ಹಿಡಿ

ದವನು ಬಾಬಣ್ಣನಲ್ಲ, ಪದ್ಮಾವತಿ. ಅವಳ ಅಕ್ಕರತೆ, ತಂದೆಯಂತೆ ತನ್ನನ್ನು ಕಾಣುವಿಕೆ, ಪ್ರಪಂಚದಲ್ಲಿ ಅವಳು ತೋರುವ ಜಾಣ್ಮೆ ಇವೆಲ್ಲ ಅವನ ಮನಸ್ಸನ್ನು ಆಕರ್ಷಿಸಿದ್ದುವು. ತಮ್ಮಕ್ಕ ಬಾಳವ್ವನನ್ನು ತನಗೆ ಕೊಡದಿದ್ದರೇನಾತು ? ಬಾಬಣ್ಣನನ್ನು ನೋಡಿ ತಾನು ನೆರವಾಗದಿದ್ದರೂ ಪದ್ಮಾವತಿಯ ಕಡೆಗೆ ನೋಡಿಯಾದರೂ ಅವರ ಜನುಮಕ್ಕೆ ಕೈ ಹಚ್ಚುವದು ಒಳಿತು. ಸ್ವಂತ ಸೊಸೆಯಂದಿರೂ ಹೀಗೆ ಹೊಟ್ಟೆ ನೆತ್ತಿಯನ್ನು ನೋಡರು. ನಾನೇನು ಅವರಿಗೆ ಕೊಟ್ಟಿರುವೆ ? ನೆಟ್ಟಗೆ ಎರಡು ಹೊತ್ತು ಊಟಕ್ಕೆ ಹೋಗುವೆ. ಒಂದೂ ದಿನ ಗೊಣಗುಟ್ಟದೆ ಮಾಡಿಹಾಕುವಳು, ಎಂದು ತಾತಪ್ಪ ಪದ್ಮಾವತಿಯ ಆರೈಕೆಗಾಗಿ ತುಂಬ ಕೃತಜ್ಞನಾಗಿದ್ದ.

ತನ್ನ ಮನದೊಲವನ್ನು ಆಗಾಗ ಗಂಗವ್ವನ ಮುಂದೆಯೂ ತಾತಪ್ಪ ಆಡಿ ತೋರಿಸುತ್ತಿದ್ದ. ಆದರೆ ಅದಕ್ಕೆಲ್ಲ ಅವಳು ಮೌನವಾಗಿಯೇ ಇರುತ್ತಳು. ಆದೇ ಕಾಲಕ್ಕೆ ಅಪ್ಪಣ್ಣ ಮಾತ್ರ ಅನ್ನುವ:

" ಗರತಿ ಮಗಳ ಅನ್ನಬೇಕು ಆಕೆಗೇ. ಬಾಬು ಏನೇನ ಮಾಡಿದ, ಎಲ್ಲೆಲ್ಲಿ ಹೋದ. ಆದರೂ ಮಕ್ಕಳನ್ನ ಹಿಡಕೊಂಡ ಮನೆತನ ಸಾಗಿಸಿದಳು. ಆಕೆಯ ಜನ್ಮ ಇಂದಿಲ್ಲ ನಾಳೆ ಚಲೋ ಆಗಲಿಕ್ಕೇಬೇಕು. ನಮ್ಮ ಸುಂದರಿ ನೋಡಲ್ಲ. ಗಂಡನ ಮನೆಯ ನೆನಪ ತೆಗೆದರೆ ಮೋರೆ ಅತ್ತ ತಿರವ ಹೋಗತಾಳೆ. ಇವೇನು ಜನ್ಮಾ ಮಾಡುವ ಲಕ್ಷಣವೇನು ? "

" ಆಯ್ತಲ್ಲ ಆಕೆಯ ಜನ್ಮವೂ ಏನ ನಿಂತಿಲ್ಲ...."

ಗಂಗವ್ವ ಕೆರಳಿ ಗಂಡನಿಗೆ ನುಡಿಯುವಳು

" ಇದಕ್ಕೇನ ಜನ್ಮ ಅಂತಾರೇನು ? " ಅಪ್ಪಣ್ಣನ ಪ್ರಶ್ನೆಯಿದು.

" ಈಕೆಗೂ ತವರುಮನೆಯ ಕಡೆಗೆ ಆಧಾರ ಇಲ್ಲದಿದ್ದರೆ ಪದ್ಮಾವತಿಯ ಹಾಗೇ ಗಂಡ ಮಾಡಿದ್ದ ಮಾಡಿಸಿಕೊಂಡು ಅಲ್ಲೇ ಇರತಿದ್ದಳು. ನಮ್ಮ ಸುಂದರಿಗೇನು ಆವಳ ಹಾಗೆ ಗತಿ ಇಲ್ಲೇನು ? "

ಎಂದು ಗಂಗವ್ವ ಸಿಡಿಮಿನಿಂದ ನುಡಿದು ಅಲ್ಲಿಂದ ಎದ್ದು ಹೋಗುವಳು.

ಗಂಗವ್ವನ ಈ ನಡತೆ ತಾತಪ್ಪನಿಗೆ ಸೇರದು. ಎಲ್ಲರಲ್ಲೂ ತಾನೇ ಹೆಚ್ಚು, ಎಲ್ಲವೂ ತಾನು ಹೇಳಿದಂತೆಯೇ ನಡೆಯಬೇಕು, ಇನ್ನೊಬ್ಬರ ಹೆಚ್ಚಳ ಆಗಬಾರದು, ಎನ್ನುವ ಗಂಗವ್ವನ ಸ್ವಭಾವ ಈಗೀಗ ಬಹಳ

ಒಡೆದು ತೋರಹತ್ತಿತು. ಮಾತಿನಲ್ಲಿ ಅವಳನ್ನು ತಾತಪ್ಪ ಆಗಾಗ ಖಂಡಿಸು ತ್ತಲೇ ಇದ್ದ. ಇದರಿಂದ ಅವರಿಬ್ಬರಲ್ಲಿಯೂ ಮೇಲಿಂದ ಮೇಲೆ ಚಿಕ್ಕಪುಟ್ಟ ಜಗಳಗಳು ನಡೆಯುವವು. ಹೀಗೆ ನಡೆದಾಗಲೆಲ್ಲ ಎರಡೆರಡು ದಿವಸ ತಾತಪ್ಪ ಅವಳ ಮನೆಯ ಕಡೆಗೆ ಹೋಗುವುದೇ ಇಲ್ಲ. ತೋಟದಲ್ಲಿಯೇ ಇರುವ. ಏನಾದರೂ ಕೆಲಸ ಮಾಡುವನು.

ಈಗ ತೋಟದಲ್ಲಿ ಕಬ್ಬಿನ ಬೆಳೆ ಚನ್ನಾಗಿಯೇ ಬಂದಿತ್ತು. ವಾರಕ್ಕೆರಡಾವರ್ತಿ ಅದಕ್ಕೆ ನೀರು ಹಾಯಿಸುವರು. ಮೆಣಸಿನ ಗಿಡಕ್ಕೂ ಕಾಯಿಗಳು ಹತ್ತಿದ್ದುವು. ಕಬ್ಬಿನ ಬೆಳೆಯ ಸುತ್ತಲೂ ನೀರಿನ ಕಾವಲಿಯ ಎರಡೂ ಬದಿಗಳಲ್ಲೂ ಹುಲ್ಲು ಚನ್ನಾಗಿಯೇ ಬೆಳೆದಿದ್ದಿತು. ಕಾಯಿಪಲ್ಲೆ ತೀರಿದ ಕೂಡಲೆ ಗೆಣಸು ಮಾರಾಟಕ್ಕೆ ಸಿದ್ಧವಾಗುವ ರೀತಿಯಲ್ಲಿ ಪದ್ಮಾವತಿ ಬಳ್ಳಿಯನ್ನು ನೆಡಿಸಿದ್ದಳು. ಅದಕ್ಕೂ ಈಗ ಕಾಯಿಗಳಾಗುತ್ತಿದ್ದುವು. ನಾಳೆ ಗೆಣಸು ಕೆದರಿದರೆ ಅದರ ಬಳ್ಳಿಯೂ ದನಗಳ ಮೇವಿಗೆ ಬರುವದು. ಎರಡು ಎತ್ತುಗಳು ಪಾಪ ಎಷ್ಟು ತಿನ್ನಬಹುದು? ಮೇವು ವ್ಯರ್ಥ ನಷ್ಟವಾಗುವುದು. ಇದು ಪದ್ಮಾವತಿಯ ಲೆಕ್ಕ. ಅದಕ್ಕಾಗಿಯೇ ಅವಳು ಮಾವನಿಗೆ ಸಹಜ ಅಂದಳು :

" ಮೇವು ಬೇಕಾದಷ್ಟು ಅದ. ತಿನ್ನಲಿಕ್ಕೆ ಮನೆಯಲ್ಲಿ ಹೈನದ ದನಗಳೇ ಇಲ್ಲ. "

" ಅದಕ್ಕ ಇಷ್ಟೇಕೆ ಚಿಂತೆ ಮಾಡುವಿ ಬಾಳಾ ? "

ಎಂದಿಷ್ಟೇ ಅಂದು ತಾತಪ್ಪ ಸುಮ್ಮನಾದ. ಮುಂದೆ ಆ ವಿಷಯಕ್ಕೆ ಪದ್ಮಾವತಿಯೂ ಮಾತೆತ್ತಲಿಲ್ಲ. ತಾತಪ್ಪನೂ ಏನೂ ಹೇಳಲಿಲ್ಲ. ಆದರೆ ಈ ಮಾತು ನಡೆದು ತಿಂಗಳೊಪ್ಪತ್ತು ಕಳೆಯುವುದರಲ್ಲಿ ಒಂದು ದಿನ ಗಂಗವ್ವನ ಮನೆಯಿಂದ ಎಮ್ಮೆಯನ್ನೇ ಹೊಡೆದುಕೊಂಡು ತೋಟದ ಕಡೆಗೆ ಬಂದು ಬಿಟ್ಟ ತಾತಪ್ಪ. ಇದನ್ನು ಕಂಡಂತೂ ಮನೆಯಲ್ಲಿಯ ಮಕ್ಕಳು ಹಿರಿ ಹಿರಿ ಹಿಗ್ಗಿ ಕುಣಿದಾಡಿದುವು ಇನ್ನೂ ಎಮ್ಮೆ ದೂರದಲ್ಲಿ ದಾರಿಯ ಮೇಲಿರುವಾಗಲೇ ಹಿರಿಯ ಹುಡುಗ ಯಾತದ ಕಟ್ಟೆಯ ಮೇಲಿಂದ ಕಂಡಕೂಡಲೇ ಕೈಯೊಳಗಿನ ಕೆಲಸವನ್ನು ಅಲ್ಲಿಯೇ ಬಿಟ್ಟು, ಓಡುತ್ತ ಕೊಲಪೆಗೆ ಬಂದು, ಅವ್ವನಿಗೆ ಕೂಗಿ ಹೇಳಿದ:

" ಅವ್ವಾ, ನಮ್ಮ ಎಮ್ಮೆ ಬಂತು ! "

ಪದ್ಮಾವತಿ ಒಳಗೆ ಅಡಿಗೆ ಮಾಡುತ್ತಿದ್ದಳು. ಅವಳಿಗೆ ಮಗನ ಮಾತಿನ ಅರ್ಥ ಹೊಳೆಯಲಿಲ್ಲ. ತಿರುಗಿ ಕೇಳಿದಳು:

" ಏನಂತಿಯೋ ಬಾಳಾ ? "

ಅವ್ವನ ಮಾತಿಗೆ ಉತ್ತರಕೊಡಲು ಹುಡುಗ ಅಲ್ಲಿ ಇದ್ದರಲ್ಲವೆ ? ಈಗಾಗಲೇ ಆತ ಎಮ್ಮೆಯನ್ನು ಎದುರುಗೊಳ್ಳಲಿಕ್ಕೆ ದಾರಿಗೆ ಓಡಿದ್ದ. ಹೊರಗೆ ಆಡುತ್ತ ಕುಳಿತಿದ್ದ ಚಿಕ್ಕ ಹುಡುಗನೇ ತಾಯಿಗೆ ಉತ್ತರ ಹೇಳ ಬೇಕಾಯಿತು.

" ಅವ್ವಾ ನಮ್ಮ ಎಮ್ಮೆ ಬಂತ ಅಂತನs. "

ಹೀಗೆ ಹೇಳುವಾಗ ಆ ಹುಡುಗನೂ ಆಟ ಬಿಟ್ಟು ಎದ್ದುನಿಂತಿದ್ದ. ದನಿಯಲ್ಲಿ ಆನಂದದ ಕುಣಿತವಿತ್ತು.

" ಎಲ್ಲೀದೋ ? " ಪದ್ಮಾವತಿಯು ಕೈಯೊಳಗಿನ ರೊಟ್ಟಿಯನ್ನು ತಟ್ಟಿಯಲ್ಲಿ ಹಾಕುತ್ತ ಮತ್ತೆ ಕೇಳಿದಳು.

" ಮಾಮಾ ಹೊಡಕೊಂಡ ಬಂದ ! "

ಎಂದು ಆ ಹುಡುಗನೂ ಎದ್ದು ದಾರಿಗೆ ಧಾವಿಸಿದ. ಪದ್ಮಾವತಿಯ ತಲೆಯಲ್ಲಿ ಈಗ ಪ್ರಕಾಶ ಬಿತ್ತು. ಹಾಗೆಯೇ ಹಿಟ್ಟುಗೈಯಿಂದಲೇ ಹೊರಗೆ ಬಂದು ನೋಡಿದಳು. ಎದುರಿಗೆ ಎಮ್ಮೆಯನ್ನು ಹೊಡೆದುಕೊಂಡು ತಾತಪ್ಪ ಬರುತ್ತಿದ್ದ. ಮೈ ತುಂಬಿ ಈಯಲಿಕ್ಕಾದ ತನ್ನ ಎಮ್ಮೆ ! ಕಂಡು ಒಂದು ಕ್ಷಣ ದಂಗುಬಡಿದು ನಿಂತಳು ಪದ್ಮಾವತಿ. ತಾತಪ್ಪನ ವಿಷಯಕ್ಕೆ ಅವಳ ಲ್ಲಿದ್ದ ಆದರ ಇಮ್ಮಡಿಯಾಯಿತು. ಆದರೂ ಅವಳ ಬಾಯಿಂದ ಉದ್ಗಾರ ಹೊರಡದೆ ಇರಲಿಲ್ಲ.

" ಗಂಗವ್ವ ಏನು ಸುಮ್ಮ ಇರತಾಳ ಇನ್ನ ? "

ಎಂದು ಅವಸರದಿಂದ ಪದ್ಮಾವತಿಯೂ ಗುಡಿಸಲಿನೊಳಗೆ ಹೋದಳು. ಕೈ ತೊಳೆದುಕೊಂಡು, ಒಂದರ್ಧ ರೊಟ್ಟಿ ಹಾಗೂ ಒಂದು ತಂಬಿಗೆ ನೀರನ್ನು ತಕ್ಕೊಂಡು ಹೊರಗೆ ಬಂದಳು. ಇನ್ನೂ ಎಮ್ಮೆ ಗುಡಿಸಲಿನ ಸಮೀಪಕ್ಕೆ ಬಂದಿರಲಿಲ್ಲ. ಆದರೂ ತಾನೇ ನಾಲ್ಕು ಹೆಜ್ಜೆ ಮುಂದೆ ಹೋಗಿ ನಿವಾಳಿಸಿ

ಒಗೆದಳು, ಎಮ್ಮೆಯ ಪಾದಗಳನ್ನು ತೊಳೆದಳು. ಆಮೇಲೆ ತಾತಪ್ಪನ ಕಡೆಗೆ ಹೊರಳಿ ಕೇಳಿದಳು:—

" ಗಂಗವ್ವಅತ್ತೆ ಏನು ಅನ್ನತಿದ್ದಳು ? "

" ಆಕೇನ ಅನ್ನುವಳು ? " ತಿರುಗಿ ಕೇಳಿದ ತಾತಪ್ಪ. ಆಮೇಲೆ ತುಸು ಮುಂದೆ ಹೋದ ಮೇಲೆ " ನಮ್ಮ ಎಮ್ಮಿ ನಮ್ಮ ಮಾತ. ಆಗ ಹೈನ ಇಲ್ಲಾ ಏನ ಇಲ್ಲಾ, ಎಲ್ಲಿ ನೀ ಉಸಾಬರಿ ಮಾಡತ ಕೂಡುವಿ ಅಂತ ಒಯ್ದು ಅವರಲ್ಲಿ ಕಟ್ಟಿಕೊಳ್ಳಲಿಕ್ಕೆ ಹೇಳಿದ್ದೆ ಆಯ್ತು. " ಎಂದು ಸೊಸೆಗೆ ವಿವರಿಸಿ ಹೇಳಿದ.

ಪದ್ಮಾವತಿಯೂ ತಿರುಗಿ ಏನೂ ಕೇಳಲಿಲ್ಲ. ಹುಡುಗರು ಹರುಷದಿಂದ ಒಯ್ದು ಎಮ್ಮೆಯನ್ನು ಎತ್ತಿನ ಗೂಟಕ್ಕೆ ಕಟ್ಟಹೋದರು. ಇಷ್ಟರಲ್ಲಿ ಬಾಬಣ್ಣ ಕಬ್ಬಿನ ಫಡದೊಳಗಿಂದ ಹೊರಗೆ ಬರುತ್ತ,—

" ಎಮ್ಮಿ ಎಲ್ಲೀದರೋ ? " ಎಂದು ಕೇಳಿದ.

" ಅಜ್ಜಾ ತಂದಲ್ಲ. "

ಎಂದು ಹುಡುಗರು ಎಮ್ಮೆಯ ಕೊರಳಿಗೆ ಹಗ್ಗ ಹಚ್ಚಹತ್ತಿದರು. ತಾತಪ್ಪ ಗುಡಿಸಲಿನ ಮುಂದೆ ಕಾಲೊಳಗಿನವುಗಳನ್ನು ಬಿಟ್ಟು ಈಗ ಎಮ್ಮಿ ಕಟ್ಟಲಿಕ್ಕೆ ಬರುವವನಿದ್ದ. ಸಮೀಪದಲ್ಲಿ ಬಾಬಣ್ಣ ಬರುತ್ತಿರುವುದನ್ನು ಕಂಡು ಹೇಳಿದ:

" ಕಾಲಗೀಲ ತುಳಿಸಕೊಂಡೀರೋ ! "

ಬಾಬಣ್ಣ ಮಾವನ ಮಾತಿನ ಉದ್ದೇಶವನ್ನು ಅರಿತು, ಲಗುಬಗೆಯಿಂದ ಅತ್ತ ಹೋಗುತ್ತ ಹುಡುಗರಿಗೆ ಸೂಚಿಸಿದ:

" ನಿಲ್ಲಿರಿ ! ನಾ ಬಂದ ಕಟ್ಟತೇನ. "

ತಾತಪ್ಪ ಗುಡಿಸಲಿನೊಳಗೆ ಹೋಗಿ ಉಸ್ಸೆಂದು ಕುಳಿತ. ಬಾಬಣ್ಣ ಬಂದಿರುವ. ಎಮ್ಮಿ ಕಟ್ಟುವನು, ಮೇವು ಹಾಕುವನು. ತಂದು ಕೊಡು ವುದು ನನ್ನ ಕೆಲಸ, ಮುಂದಿನದೆಲ್ಲ ಅವರ ಕೆಲಸ ಎಂಬ ಭಾವ ಅವನ ಮುಖದ ಮೇಲಿತ್ತು.

ಪದ್ಮಾವತಿಯು ಗುಡಿಸಲಿನ ಮೂಲೆ ಮೂಲೆಗಳನ್ನೆಲ್ಲ ಶೋಧಿಸಿ ಹಾರೆಯೊಂದನ್ನು ತಕ್ಕೊಂಡು ದನಗಳನ್ನು ಕಟ್ಟುವಲ್ಲಿ ಹೋದಳು.

ಬಾಬಣ್ಣ ಇದ್ದ ಗೂಟಕ್ಕೆ ಎಮ್ಮೆಯನ್ನು ಕಟ್ಟಿ, ಮುಂದೆ ಮೇವು ಒಗೆದು ಬರುವುದರಲ್ಲಿದ್ದ.

" ಎಲ್ಲಿ ಕಟ್ಟಿದಿರಿ? " ಪದ್ಮಾವತಿ ಕೇಳಿದಳು

" ಅಲ್ಲೇ ಕಟ್ಟಿದೆ. ಇನ್ನೂ ಎತ್ತುಗಳು ಬರಲಿಕ್ಕೆ ವೇಳೆ ಅದೆ ನಡೆ " ಎಂದ ಬಾಬಣ್ಣ.

" ಇದ್ದರೇನಾಯಿತು ? ಈಗಿಲ್ಲ ಇನ್ನೊಂದ ತಾಸಿನ ಮೇಲಾದರೂ ಗೂಟ ನೆಡಲಿಕ್ಕೇ ಬೇಕಲ್ಲ. ಹೊಸ ಗೂಟ ಹುಗಿದು, ದವಣಿಯೊಂದ ಮಾಡಿ ಬಿಡಿರಿಯಲ್ಲ ! ಅಂದರೆ ಅದರ ಚಿಂತೆ ಕಡಿಯಿತು. "

" ಉಂಡತಿಂದ ಮಾಡೋಣಲ್ಲ ! ಈಗೆಲ್ಲಿ ಓಡಿಹೋಗತದೇನು? "

ಎಂದು ಬಾಬಣ್ಣ ಹಾಗೆಯೇ ಗುಡಿಸಲಿನ ಕಡೆಗೆ ಬಂದನು. ಅವನ ಮನಸಿನಲ್ಲಿ ಇನ್ನೂ ತೂಗಾಟ. ತಾತಪ್ಪ ಲಹರಿಯ ಮನುಷ್ಯ, ಮೇಲಾಗಿ ದನಗಳ ವ್ಯಾಪಾರಿ. ಯಾವಾಗ ಎಮ್ಮೆಯನ್ನು ಮತ್ತೆ ಒಯ್ಯುವನೋ ಏನೋ. ಹಿಂದೆ ಕೆಲದಿನ ನಮಗೆ ಕೊಟ್ಟಿದ್ದ. ಆಮೇಲೆ ಗಂಗವ್ವನಲ್ಲಿ ಒಯ್ದು ಕಟ್ಟಿದ. ಈಗಲೂ ಏನೇನು ಮಾಡುವನೋ ಯಾರಿಗೆ ಗೊತ್ತು ? ಎಂದು ಯೋಚಿಸುತ್ತಲೇ ಒಳಗೆ ಬರುತ್ತ ತಾತಪ್ಪನಿಗೆ ಕೇಳಿದ. ಮಾತು ಸ್ವಾಭಾವಿಕವಾಗಿರಲಿಲ್ಲ.

" ಹಿಂದಕ್ಕೆ ಇತ್ತ, ಅದೇ ಎಮ್ಮೆ ಅಲ್ಲ? "

" ಅದೇ. ನಡುವ ಹಾಲ ಕೊಡುವದನ್ನ ನಿಲ್ಲಿಸಿತು. ಗಂಗಾನ ಮನೆಯೊಳಗ ದನಗಳ ಮುಂದಿನ ಚಿಪ್ಪಾಡಿ ತಿಂದ ಬೀಳತದ ಅಂತ ಒಯ್ದು ಕಟ್ಟಿದ್ದೆ. ಇನ್ನೇನು ನಮ್ಮಲ್ಲಿ ಸಾಕಷ್ಟು ಮೇವೂ ಆಗಿದೆ. ಮತ್ತು ನಾಳೆ ಬೆಳಗಾದರೆ ಈಯಲಿಕ್ಕೂ ಆಯಿತು. ಹುಡುಗರು ಹುಬಚಿ ಹೈನ ಇಲ್ಲದ ಒಣಗಿದಂತಾಗಿವೆ. "

ಎಂದು ತಾತಪ್ಪ ವಿವರಿಸಿ ಹೇಳಿದ. ಆದರೆ ಅಳಿಯನ ಈ ಅನಾಸ್ಥೆಯ ನಡತೆಯ ವಿಷಯಕ್ಕೆ ಅವನಿಗೂ ಬೇಸರ ಬಂದಿತು. ಅದನ್ನರಿತುಕೊಂಡೇ ಪದ್ಮಾವತಿ ನುಡಿದಳು:

" ಎಂಥಾದ್ದು ಏನು ? ಹೈನ ಒಂದು ಇದ್ದರೆ ಊಟದ ಚಿಂತೆ ಅರ್ಧ ಇಲ್ಲದಂತೆ. ಎಮ್ಮೆ ಹಾಲಿಗೂ ಬೆಣ್ಣೆಗೂ ಬಹಳ ಚಲೋ. ನೀವು

ಹೋದಾಗ ನಮ್ಮ ಹೊಟ್ಟೆಗೆ ಹಾಕಿದ್ದು ಇದೇ. ಆಗ ಮಾಮಾ ಈ ಎಮ್ಮೆ ಕೊಂಡ ಕೊಡದಿದ್ದರೆ ನಮ್ಮ ಗತಿ ಏನಾಗತಿತ್ತೊ ದೇವರೇ ಬಲ್ಲ. ಈಗ ಮತ್ತೆ ನಮ್ಮ ಮನೆಗೆ ಲಕ್ಷ್ಮಿ ನಡೆದ ಬಂದಂತೆ ಬಂದಿದಾಳ ನಮ್ಮವ್ವ ಗೌರಿ!"

ಈ ಸಂಗತಿಯನ್ನೆಲ್ಲ ಪದ್ಮಾವತಿಯು ಈ ಮೊದಲೇ ಬಾಬಣ್ಣನಿಗೆ ಹೇಳಿದ್ದಳು. ಬಾಬಣ್ಣನಿಗೂ ಗೊತ್ತಿದ್ದ ಸಂಗತಿಯೇ ಅದು. ಆದರೂ ಪದ್ಮಾವತಿಯ ಮನಸ್ಸು ಎಮ್ಮೆಯನ್ನು ಕಂಡು ಉಬ್ಬಿ ಹೀಗೆ ಮತ್ತೆ ಮತ್ತೆ ನುಡಿಸಿತು.

ಹೀಗೆ ಬಾಬಣ್ಣನ ಸಂಸಾರದಲ್ಲಿ ಒಂದು ಸಂತಸ ತುಂಬಿಬಂದಿತು. ತೋಟದೊಳಗಿನ ಬೆಳೆಗಳೆಲ್ಲ ಚನ್ನಾಗಿದ್ದುವು. ತನ್ನೊಂದು ಕೂರಿಗೆ ಹೊಲದ ಬೆಳೆಯೂ ಒಳ್ಳೆಯದಿತ್ತು. ಆಗಾಗ ಸಮಯ ಸಾಧಿಸಿ ಆ ಹೊಲಕ್ಕೂ ಕೆಲಸಕ್ಕೆ ಹೋಗುವನು. ಇಲ್ಲಿ ತೋಟದಲ್ಲಿ ಯಾತ ಇಲ್ಲದ ದಿವಸ ಅಲ್ಲಿ ಹೋಗಿ ಎತ್ತುಗಳನ್ನು ಮೇಯಿಸಿಕೊಂಡು, ಕಸ ತೆಗೆದು ಬರುವನು. ಬರುವಾಗ ಅಲ್ಲಿಂದಲೂ ಸ್ವಲ್ಪ ಮೇವನ್ನು ತರುವನು. ಎಮ್ಮೆ ಎತ್ತುಗಳನ್ನೆಲ್ಲ ಅಕ್ಕರತೆಯಿಂದ ಸಲಹುವನು.

ಇಷ್ಟೆಲ್ಲ ಇದ್ದರೂ ಬಾಬಣ್ಣನಿಗೆ ಒಂದೆರಡು ದಿನಗಳಿಗೊಮ್ಮೆ ಊರಲ್ಲಿ ಹೋಗದೆ ಮನಸ್ಸಿಗೆ ಸಮಾಧಾನವಾಗುವದಿಲ್ಲ. ತೋಟದಲ್ಲಿ ಪದ್ಮಾವತಿ ದಿನಾಲು ಮುಂಜಾನೆ ಚಹ ಮಾಡಿ ಮಾವನಿಗೂ ಗಂಡನಿಗೂ ಕೊಡುವಳು. ರೇಶನ್ನಿನಲ್ಲಿ ಬಂದ ಸಕ್ಕರೆ ತಿಂಗಳವರೆಗೆ ಸಾಲುತ್ತಿರಲಿಲ್ಲ. ಹುಡುಗರಿಗೆ ಪದ್ಮಾವತಿ ಹಾಲನ್ನೇ ಕುಡಿಯಲು ಕೊಡುವಳು. ತಾನಂತೂ ಚಹ ಕುಡಿಯುತ್ತಿರಲಿಲ್ಲ. ಆದರೂ ಸಕ್ಕರೆ ಹತ್ತೆಂಟು ದಿನಗಳಲ್ಲಿ ತೀರುವುದು. ಆಮೇಲೆ ಬೆಲ್ಲದ ಚಹಕ್ಕೆ ಆರಂಭವಾಗುವುದು. ಇಂಥ ಚಹ ಬಾಬಣ್ಣನಿಗೆ ಸೇರದು. ಊರೊಳಗೆ ಹೋಗಿ ಹಾಟೇಲದೊಳಗೆ ಕುಡಿದು ಬರುವನು ಅದರ ಸಂಗಡ ಪೇಡೆಯನ್ನಾಗಲಿ, ಭಜಿಯನ್ನಾಗಲಿ ತಿನ್ನುವನು. ಊರಲ್ಲಿಯ ಹಾಟೇಲೊಂದರಲ್ಲಿ ತನ್ನ ಹೆಸರಿನ ಖಾತೆಯನ್ನೇ ಇಟ್ಟಿದ್ದ. ಸಿಗಾರೇಟು ಬೀಡಿಗಳು ಬೇಕಾದರೂ ಅಲ್ಲಿಯೇ ಕೊಳ್ಳುವ. ಸುಗ್ಗಿ ತೀರಿದ ಮೇಲೆ ಒಮ್ಮೆಲೇ ಎಲ್ಲ ತೀರಿಸಿಬಿಟ್ಟರಾಯಿತು, ಎಂದುಕೊಂಡಿದ್ದ. ಒಂದು ಮುದ್ದೆ ಬೆಲ್ಲ ಕೊಟ್ಟರೆ ತೀರಿಹೋಗುವುದು. ಇದೇನು ಮಹಾ ಎಂದು ಲೆಕ್ಕಹಾಕಿದ್ದ.

ತೋಟದಿಂದ ತನ್ನ ಸ್ವಂತ ಹೊಲಕ್ಕೆ ಹೋಗಬೇಕಾದರೆ ಊರೊಳಗಿಂದ ಹಾಯ್ದೇ ಹೋಗಬೇಕಾಗುವದು. ಹೋಗುವಾಗೊಮ್ಮೆ ಬರುವಾಗೊಮ್ಮೆ ಬಾಬಣ್ಣನ ಬಂಡಿಯು ಹಾಟೇಲದ ಮುಂದೆ ನಿಲ್ಲುವುದೇ. ಇದರಂತೆ ಮನೆಯ ಜೀನಸಕ್ಕಾಗಿ ಸೆಟ್ಟರ ಅಂಗಡಿಯಲ್ಲಿಯೂ ಖಾತೆಯೊಂದನ್ನಿಟ್ಟಿದ್ದ. ಆದರೆ ಪದ್ಮಾವತಿಯು ಯಾವ ಸಾಮಾನವನ್ನೂ ಗಂಡನ ಕೈಯಿಂದ ತರಿಸುತ್ತಿರಲಿಲ್ಲ. ಅವನ ಕೈಯಲ್ಲಿ ಪ್ರಪಂಚದ ಹಿಡಿತವಿಲ್ಲ. ಸೇರು ಎಣ್ಣೆ ಬೇಕಾದರೆ ಎರಡು ಸೇರು ತಂದಿಡುವ ಎಂದು ಅವಳು ಬಲ್ಲಳು. ಆದರಿಂದ ತಾನೇ ಊರೊಳಗೆ ಹೋದಾಗ ಮನೆಗೆ ಹತ್ತುವ ಮಸಾಲೆ ಸಾಮಾನುಗಳನ್ನೂ ಇತರ ಜೀನಸುಗಳನ್ನೂ ತರುವಳು. ಲೆಕ್ಕದ ಚಿಕಿತ್ಸೆಯನ್ನೂ ಮಾಡುವಳು. ಹೀಗಿದ್ದರೂ ಬಾಬಣ್ಣ ಆದರಲ್ಲಿ ಆಗಾಗ ಕೈಹಾಕದೆ ಇರುತ್ತಿರಲಿಲ್ಲ.

ಸೆಟ್ಟರ ಅಂಗಡಿಯ ಸಾಮಾನು ತರಲಿಕ್ಕೆ ಹೋದಾಗ—ಬಂಡಿಯನ್ನು ಹೂಡಿಕೊಂಡು ಬಾಬಣ್ಣ ಸ್ಟೇಶನ್ನಿಗೆ ಹೊರಡಲು ಸಿದ್ಧನಾಗಿ ನಿಂತಾಗ—ಸೆಟ್ಟರು ಒಂದು ಸೇರು ಉತ್ತತ್ತಿಯನ್ನೋ ಖಜ್ಜೂರಿಯನ್ನೋ ಬಾಬಣ್ಣನ ಸೆರಗಿನಲ್ಲಿ ಹಾಕುವರು. 'ತಿನ್ನುತ್ತ ಬಂಡಿಯಲ್ಲಿ ಕುಳಿತು ಸ್ಟೇಶನ್ನಿಗೆ ಹೋಗು' ಎನ್ನುವರು. ಮೇಲೆ ಸಿಗರೇಟ ಪ್ಯಾಕೊಂದನ್ನೂ ಕಡ್ಡಿಯ ಪೆಟ್ಟಿಗೆಯನ್ನೂ ಎಸೆಯುವರು. ಬಾಬಣ್ಣ ಹಿಗ್ಗಿ ಬಂಡಿಯಲ್ಲಿ ಆರು ಚೀಲ ಹೇರುವದಿದ್ದಲ್ಲಿ ಎಂಟು ಚೀಲ ಹೇರಿ ತರುವ. ಆದರೂ ಆ ತಿನಸಿನ ಲೆಕ್ಕ ಕಾಲಾನುಕ್ರಮದಲ್ಲಿ ಬಾಬಣ್ಣನ ಖಾತೆಗೆ ಏರುವುದು.

ಮತ್ತೊಮ್ಮೆ ಪದ್ಮಾವತಿಯು ಅಂಗಡಿಗೆ ಸಾಮಾನು ತರಲಿಕ್ಕೆ ಹೋದಾಗ ಹಿಂದಿನ ಲೆಕ್ಕ ಎಷ್ಟೆಂಬುದನ್ನು ಕೇಳುವಳು. ತನ್ನ ಲೆಕ್ಕಕ್ಕೂ ಸೆಟ್ಟರ ಲೆಕ್ಕಕ್ಕೂ ಎರಡೆರಡು ರೂಪಾಯಿ ಅಂತರ ಬರಲು ಸೆಟ್ಟರ ಕೂಡ ವಾದಿಸುವಳು. ಕಡೆಗೆ ಆತ ವಿವರವನ್ನು ಕೊಡುವನು. ಅದೇ ಸಿಟ್ಟಿನಲ್ಲಿ ಬಂದು ಪತಿಯ ಕೂಡ ವಾದಿಸುವಳು. ಅವನು ಸಾಮಾನು ಒಯ್ದುದ್ದು ನಿಜವೇನೆಂದು ಕೇಳುವಳು.

"ಖಾತೆಗೆ ಹಚ್ಚಿರುವನೇನು ಆ ಲೆಕ್ಕಾ ?"

ಎಂದು ಸೆಟ್ಟರ ಮೇಲೆಯೇ ಸಿಟ್ಟನ್ನು ಕಾರಿ ಬಾಬಣ್ಣಾ ಪದ್ಮಾವತಿಯ ಕೈಯೊಳಗಿಂದ ಪಾರಾಗುವನು. ಸಾಮಾನು ತರುವದಿರುವದರಿಂದ ಸಹಜ ಸೆಟ್ಟರು ತಿನ್ನಲಿಕ್ಕೆ ತನಗೆ ಕೊಡುವರೆಂದು ಆತ ಮೊದಮೊದಲು ಭಾವಿಸಿದ್ದ. ಮುಂದೆ ಆ ಲೆಕ್ಕವನ್ನು ತನ್ನ ಖಾತೆಗೆ ಏರಿಸುವರೆಂದು ತಿಳಿದರೂ ನಾಲಗೆಯ ಚಪಲಕ್ಕೆ ಒಳಗಾಗಿ ಅವರು ತಿನ್ನಲಿಕ್ಕೆ ಕೊಟ್ಟಾಗ ಬೇಡವೆನ್ನಲು ಆಗುತ್ತಿರ ಲಿಲ್ಲ. ಹೀಗೆ ಬಾಬಣ್ಣಾ ಸೆಟ್ಟರ ಸಾಮಾನಿನ ಸಾರಿಗೆ ಮಾಡಲಿಕ್ಕೆ ಹೋದಾ ಗೊಮ್ಮೆ ವೆಚ್ಚ ಮಾಡಿಯೇ ಬರುವ. ಮುಂದೆ ಮನೆಯಲ್ಲಿ ಪದ್ಮಾವತಿಗೂ ಅವನಿಗೂ ಜಗಳ ಆಗೇ ಆಗುವದು.

ಇದೂ ಅಲ್ಲದೆ ಬಾಬಣ್ಣಾ ಊರೊಳಗೆ ಹೋದಾಗ–ಸೆಟ್ಟರ ಅಂಗಡಿಯ ಮುಂದಿನಿಂದ ಹಾಯುವಾಗ–ಸೆಟ್ಟರು ಸಹಜ ಕರೆದು ಕೇಳುವರು.

" ಚಹಕ್ಕ ಏನ ಮಾಡತೀರೋ ಬಾಬು ? "

" ಏನು ಮಾಡುವುದು ? ನಿಮ್ಮಂಥ ಸೆಟ್ಟರಿದ್ದೇನು ಸಕ್ಕರಿ ಕೊಡುವ ದಿಲ್ಲ, ಬಿಡುವದಿಲ್ಲ. ಬೆಲ್ಲದ ಚಹ ಕುಡದ ಬೇಸರ ಬಂದುಹೋಯಿತು. "

" ಅದಕ್ಕೇ ಊರೊಳಗ ಬಂದಿದಿ ಕಾಣತದ ? "

ಬಾಬಣ್ಣಾನ ಸವಾರಿ ಹಾಟೀಲದ ಕಡೆಗೆ ಸಾಗಿರುವದೆಂಬುದನ್ನು ಅರಿತೇ ನುಡಿಯುವರು ಸೆಟ್ಟರು.

" ಏನಾದರೂ ಮಾಡಲಿಕ್ಕೆ ಬೇಕಲ್ಲ " ಎನ್ನುವ ಬಾಬಣ್ಣಾ.

" ಮಿಲಟರಿಯೊಳಗ ಇದ್ದ ಬಂದವರಪ್ಪ ನೀವು ! "

ಎಂದು ಸೆಟ್ಟರು ಉಬ್ಬಿಸಿ ಹೇಳುವರು:

" ಅಲ್ಲಿಯ ಅಡಿಗೆಯ ರುಚಿಯೇ ಬೇರೆ. ಬೇಕಾದರೆ ಸೇರ ಎರಡ ಸೇರ ಸಕ್ಕರಿ ಕಡಿಮೆ ಬಿದ್ದಾಗ ಒಯ್ಯು. "

ಆದಿನ ತೋಟಕ್ಕೆ ಹೋಗುವಾಗ ಸೆಟ್ಟರ ಅಂಗಡಿಯಿಂದ ಬಾಬಣ್ಣಾ ಒಂದೆರಡು ಸೇರು ಸಕ್ಕರೆ ಒಯ್ಯದೆ ಇರುತ್ತಿರಲಿಲ್ಲ. ಅದರ ದರ ಎರಡೂ ಕಾಲು ರೂಪಾಯಿ ಎಂಬುದನ್ನು ಬೇರೆ ಹೇಳಬೇಕಿಲ್ಲ. ಇಂಥ ದಿನಗಳಲ್ಲೂ ಮನೆಯಲ್ಲಿ ಪದ್ಮಾವತಿಯು ಬಿಗುವಿನಿಂದಲೇ ಇರುವಳು. ಮನದಲ್ಲಿಯೇ ತಮ್ಮ ಹಾಸಿಗೆ ನೋಡಿಕೊಂಡು ಕಾಲು ಚಾಚಬೇಕು, ಹೀಗೆ ಬೇಕಾದ ಹಾಗೆ ದುಡ್ಡು ಕೊಟ್ಟು ಸಕ್ಕರೆ ತಂದು ಚಹ ಕುಡಿದರೆ ಹೇಗೆ ಸಾಗೀತು

ಎಂದುಕೊಳ್ಳುವಳು. ಆದರೂ ಆಡಲಿಕ್ಕಿಲ್ಲ, ಅನಲಿಕ್ಕಿಲ್ಲ. ಮಾವ ಅಳಿಯ ಇಬ್ಬರೂ ಕೂಡಿ 'ಹೊಟ್ಟೆಗೆ ಸಹ ತಿನ್ನಬೇಡ ಅನ್ನುವಳು ಸೊಸೆ,' ಎಂದು ಅಂದಾರೆಂದು ಸುಮ್ಮನೇ ಇರುವಳು.

ಬಾಬಣ್ಣನು ಈ ರೀತಿ ಮಾಡುವ ಅನಿಯಮಿತ ವೆಚ್ಚವನ್ನು ತಾನು ಮಿತವ್ಯಯದಿಂದ ನಡೆದು ಪದ್ಮಾವತಿಯು ಉಳಿಸಲು ಯತ್ನಿಸುವಳು. ತಿನ್ನು ಣ್ಣುವುದರಲ್ಲಿಯೂ ತುಸು ಕಡಿಮೆ ಮಾಡಿ ವಾರಕ್ಕೆ ಒಂದರ್ಧ ರೂಪಾಯಿಯ ಬೆಣ್ಣೆಯನ್ನಾದರೂ ಸಂತೆಗೆ ಒಯ್ದು ಮಾರುವಳು. ಮುಂಜಾನೆ ತಾಸೆರಡು ತಾಸು ಊರಲ್ಲಿ ತಿರುಗಾಡಿ ಕಾಯಿಪಲ್ಲೆ ಗೆಣಸುಗಳನ್ನು ಜೋಳಕ್ಕೆ ಮಾರಿ ಬರುವಳು. ಬರುವಾಗ ಬಂದ ಜೋಳದಲ್ಲಿಯ ಎರಡು ಮೂರನೆಯಂಶ ಪಾಲನ್ನು ಸೆಟ್ಟರ ಅಂಗಡಿಯಲ್ಲಿ ಹಾಕಿಯೇ ಹೋಗುವಳು. ಅವಳ ಚಟು ವಟಿಕೆ, ದುಡಿಮೆ, ಸರಳತನವನ್ನು ನೋಡಿ ಸೆಟ್ಟರೂ ಕೂಡ ಮೆಚ್ಚಿದ್ದರು.

ಆದರೆ ಇದನ್ನೆಲ್ಲ ಗಂಗವ್ವನಿಗೆ ನೋಡಲಿಕ್ಕಾಗಲಿಲ್ಲ. ತಾತಪ್ಪ ಅವಳ ಮನೆಯಿಂದ ಎಮ್ಮೆಯನ್ನು ಒಯ್ದಾಗಲೇ ಅವಳಲ್ಲಿ ಪದ್ಮಾವತಿಯ ವಿಷ ಯಕ್ಕೆ ಅಸೂಯೆ ಉಂಟಾಗಿತ್ತು. ಈಗೀಗ ತಾತಪ್ಪ ಅವಳಲ್ಲಿ ಬಂದಾಗ ಒಂದೆರಡು ಸಲ ಜಗಳವನ್ನು ತೆಗೆದಳು. ಆದರೆ ತಾತಪ್ಪನೇ ಬೇಕಂತಲೇ ಬಾಯಿ ಹಾಕಲಿಲ್ಲ. ಗಂಗವ್ವ ತನ್ನೊಡನೆ ಏಕೆ ಜಗಳಾಡುವಳೆಂಬುದು ಅವನಿಗೆ ಗೊತ್ತು. ಅದಕ್ಕಂತಲೇ ಆತ ಸುಮ್ಮನಿರುವ. ಒಂದೆರಡು ಸಲ ಗಂಗವ್ವ ಕೆರಳಿಸಿ ನೋಡಿದಳು; ಹಳಿದು ಮಾತಾಡಿ ನೋಡಿದಳು. ಅದ ಕ್ಕೇನೂ ತಾತಪ್ಪನ ಕಡೆಯಿಂದ ಪ್ರತಿಕ್ರಿಯೆ ಸಿಗಲಿಲ್ಲ. ತಿರುಗಿ ಅವನು ಅವಳ ಮನೆಗೆ ಬರುವದನ್ನೇ ಕೆಲಕಾಲ ತಡೆದ. ಒಂದು ವಾರದವರೆಗೂ ಅತ್ತ ಹಾಯಲೇ ಇಲ್ಲ. ಆಮೇಲೆ ಮನಸ್ಸು ಕೇಳದ್ದಕ್ಕೆ ಒಂದುದಿನ ಊರಲ್ಲಿ ಬಂದಾಗ ಸಹಜ ಹೋದ.

ಈ ಸಲ ತಾತಪ್ಪನನ್ನು ಕಂಡೊಡನೆಯೇ ಗಂಗವ್ವ ಅಳಲಿಕ್ಕೆ ಆರಂಭಿ ಸಿದಳು.

"ಇಲ್ಲಿ ನಾವು ಸತ್ತರೂ ಕೇಳವರಿಲ್ಲ. ನಮಗೆ ಯಾರಿದ್ದಾರೆ ? ಪರದೇಶಿ ಇದ್ದಂತೆ ನಾವು. ನೀ ಅಲ್ಲಿ ಮೊಮ್ಮಕ್ಕಳು ಸೊಸೆಯರೊಳಗ ಬೆರಗ ಆಗಿ ಕೂಡುವಿ."

ಎಂದು ಹಾಡಿಹಾಡಿಕೊಂಡು ಅತ್ತಳು. ಆಮೇಲೆ ತುಸು ತಡೆದು ಮುಖವನ್ನು ಬಿಗಿದುಕೊಂಡು ಕೂತೇ ಕೂತಳು. ಕೊನೆಗೆ ಸಿಟ್ಟಿನಿಂದ,

" ಆಕೆಯಾದರೂ ಎಂಥಾಕೆ ಇದ್ದಾಳ ನೋಡಲೇನಲ್ಲ. ಮಾಯೆಯು ಬಲೆ ಬೀಸಿದಾಳ ನಿನ್ನ ಮೇಲೆ. ಸೋವರ ಸೊಸೆಯಂತ ಸೋದರ ಸೊಸೆ...." ಎಂದು ನೆಲ ತಿಕ್ಕಿ ಬೈಯತೊಡಗಿದಳು.

" ಸುಮ್ಮನೆ ಇನ್ನೊಬ್ಬರಿಗೆ ಅನ್ನಬೇಡ. ಹಲ್ಲ ಮುರದ ಕೈಯೊಳಗ ಕೊಟ್ಟಾರ ಯಾರಾದರೂ. "

ತಾತಪ್ಪನೂ ತಾಳಿಕೊಳ್ಳಲಿಕ್ಕಾಗದೆ ಎಂದ. ಇಷ್ಟು ಅಂದದ್ದೇ ತಡ, ಗಂಗವ್ವ ಮನೆತುಂಬ ಹೊರಳಾಡಿ ಹೊರಳಾಡಿ ಅತ್ತಳು. ಆಗ ಅಪ್ಪಣ್ಣ ಮನೆಯಲ್ಲಿ ಇರಲಿಲ್ಲವೆಂದೇ ನೆಟ್ಟಗಾಯಿತು. ಸುಂದರವ್ವ ತಾಯಿಯನ್ನು ಗಟ್ಟಿಯಾಗಿ ಹಿಡಿದಳು, ಸಮಾಧಾನಗೊಳಿಸಿದಳು. ತಾತಪ್ಪನೂ ಅವಳ ಆರ್ಭಟೆಯನ್ನು ಕಂಡು ತುಸು ಗಾಬರಿಯಾದ. ಹತ್ತರ ಹೋಗಿ ನಡುಗುವ ದನಿಯಿಂದ ಸಮಾಧಾನ ಹೇಳಿದ:

" ಓಣಿಯೊಳಗಿನ ಜನರು ಬಂದಾರು. ಇದೇನು ಹೀಗೆ ಮಾಡಲಿಕ್ಕೆ ಹತ್ತಿರುವಿ ? ನಿನಗ ಚಂದ ಕಾಣತದೇನು ? "

" ಹೊಟ್ಟೆಯೊಳಗೆ ಕಿಚ್ಚ ಹಚ್ಚಿರುವಿ ಮತ್ತ ಕೇಳುವಿ ? ಯಾರ ಬರತಾರ ಬರವಲ್ಲರೇಕೆ ! ಈಗೆಲ್ಲಿ ನನ್ನ ಮಾನ ಕಾಯ್ದಿದಿ ನೀ ? "

ಎಂದು ಗಂಗವ್ವ ಪ್ರತಿಯಾಗಿ ಕೇಳಿ ಅಳುವಳು. ಇವನ್ನೆಲ್ಲ ಕಂಡು ತಾತಪ್ಪ ಎರಡು ದಿನ ತೋಟದ ಕಡೆಗೇನೇ ಹೋಗಲಿಲ್ಲ. ಅಲ್ಲಿಯೇ ಉಳಿದ. ಆಗ ಗಂಗವ್ವನಿಗೆ ಸಮಾಧಾನ. ಮಗಳ ಕಡೆಯಿಂದ ಅಡಿಗೆ ಮಾಡಿಸಿದಳು, ಉಣ್ಣಲಿಕ್ಕೆ ಬಡಿಸಿದಳು. ಮನೆ ತುಂಬಿದಂತೆ ಅನಿಸಿತವಳಿಗೆ.

ಇತ್ತ ತೋಟದಲ್ಲಿ ಇವರು ದಾರೀ ಕಾಯ್ದೇ ಕಾಯ್ದರು. ಮಾವನ ಸ್ವಭಾವ ಇಬ್ಬರಿಗೂ ಗೊತ್ತಿದ್ದುದರಿಂದ ಅಷ್ಟೇನೂ ಚಿಂತೆಗೆ ಒಳಗಾಗುವ ಹಾಗಿರಲಿಲ್ಲ. ಊರೊಳಗೆ ಹೋಗಿದ್ದಾನೆ. ಗಂಗವ್ವನ ಮನೆಯಲ್ಲಿ ನಿಂತಿದ್ದರೂ ನಿಂತಿರಬೇಕು. ಇಲ್ಲವಾದರೆ ಯಾವುದಾದರೂ ಒಂದು ಸಂತೆಗೆ ಹೋಗಿದ್ದರೂ ಹೋಗಿರಬೇಕು. ಅವನದೇನು ? ಇತ್ತೀಚೆಗೆ ಎಲ್ಲಿಯೂ

ಹೋಗಿಲ್ಲ, ಕೈಯಲ್ಲಿ ನಾಲ್ಕು ದುಡ್ಡೂ ಇಲ್ಲ. ಏನಾದರೂ ಮಾಡಿಕೊಂಡು ಬಂದಾನು, ಎಂದುಕೊಂಡು ಸುಮ್ಮನಾದರು. ತಮ್ಮ ತೋಟದ ಕೆಲಸದಲ್ಲಿ ತಾವು ತೊಡಗಿದರು.

ಎರಡು ದಿನಗಳ ನಂತರ ತಾತಪ್ಪ ತೋಟದ ಕಡೆಗೆ ತೆರಳಿದ. ಆಂದರೂ ಗಂಗವ್ವನಿಗೆ ಸಮಾಧಾನವಿಲ್ಲ. ಈಗ ಮೊದಲಿನಂತೆ ಅವನು ತನ್ನೊಡನೆ ಇಲ್ಲ, ಎಂಬುದೇ ಅವಳಿಗೆ ಸಂಶಯ. ಅದರಲ್ಲಿ ದೂರ ತೋಟದಲ್ಲಿ ಬೇರೆ ಇದ್ದಾರೆ. ಊರೊಳಗೆ ಇದ್ದಂತೆ ಹೇಗೆ ಬಂದೀತು? ಆಗ ಅಲ್ಲಿ ಉಂಡರೆ ನೀರುಗುಳಲಿಕ್ಕೆ ಇಲ್ಲಿಯೇ ಬರುತ್ತಿದ್ದ. ಈಗ ಹಾಗೆ ಬರಲಿಕ್ಕೆ ಸಾಧ್ಯವಿಲ್ಲ. ಅದಕ್ಕಾಗಿ ಅವರು ತೋಟವನ್ನೇ ಬಿಟ್ಟು ಬರುವಂತೆ ಏನಾದರೂ ಯುಕ್ತಿ ಹೂಡಬೇಕೆಂದು ಯೋಚಿಸತೊಡಗಿದಳು. ಅವಳ ಯೋಚನೆ ಕಾರ್ಯ ರಂಗಕ್ಕೆ ಇಳಿಯುವದಕ್ಕೆ ಅನುಕೂಲವಾಗುವಂತೆಯೇ ಒಂದು ಘಟನೆ ಸಂಭವಿಸಿತು.

ತೋಟದಲ್ಲಿ ಬಾಬಣ್ಣ ಕಬ್ಬಿಗೆ ನೀರು ಉಣಿಸುವವನಿದ್ದ. ಹೊಸದಾಗಿ ಗೆಣಸನ್ನು ನೆಡುವವನಿದ್ದ. ಆ ಕೆಲಸದ ನೆರವಿಗೆಂದು ತಾತಪ್ಪ ಅಲ್ಲಿಯೇ ಉಳಿಯಬೇಕಾಯಿತು. ನಾಲ್ಕೈದು ದಿನಗಳವರೆಗೆ ಊರಲ್ಲಿ ಅವನು ಬರಲೇಇಲ್ಲ. ಇದರಿಂದ ಮತ್ತಿಷ್ಟು ಕೆರಳಿದಳು ಗಂಗವ್ವ. ನೆಟ್ಟಗೆ ಒಂದು ದಿನ ಮಧ್ಯಾಹ್ನ ಸೆಟ್ಟರ ಊಟದ ಹೊತ್ತಿಗೆ ಅವರ ಮನೆಗೇನೇ ತೆರಳಿದಳು.

" ಯಾಕ ಬಹಳ ದಿವಸಕ್ಕ ಬಂದೆ ಗಂಗಾ ? " ಸೆಟ್ಟರು ಕೇಳಿದರು.

" ಸಹಜ, ಇತ್ತ ಬೇಡರ ಶಿವರಾಯನ ಮನೆಗೆ ಕೆಲಸ ಇತ್ತು, ಹೋಗಿದ್ದೆ. ಸುಮ್ನ ಭೆಟ್ಟಿ ಆಗಿ ಹೋಗೋಣ ಅಂತ ಬಂದೆ. "

" ಶಿವರಾಯನಲ್ಲೆ ಏನು ಕೆಲಸ ತಗದೆ ? "

" ಮೊನ್ನೆ ಎರಡು ರೂಪಾಯಿಯ ಜೋಳ ಒಯ್ದಿದಾನೆ. ಇನ್ನೂ ರೂಪಾಯಿಯನ್ನೇ ಕೊಟ್ಟಿಲ್ಲ." ಸ್ವಲ್ಪ ತಡೆದು " ಈ ಸಲ ತೋಟದೊಳಗ ಏನೇನ ಬೆಳಿ ಮಾಡಿದಿರಿ ? " ಎಂದು ಕೇಳಿದಳು.

" ಯಾಕ ನಿನಗ ಗೊತ್ತಿಲ್ಲೇನು ? ನೀ ಇತ್ತೀಚಿಗೆ ಎಂದು ಹೋಗಿಲ್ಲ ಅತ್ತ? " ಬೆರಗಿನಿಂದ ಸೆಟ್ಟರು ಕೇಳಿದರು. ಅಷ್ಟೇ ಆಶ್ಚರ್ಯವನ್ನು ನಟಿಸಿ ಗಂಗವ್ವ ಅಂದಳು:

" ನಾ ಯಾತಕ್ಕ ಹೋಗಲಿ ಅತ್ತ ? ಇದ ನೋಡು ಎಲ್ಲಾ ಬಿಟ್ಟ! ''

" ಯಾಕೆ, ಹೋಗಬಾರದಂತೆ ಏನಾಗೇದ ? ''

" ನಿಮಗೇ ಗೊತ್ತಪ್ಪ, ನನಗೇನು ಗೊತ್ತಿಲ್ಲದು. ಪಾಲಾ ಒಂದಿನ ಕೊಡಲಿ ಕೊಡದಿರಲಿ,ಕಾಯಿಪಲ್ಲೆ ಮಾರಿಕೊಂಡ ಅತ್ತೇ ಏಕೆ ಹೋಗವಲ್ಲಳು ಪದ್ಮವ್ವ. ತೋಟವನ್ನೇ ಕೊಟ್ಟಿರುವಿರಿ, ಅಂದ ಮೇಲೆ ನಿಮಗೇ ಎಲ್ಲಾ ಗೊತ್ತಿರುವುದು. ಊರ ಹೊರಗಿನ ಹಣುಮಂತನ ಗುಡಿ ಇದ್ದಂತೆ ನಾ "

ಗಂಗವ್ವನ ಮನೋಗತ ಸೆಟ್ಟರಿಗೆ ಕೂಡಲೇ ಹೊಳೆಯಿತು. ಆದರೂ ಇನ್ನಿಷ್ಟು ಬೈಲಿಗೆ ಬರಲೆಂದು ನುಡಿದರು:

" ಅವರು ಎಂಥವರು ಇದ್ದಾರ ನಿನಗೂ ಗೊತ್ತದ. ಸುಮ್ಮನೆ ಇದೊಂದು ವರ್ಷ ಕೊಟ್ಟದೇನಿ ತೋಟ. ತಾಳಿಕೊಂಡ ಹೋಗ ತೇನಿ. "

" ಏನ ತಾಳಿಕೊಳ್ಳುವಿ ನಮ್ಮಪ್ಪ ! ನಿಮ್ಮ ಕೈಗೆ ಬೆಳೆ ಹತ್ತಗೊಟ್ಟ ರೇನೇ ಅಲ್ಲ ? "

" ನೋಡೋಣಲ್ಲ ಏನೇನು ಆಗ್ತದ ? "

" ಚಲೋ ಕೂಳ ನೋಡಿಕೊಡಿರಿ ಇಲ್ಲಾದರೆ ಎಲ್ಲಾನೂ ಹಾಳ ಆಗಿ ಹೋಗತದ. ನನಗೆ ನೋಡಲಿಕ್ಕಾಗದೇ ಬಂದೆ. ನಮ್ಮವರಂತ ಹೇಳಿದೆ. "

ಎಂದು ಗಂಗವ್ವ ಬಹಳ ಹೊತ್ತಿನವರೆಗೆ ಸೆಟ್ಟರಲ್ಲಿ ವಿಷಬೀಜ ಬಿತ್ತಲು ಯತ್ನಿಸಿದಳು. ಬಹಳ ಹೊತ್ತಿನವರೆಗೆ ಗಂಗವ್ವನ ಮಾತುಗಳನ್ನೆಲ್ಲ ಕೇಳಿ ಕೊಂಡು ಸೆಟ್ಟರು ಕೊನೆಗೆ ಹೇಳಿದರು:

" ಬಡವ ಇದ್ದಾನ. ಅವನಾದರೂ ತಿನ್ನಲಿ ಅಲ್ಲ ! "

ಈ ರೀತಿ ಸೆಟ್ಟರ ಮಾತಿನಿಂದ ಗಂಗವ್ವ ಇನ್ನಿಷ್ಟು ಹತಾಶಳಾದಳು. ಮನೆಗೆ ಬಂದಳು. ಅವಳಿಗೆ ಏನು ಮಾಡಿದರೂ ಮನಸ್ಸಿಗೆ ಸಮಾಧಾನವಿಲ್ಲ. ತಾತಪ್ಪನೂ ಮನೆಗೆ ಬರಲಿಲ್ಲ. ಅದರಿಂದ ಮತ್ತಿಷ್ಟು ಯೋಚನೆಗೆ ಈಡಾ ದಳು. ಏನಾದರೂ ಮಾಡಿ ಅವನನ್ನು ತೋಟದಿಂದ ಅಗಲಿಸಬೇಕೆಂದು ಹಂಚಿಕೆ ಹಾಕಹತ್ತಿದಳು. ಹಲವು ರೀತಿಯಿಂದ ವಿಚಾರಿಸಿದಳು. ವಿವಿಧ

ತರ್ಕ ಕಟ್ಟಿದಳು. ಕೊನೆಗೆ ಯಾವುದೋ ಒಂದು ನಿರ್ಧಾರಕ್ಕೆ ಬಂದು ತಲುಪಿದಳು.

ಮೂರು ನಾಲ್ಕು ದಿನಗಳ ನಂತರ ಬಾಬಣ್ಣ ಆದೇತಕ್ಯೋ ಊರೊಳಗೆ ಬಂದಿದ್ದ. ಗಂಗವ್ವ ಅವನು ತನ್ನ ಮನೆಯ ಮುಂದಿನಿಂದ ಹಾಯ್ದು ಹೋಗುವಾಗ ಕಂಡಳು. ಕೂಡಲೇ ಏನೋ ವಿಚಾರ ಹೊಳೆದು ಅವನನ್ನು ಕರೆದಳು. ಈಗೀಗ ಬಾಬಣ್ಣ ಅವಳ ಮನೆಗೆ ಬರುತ್ತಿರಲಿಲ್ಲ. ಬೇಕಂತಲೇ ಹೋಗಕೂಡದೆಂದೇನೂ ತಡೆದವನಲ್ಲ. ತೋಟದಲ್ಲಿಯೇ ಇರುತ್ತಿರುವುದರಿಂದ ಸ್ವಾಭಾವಿಕವಾಗಿ ಅವನಿಗೆ ಅತ್ತ ಕಡೆಗೆ ಬರಲು ಆಗಿರಲಿಲ್ಲ. ಅದನ್ನೇ ಎತ್ತಿ ಗಂಗವ್ವ ಮಾತಿಗೆ ಆರಂಭಿಸಿದಳು:

"ಈಗೇನ ಬಾಬಣ್ಣನ ದರ್ಶನ ಅಪರೂಪ ಆಯ್ತಲ್ಲ?"

"ತೋಟಾ ಮಾಡಿದಾಗಿನಿಂದೂ ಅವನ ಡೊಳ್ಳ ಬೆಳದದ. ನಮ್ಮದೇನ ಲೆಕ್ಕ ಅವನಿಗೆ?"

ಸುಂದರವ್ವನೂ ತಾಯಿಯ ಮಾತಿನ ಹಿಂದೆಯೇ ಕಿಡಿ ಹಾರಿಸಿದಳು

ತಾಯಿ ಮಗಳ ಮಾತಿನಲ್ಲಿ ಅಡಗಿದ ಭಾವ ಬಾಬಣ್ಣನಿಗೆ ಅರ್ಥವಾಗಲಿಲ್ಲ. ಸಹಜವಾಗಿ ಸಂತೋಷ ವ್ಯಕ್ತಮಾಡಿಯೇ ನುಡಿದನಾತ:

"ದೇವರು ಕೊಟ್ಟದಾನೆ. ಬಾವಿಗೆ ನೀರೂ ಅವೆ. ಬೆಳೆಯೂ ಸಾಧಿಸಿವೆ. ನಿಮ್ಮಂಥ ಹಿರಿಕಿರಿಯರ ಪುಣ್ಯ"

"ನಮ್ಮದೇತರ ಪುಣ್ಯ? ನಮ್ಮ ಪುಣ್ಯ ಇದ್ದಿದ್ದರೆ ಹೀಗೇಕೆ ಆಗತಿತ್ತು?"

ಗಂಗವ್ವನ ಧ್ವನಿಯಲ್ಲಿ ಅಸಮಾಧಾನ ತುಂಬಿತ್ತು. ಮಾತೂ ಮುಂಧೋರಣೆಯಿಂದ ಕೂಡಿತ್ತು.

"ಏನಾಗೇದ?" ಬೆರಗಿನಿಂದ ಕೇಳಿದ ಬಾಬಣ್ಣ.

"ನಿಮ್ಮ ಮಾವನಿಗೆ ಅಂಥದೇನು ಮಾಟ ಮಾಡಿದ್ದೀರಿ ಅಪ್ಪ, ಗಂಡ ಹೆಂತಿ ಕೂಡಿ?"

ಗಂಗವ್ವ ನಿಜವಾದ ಮಾತಿಗೆ ಈಗ ಆರಂಭಿಸಿದಳು.

"ನಾವೇತಕ್ಕೆ ಮಾಡೋಣ?" ಬಾಬಣ್ಣ ನಕ್ಕು ನುಡಿದ.

"ಇಲ್ಲಾದರೆ ಹೀಗೆ ಬಾರದೆ ನಿಲ್ಲುವವನಲ್ಲ!"

"ಇವನಿಗೇನ ಗೊತ್ತ ಅವ್ವಾ? ಏಕಸಂಬಿ ಹೆಣ್ಣ ಇದ್ದಾಳ ಅವಳು...."

ಸುಂದರಿ ಹೀಗೆ ಏನೋ ಅನ್ನುತ್ತ ಅರ್ಧಕ್ಕೆ ತಡೆದಳು.

" ಇಲ್ಲದೆ ಒಂದು ಹೇಳುವಾಕೆ ನೀ. ಮೇಲಗಡೆಯ ಹೆಂಗಸರು ಹಾಗಿರ ತಾರಂದರ ಎಲ್ಲರೂ ಹಾಗೇ ಇರತಾರೇನು? ಪದ್ಮಾವತಿ ಏನು ಅಂಥಾಕೆ ಅಲ್ಲ! "

ಗಂಗವ್ವ ಮಗಳನ್ನು ಬೆದರಿಸುವ ರೀತಿಯಲ್ಲಿ ಮಾತನಾಡಿದಳಾದರೂ ಅವಳ ಮಾತಿನ ಭಾವಕ್ಕೆ ಒಂದಿಷ್ಟು ಭಾಷ್ಯ ಬರೆದಂತೆಯೇ ಮಾಡಿದಳು.

ಬಾಬಣ್ಣನಿಗೆ ಈ ಮಾತುಗಳು ರುಚಿಸಲಿಲ್ಲ. ಹಲಕಟ್ ಹೆಂಗಸರ ಸಂಗತಿ ಏನು ಮಾತನಾಡುತ್ತ ಕೂಡುವದೆಂದು ಎದ್ದು ಹೊರಟುಬಿಟ್ಟ.

ಅದನ್ನು ಕಂಡು ಸುಂದರಿ ಮತ್ತೊಂದು ಮಾತನ್ನು ಒಗೆದಳು.

" ಇಲ್ಲಾದರೆ ತಾತಪ್ಪ ಮಾವ ಹೀಗೆ ಹಗಲಿ ರಾತ್ರಿ ತೋಟದೊಳಗ ನಿಂತು ದುಡಿಯಲು ಶಕ್ಯವೇ ಇಲ್ಲ. "

ಗಂಗವ್ವ ಬಾಬಣ್ಣನಿಗೆ ಸಮಾಧಾನ ಹೇಳುವ ರೀತಿಯಲ್ಲಿ ಮಾತ ನಾಡುತ್ತ ಹೊರಗೆ ಕಳಿಸಲು ಬಂದಳು. ಮಾತಂತೂ ಮಗಳಿಗೆ ಉತ್ತರ ಕೊಡುವ ಕ್ರಮದಲ್ಲಿತ್ತು:

" ಅದೇಕಬೇ, ಅಳಿಯ ಇದ್ದಾನ, ಸೊಸೆ ಇದ್ದಾಳ. ದುಡಿಯುವವ ನಲ್ಲ. ಏನ ಹೊರಗಿನವರ ಜನ್ಮ ಅದ? ದುಡಿದರೇನಾಯಿತೀಗ? ಹಿಂದಕ್ಕ ದುಡಿದಿಲ್ಲ? ಇದೇ ಬಾಬು ಮಿಲಟರಿಯೊಳಗ ಹೋದಾಗ ಎಮ್ಮಿ ಕಟ್ಟಿ ಕೊಟ್ಟದಾನ. ನನ್ನ ಸೊಸೆ ನನ್ನ ಸೊಸೆ ಅಂತ ಹಗಲಿ ರಾತ್ರಿ ಅಲ್ಲೇ ಮನೆ ಯೊಳಗೇ ಇರತಿದ್ದ. ಆಗ ಆದರೂ ಆರು ತಿಂಗಳ ನಮ್ಮ ಮನೆಯ ಕಡೆಗೆ ಎಲ್ಲಿ ಬರತಿದ್ದ, ಈಗ ಅನಲಿಕ್ಕೆ? " ಎಂದು ಬಾಬಣ್ಣನ ಕಡೆಗೆ ಮಾತು ಹೊರಳಿಸಿ " ಹುಚ್ಚ ಪೋರಿ! ನಾಲಿಗಿಲ್ಲದ ಎಲುವ ಎತ್ತ ಬೇಕಾದತ್ತ ಹೊರ ಳಸತಾಳ ಅಯ್ತು. ಹೀಗೇ ಹೇಳೀ ಮತ್ತ ಪದ್ಮಾವತಿ ಮುಂದ. ಕೇಳಿದಿ ಏನು ಬಾಬು? "

ಬಾಬಣ್ಣ ಅವಳ ಮಾತಿಗೇನು ಉತ್ತರ ಕೊಡಲಿಲ್ಲ. ಮನದಲ್ಲಿಯೇ " ನಾನೂ ಏನು ಅಪ್ಪಣ್ಣನಂತೆ ಎಂದು ಭಾವಿಸಿರುವಿಯೋ ಏನು? " ಎಂದು ಕೇಳಿಬಿಟ್ಟ. ಆದರೂ ಅವರು ಹೇಳಿದ ಮಾತುಗಳು ತಿರುತಿರುಗಿ ಅವನ ತಲೆಯಲ್ಲಿ ಸುತ್ತಹತ್ತಿದವು, ಸಂಶಯಕ್ಕೆ ಎಡೆ ಮಾಡಿ ಕೊಡಹತ್ತಿ

ದವು ಹಾಗೆಯೇ ತಾತಪ್ಪ ಪದ್ಮಾವತಿಯರ ಹಿಂದಿನ ದಿನಗಳ ನಡತೆಯ ಮೇಲೆ ಶೋಧಕ ದೃಷ್ಟಿಯಿಂದ ಬಾಬಣ್ಣ ಕಣ್ಣಾಡಿಸುವನು; ಏನೇನನ್ನೊ ಕಲ್ಪಿಸುವನು, ಅಲ್ಲಗಳೆಯುವನು.

೧೭

ಪದ್ಮಾವತಿ ಕಾಯಿಪಲ್ಲೆಗಳನ್ನು ಮಾರಲಿಕ್ಕೆಂದು ದಿನಾಲು ಮುಂಜಾನೆ ಊರಲ್ಲಿ ಹೋಗುತ್ತಿದ್ದಳು. ಮನೆ ಮನೆ ತಿರುಗಿ ಮಾರುತ್ತಿದ್ದಳು. ಬರುವಾಗ ಸ್ವಲ್ಪ ಬುಟ್ಟಿಯಲ್ಲಿ ಏನಾದರೂ ಉಳಿದರೆ—ಅದು ಒಳ್ಳೆಯದಿದ್ದರೆ—ಒಮ್ಮೊಮ್ಮೆ ಚಂದ್ರವ್ವನ ಮನೆಯ ಕಡೆಗೆ ಹಾಯ್ದು ಅವರಿಗೆ ಕೊಟ್ಟು ಹೋಗುವಳು. ಆಗ ಚಂದ್ರವ್ವ ಹಲವು ಸಲ ಅಂದುದುಂಟು.

" ಈಗ ಯಾತಕ್ಕೆ ತರತಿದ್ದಿಬೇ ಇದನ್ನ ? "

" ತಗೋರಿಅಲ್ಲ. ಮಾಸ್ತರ ಅಣ್ಣಾಗ ಮಾಡಿ ಹಾಕಿರಿ. "

"ಸೆಟ್ಟರ ಕೂಡ ಪಾಲಕಾರಿಕೆ ಬೇರೆ."ಚಂದ್ರವ್ವ ಸಂಶಯ ಎತ್ತುವಳು.

" ಇದ್ದರೇನಾಯ್ತು ? ಅವನ ಮನೆಗೂ ಬುಟ್ಟಿ ಬುಟ್ಟಿ ತುಂಬಿ ಕಳಸತೇನ ಆದಕ್ಕೇನ, ನಮಗೆ ಬೇಕಾದವರಿಗೆ ನಾವೂ ಕೊಡತೇವಿ. ಇನ್ನೊ ನಾಲ್ಕೊಪ್ಪತ್ತ ಬಾವಿಗೆ ನೀರ ಅವ, ಅಲ್ಲಿತನಕ ನೀವೂ ತಿನ್ನಿರಿ, ನಾವೂ ತಿನ್ನತೇವಿ. "

" ಏಕೆ, ಬಾವಿಗೆ ನೀರು ಕಡಿಮೆ ಬೀಳುವಂತೆ ಅವ ಏನು ?"

ಚಂದ್ರವ್ವ ಗಾಬರಿಯಿಂದ ಕೇಳಿದಳು.

" ವರ್ಷದಂತೆ ಮಳೆ ಆಗಿದ್ದರೆ ಏನು ಆಗತಿರಲಿಲ್ಲ. ಈಗ ಕಬ್ಬಿಗೆ ನೀರು ಬಿಟ್ಟರಂದರೆ ಬಾವಿಯ ತಳವೇ ಕಾಣತದ. ಉಳಿದ ಬೆಳೆಗಳಿಗೆ ನಾಲ್ಕು ದಿನಾ ಆದರೂ ನೀರೇ ಇಲ್ಲ ಆಗತದ. ಈಗ ಮಾಸ್ತರ ಹೆಂಡತಿಗೆ ಎಷ್ಟ ತಿಂಗಳ ? "

" ಈಗ ಮೂರುತಿಂಗಳ ತುಂಬಿ ನಾಲ್ಕರೊಳಗ ಬಿತ್ತು. ಇನ್ನೂ ಏನು ನಿಯಮ? " ಚಂದ್ರವ್ವ ನುಡಿಯುವಳು.

ಹೀಗೆ ಸುಖ ದುಃಖದ ನಾಲ್ಕು ಮಾತುಗಳನ್ನು ಆಡಿ ಪದ್ಮಾವತಿ ತೋಟದ ಕಡೆಗೆ ಹೋಗುವಳು. ಹಾದಿಯಲ್ಲಿ ಮನದಲ್ಲಿಯೇ ಯೋಚನೆ

ಮಾಡುವಳು. ಬಹಳ ದಿನಗಳ ಮೇಲೆ ಚಂದ್ರವ್ವನ ಸೊಸೆ ಚೊಚ್ಚಿಲ ಬಸುರಿ ಆಗಿದ್ದಾಳೆ. ತೋಟದಲ್ಲಿ ಊಟಕ್ಕೆ ಒಮ್ಮೆ ಕರೆಯಬೇಕು. ಅವರೂ ನನಗೆ ಮಾಡಿದ್ದರು. ಇದರೊಳಗೇನು ? ' ಕೂಳು ಕಡ ಅರಿವೆ ಮುಯ್ಯಿ ' ಅಂತ ಯಾವಾಗ ಆದರೂ ತೀರಿಸಲಿಕ್ಕೇ ಬೇಕಲ್ಲ. ಆದರೆ ಈಗ ಮಾಡ ಹೋದರೆ ಹತ್ತೆಂಟು ರೂಪಾಯಿ ವೆಚ್ಚಕ್ಕೆ ಬೇಕು. ಮಾಸ್ತರರ ಹೆಂಡತಿ, ಎರಡು ಮೂರು ರೂಪಾಯಿಗಳ ಕುಪ್ಪಸ ಕೊಳ್ಳುವುದು ಹೇಗೆ ? ಏನು ಮಾಡಿದರೂ ಐದು ರೂಪಾಯಿಯ ಕೆಳಗಿನ ಕುಪ್ಪಸ ಕೊಳ್ಳಲಿಕ್ಕೆ ಬರುವದಿಲ್ಲ.

ಅವರ ಉಪಕಾರವೂ ನಮ್ಮ ಮೇಲೆ ಬೇಕಾದಷ್ಟು ಇದೆ. ಹಿಂದೆ ಕಡ ಅಂತ ಕೊಟ್ಟ ಜೋಳ ಇನ್ನೂ ಕೇಳಿಲ್ಲ. ಇನ್ನೇನು ಕೇಳುವರು ? ಹೀಗೇ ಏನಾದರೂ ಮಾಡಿ ಉಪಕಾರ ಕಳೆಯುವುದು ಆಯಿತು, ಎಂದುಕೊಳ್ಳುವಳು. ಆದರೂ ಈಗ ಸದ್ಯಕ್ಕೆ ಕೈಯಲ್ಲಿ ಕಾಸಿಲ್ಲವಲ್ಲ ಎಂಬ ಚಿಂತೆಯೇನು ಅವಳಿಗೆ ತಪ್ಪಿದ್ದಲ್ಲ.

ಈ ರೀತಿ ಪದ್ಮಾವತಿಯು ಎಲ್ಲರಿಗೂ ಬೇಕಾಗಿ, ಕೃತಜ್ಞಳಾಗಿ ಬಾಳಲು ಬಯಸುವಳು. ಈ ಜನ್ಮದಲ್ಲಿ ಮಾಡಿದ ಅನ್ಯರ ಋಣ ತೀರಿಸದಿದ್ದರೆ ಇನ್ನೊಂದು ಜನ್ಮಕ್ಕಾದರೂ ಕಳೆಯಲಿಕ್ಕೇಬೇಕಲ್ಲ. ಯಾವ ಜನ್ಮದ ಸಾಲಕ್ಕೊ ಏನೋ ಒಂದು ಕೂರಿಗೆ ಅಡವಿಯನ್ನು ಊರಿಗೆ ಹೋಗುವಾಗ ಅವರ ಕಡೆಯಿಂದ ಗೌಡ, ಕಲ್ಲಪ್ಪ ಕೂಡಿ ಕಸಿದುಕೊಳ್ಳಲಿಲ್ಲೇನು ? ಅದರಿಂದೇನು ಹಣ ಬಂತೇ, ಉಂಡದ್ದೇ ತಿಂದದ್ದೆ? ಹೋಗಿಯೇ ಬಿಟ್ಟಿತಲ್ಲ ಹೊಲ. ಆದರಿಂದ ಯಾರದವರಿಗೆ ಮುಟ್ಟಿಸಿದರೆ ಒಳ್ಳೇದು ಎಂಬುದು ಅವಳ ಭಾವ, ಬಯಕೆ.

ಹೀಗಿದ್ದರೂ ಅವಳು ಇತ್ತಿತ್ತಲಾಗಿ ಊರೊಳಗೆ ಬಂದರೆ ಹಲವು ಜನ ಹೆಂಗಸರು ಅವಳ ಕಡೆಗೆ ನೋಡಿ ನಗುವರು. ಗಜು ಗುಜು ಮಾತನಾಡುವರು. ಅದು ಅವಳ ಕಿವಿಗೆ ಒಮ್ಮೊಮ್ಮೆ ಬೀಳುವುದು. ಇವಳ ಹತ್ತರ ಕಾಯಿಪಲ್ಲೆ ಕೊಂಡು ಮರಳುವ ಹೆಂಗಸರಲ್ಲಿ ಹೊರಟ ಧ್ವನಿಯು ಇದೊಂದು:

" ಏನಾದರೂ ಹೆಂಗಸೇನ ಒಳ್ಳೆಯವಳು ಅಲ್ಲೇಳು. "

" ಹೌದಂತ; ಮನೆಯೊಳಗಿನ ಒಳಗೇ ಹೀಗೆ ಹೇಗೆ? "

" ಈಗ ಗಂಗವ್ವನ ಮನೆಗೂ ಬರುವದಿಲ್ಲಂತ ತಾತೋಬಾ. "

" ಅಂತೇ ಆಕೆ ಹೇಳತ ತಿರಗತಾಳೆ. "

" ಆಕೆಯ ಮಾತಃ ? ಏನು ಸುಡುವಿ ಬಿಡು. ತನಗ ಅವನಿಗೆ ಏನಾದರೂ ಕೆಟ್ಟಿರಬೇಕು. ಈಕೆಯ ಮೇಲೆ ಹಾಕತಿರಬೇಕು." ಮೂರನೆ ಯುವಳ ಮಾತಿದು.

ಇಂಥ ಮಾತುಗಳಿಂದ ಪದ್ಮಾವತಿಗೆ ಒಂದಿಷ್ಟು ದಿಗಿಲು. ಮರುಕ್ಷಣ ದಲ್ಲಿ ಮಾತಿನ ಮಥಿತಾರ್ಥ ಒಂದಿಷ್ಟು ಹೊಳೆದು ಗಂಗವ್ವನ ಮೇಲೆ ಸಿಟ್ಟು ಬೆಂಕಿಯಾಗುವಳು. ಮತ್ತೆ ತನ್ನ ಮನಸ್ಸಿನಲ್ಲಿಯೇ ಅಂದುಕೊಳ್ಳುವಳು. ನನ್ನ ಸಲುವಾಗಿ ಅಂಥ ಮಾತೇನು ಇರಲಿಕ್ಕಿಲ್ಲ. ನನಗೆ ಅಂದವರ ಬಾಯಲ್ಲಿ ಹುಳ ಬಿದ್ದಾವು. ಅಂಥದನ್ನು ಮಾಡಿದವರಿಗೆ ದೇವರು ಸತ್ತ ಮೇಲೆ ಕಾಸಿದ ಕುಡ ಹಿಡಿಯಲಿಕ್ಕೆ ಹಚ್ಚತಾನಂಬೋದ ನನಗೇನು ಗೊತ್ತಿಲ್ಲೇನು ? ಗಂಗವ್ವ ಸುಂದರಾ ಅವರೇ ಎಷ್ಟ ಸುಟ್ಟಕೊಂಡ ಸಾಯತಾರೆ ಸಾಯಲಿ. ನನಗೇನ ಬೇಡ ತಾಯಿ ಅಂಥದು !

ಈ ವಿಚಾರ ಬಂದಾಗ ಹೆದರಿಕೆಯಿಂದ ಪದ್ಮಾವತಿಯ ಮೈಮೇಲೆ ಮುಳ್ಳುಗಳು ಏಳುವವು. ಮನೆಯಲ್ಲಿ ಹೋದಾಗ ತಾತಪ್ಪನನ್ನು ತಂದೆಯಂತೆ ಆದರದಿಂದ ಸೇವಿಸುವಳು. ಬಾಬಣ್ಣನನ್ನು ಭಕ್ತಿಭಾವದಿಂದ ಕಾಣುವಳು.

ಆದರೂ ಅವಳ ದೈವ. ಈಗೀಗ ಅವಳ ನಡತೆಗಳಿಗೆಲ್ಲ ಬಾಬಣ್ಣ ಏನೇನೋ ಅರ್ಥ ಕಲ್ಪಿಸುವನು. ಮನದಲ್ಲಿ ಲೆಕ್ಕ ಹಾಕುವನು. ಎಷ್ಟು ತಡೆದುಕೊಂಡರೂ ತಪ್ಪಿ ಒಮ್ಮೊಮ್ಮೆ ಅವನ ಬಾಯಿಂದ ಕೊಂಕುಮಾತು ಗಳು ಹೊರಬೀಳುವವು. ಅವನ ಪ್ರತಿಬಿಂಬದಂತಿರುವವು.

" ಏನಾದರೂ ಹೆಂಗಸರು ನಂಬಿಗೆಯವರಲ್ಲ. "

" ಅಂಥವರು ಹಾಳ ಆಗಿ ಹೋಗತಾರಲ್ಲ." ಪದ್ಮಾವತಿ ಪತಿಗೆ ಹೇಳು ವಳು.

" ಅಂಥವರಿಂದೇ ಜಗವೆಲ್ಲ ತುಂಬಿದೆ. ಹಾಳೇನಾಗುವರು ? "

" ಎಲ್ಲರೂ ಹಾಗಿದ್ದರೆ ಇಷ್ಟರೊಳಗ ಜಗ ಮುಳುಗಿ ಹೋಗತಿತ್ತು. ಇನ್ನೂ ಶೀಲ ಸತ್ಯ ಅದೇ ಅಂತೇ ಮಳೆ ಬೆಳೆ ಆಗತದ. ಇಲ್ಲಾದರೆ ಬೆಂಕಿ ಮಳೆ ಬಿದ್ದು ಸುಡವಲ್ಲದೇನು ಲೋಕ ? " ಎಂದು ಕೆರಳಿ ಕೇಳುವಳು.

ಹೆಂಡತಿಯ ಮಾತಿಗೆ ಬಾಬಣ್ಣ ಮುಂದೇನೂ ಹೇಳುವದಿಲ್ಲ. ಯಾತ ಹೂಡಲಿಕ್ಕೆ ಹೋಗುವ. ಪದ್ಮಾವತಿಯು ನೀರುಣ್ಣಿಸಲು ಹೋಗುವಳು. ಗಂಡನ ಮಾತಿನಿಂದ ಅವಳಿಗೇನು ವಿಶೇಷ ಅನ್ನಿಸುತ್ತಿರಲಿಲ್ಲ. ಆದರೆ ಹೆಂಡತಿಯ ಪ್ರತಿಭಟನೆಯಿಂದ ಅವನಿಗೆ ಏನೇನೋ ಹೊಳೆಯುವುದು. ಯಾತ ಹೊಡೆಯುವಾಗ ಅದೇ ವಿಚಾರವೇ ವಿಚಾರ. ಅದರಲ್ಲಿ ಮೈಮರೆತು ಹಾಗೇ ನಿಂತರೆ ನಿಂತೇ ಬಿಡುವ ನೀರು ಬಾರದುದಕ್ಕೆ ಪದ್ಮಾವತಿಯು ಕಬ್ಬಿನ ಬೆಳೆಯಲ್ಲಿ ನಿಂತು ದಾರೀ ಕಾಯ್ದೇ ಕಾಯುವಳು ಹುಲುಸಾಗಿ ಬೆಳೆದ ಕಬ್ಬಿನ ಪೈರನ್ನು ಓರೆ ಮಾಡಿ ಒಂದು ಮಡಿಯಿಂದ ಇನ್ನೊಂದು ಮಡಿಗೆ ಕಾವಲಿಗುಂಟ ಸಾಗಬೇಕಾದರೆ ಸಾಕುಬೇಕಾಗಿ ಹೋಗುವುದು ಎಲೆಗಳು ಕರಗಸದಂತೆ ಮೈಯನ್ನು ಕೊರೆಯುವವು ಎಷ್ಟು ಬಾಗಿ ನಡೆದರೂ ಅವುಗಳ ಕೊರೆತ ತಪ್ಪಿದ್ದಲ್ಲ. ಎಂಥ ಸಂಸಾರಪ್ಪ ಇದು! ಎಂದು ಒಂದು ಕ್ಷಣ ಎಂದುಕೊಳ್ಳುವಳು.

ಇತ್ತ ತಾತಪ್ಪ ಮಧ್ಯಾಹ್ನದ ನಿದ್ರೆಮಾಡಿ ಎದ್ದು, ಹುಡುಗರಿಗೆ ಎಮ್ಮೆ ಬಿಟ್ಟುಕೊಡುವ. ಅವರಿಗೆ ಒಡ್ಡಿನಗುಂಟ ಮೇಯಿಸಲು ಸೂಚಿಸುವ. ಆಮೇಲೆ ತಾನು ಯಾತದ ಕಟ್ಟೆಯ ಕಡೆಗೆ ಹೋಗಿ ಬಾಬಣ್ಣನಿಗೆ ಕೇಳುವನು.

"ಸಂಜೆಗೆ ನಾನು ಊಟ ಮಾಡಿ ಊರೊಳಗ ಹೋಗಬೇಕಾಗಿದೆ. ಪದ್ಮಾವತಿಯನ್ನ ಅಡಿಗೆಗೆ ಕಳುಹಿಸಿ, ನಾ ನೀರ ತಿರಿಯುವೆನಲ್ಲ!"

"ಯಾತಕ್ಕ? ನೀನೇ ಯಾತಕ್ಕ ಬಾ. ನಾನೇ ನೀರುಣಿಸಲು ಹೋಗುವೆ." ಎಂದು ಬಾಬಣ್ಣ ಕೂಡಲೆ ಯಾತವನ್ನು ನಿಲ್ಲಿಸಿ ಕಬ್ಬಿನ ಬೆಳೆಯತ್ತ ಸಾಗುವನು. ಮಾವನ ಒಪ್ಪಿಗೆಯನ್ನೂ ನಿರೀಕ್ಷಿಸುತ್ತಿರಲಿಲ್ಲ. ಹೀಗೆ ತನ್ನ ಲಹರಿಗುಂಟೇ ನಡೆದರೆ ಇವನ ಜನ್ಮ ಹೇಗೆ ಆಗುವುದೋ ಎಂದು ಚಿಂತಿಸುತ್ತ ತಾತಪ್ಪ ಯಾತ ಹೊಡೆಯಲು ಆರಂಭಿಸುವನು.

ಬಾಬಣ್ಣ ಹೆಂಡತಿಯನ್ನು ಹುಡುಕಿಕೊಂಡು ಕಬ್ಬಿನ ಬೆಳೆಯಲ್ಲಿ ಅವಳನ್ನು ಸಂದಿಸುವನು. ಸಲಿಕೆ ಬೇಡಿ, ಅವಳನ್ನು ಅಡಿಗೆಗೆ ಕಳಿಸುವನು.

"ಈಗ ಮಾಮಾ ಯಾತ ಹೊಡೆಯಲಿಕ್ಕೆ ಹತ್ತಿರುವ ಹೌದ? ಅದಕ್ಕೇ ಸರಸರ ನೀರು ಬರಲಿಕ್ಕೆ ಹತ್ತಿದುವು"

ಎಂದು ಸೆರಗನ್ನು ಸಾವರಿಸಿಕೊಳ್ಳುತ್ತ ಪದ್ಮಾವತಿ ಅನ್ನುವಳು. ಸಲಿಕೆಯನ್ನು ಕೊಡುವಳು.

"ಯಾವುದೆಲ್ಲ ಅವನು ಮಾಡಿದ್ದೇ ನಿನಗೆ ಚಂದ."

ಎಂದು ನೀರುಣಿಸಲು ತೊಡಗುವ ಬಾಬಣ್ಣ.

"ಹಿರಿಯರು ದುಡಿದಂತೆ ನಮಗೆ ಹೇಗೆ ಬಂದೀತು?"

ಎಂದು ಕೊಂಕುಮಾತನ್ನು ಸರಳಗೊಳಿಸಿ ಗುಡಿಸಲಿನ ಕಡೆಗೆ ಪದ್ಮಾವತಿ ಬರುವಳು. ಲಗುಬಗೆಯಿಂದ ಸಂಜೆಯ ಅಡುಗೆಗೆ ಇಡುವಳು. ಅಡಿಗೆ ಮಾಡುತ್ತ ಮಾಡುತ್ತ ಇರುಳು ದನಗಳಿಗೆ ಹಾಕಲೆಂದು ಸ್ವಲ್ಪ ಮೇವನ್ನೂ ಮಾಡುವಳು. ಈಗ ಅವಳು ಸಾಯಂಕಾಲಕ್ಕೇನೇ ಮರುದಿನ ಮುಂಜಾನೆಯ ರೊಟ್ಟಿಯನ್ನೂ ಮಾಡಿಡಬೇಕಾಗುವದು ಕಾಯಿಪಲ್ಲೆ ಬೆಳಗಿನಲ್ಲಿ ಮಾರಲಿಕ್ಕೆ ಹೋಗಬೇಕಾಗಿರುವುದರಿಂದ ಅಡಿಗೆ ಮಾಡಲು ವೇಳೆ ಸಿಗುತ್ತಿರಲಿಲ್ಲ. ನಸುಕಿನಲ್ಲಿ ಎದ್ದು ಮಜ್ಜಿಗೆಯನ್ನಿಷ್ಟು ಮಾಡಿ ಹಸಿಯ ಮೆಣಸಿನ ಕಾಯಿಯ ಕಾರವೊಂದನ್ನಿಷ್ಟು ಅರೆದು ಇಟ್ಟು ಹೋದರೆ ತೀರಿತು. ಹಸಿದಾಗ ಮಕ್ಕಳೂ, ಮನೆಯವರೂ ಬುಟ್ಟಿಯೊಳಗಿನ ರೊಟ್ಟಿ, ಗಡಿಗೆಯೊಳಗಿನ ಮೊಸರು ಮಜ್ಜಿಗೆಗಳನ್ನು ಹಾಕಿಕೊಂಡು ತಿನ್ನುವರು. ತಂಗುಳ ಕಾಯಿಪಲ್ಲೆ ಏನಾದರೂ ಉಳಿದಿದ್ದರೆ ಹಾಕಿಕೊಂಡು ತೀರಿಸುವರು. ಇಲ್ಲವಾದರೆ ಕಾರದೊಡನೆಯೇ ಅವರಿಗೆ ರೊಟ್ಟಿ ಅಮೃತವಾಗುವುದು. ಒಕ್ಕಲಿಗರಿಗೆ ಹಸಿದ ವೇಳೆಯಲ್ಲಿ ಅಡವಿಯೊಳಗೆ ಊಟಕ್ಕೆ ತಂಗೂಳೇ ಇರಲಿ, ಹಸಿಯದೇ ಇರಲಿ ಪಾವನವಾಗುವುದು.

ಗಂಗವ್ವನ ಜಗಳಕ್ಕೆ ಬೇಸತ್ತು ಸೋತು ತಾತಪ್ಪ ಈಗೀಗ ದಿನ ಬಿಟ್ಟು ದಿನ ತಪ್ಪದೆ ಊರೊಳಗೆ ಹೋಗುವನು. ಹೋಗುವಾಗ ಒಂದೊಂದು ದಿನ ಧೋತರ ಸೆರಗಿನಲ್ಲಿ ತುಸು ಕಾಯಿಪಲ್ಲೆ ಮೆಣಸಿನ ಕಾಯಿಗಳನ್ನೂ ಕಟ್ಟಿಕೊಂಡು ಹೋಗಿ ಸುರಿಯುವನು. ಕೈಯಲ್ಲಿ ಕಬ್ಬನ್ನೂ ಹಿಡಿದು ಕೊಂಡು ಹೋಗಿ ಗಂಗವ್ವನ ಹುಡುಗರಿಗೆ ಕೊಡುವನು. ಅವರು ತೋಟ ಮಾಡದಿದ್ದರೂ ತಾತಪ್ಪನ ಧರ್ಮದಿಂದ ತೋಟ ಮಾಡಿದವರಷ್ಟು ಸುಖ ಉಣ್ಣುತ್ತಲಿದ್ದಾರೆ. ಆದರೂ ಗಂಗವ್ವನಿಗೆ ಸಮಾಧಾನವಿಲ್ಲ. ತನ್ನ ಮನೆಯೊಳಗಿನ

ಎಮ್ಮೆಯನ್ನು ಬಿಚ್ಚಿ, ಒಯ್ದು ಪದ್ಮಾವತಿಗೆ ಕೊಟ್ಟೆನಲ್ಲ ಎಂಬ ಕೊರಗು ಆವಳಲ್ಲಿ ಇದ್ದೇಇತ್ತು.

ಕೆಲದಿನಗಳಲ್ಲಿ ಪದ್ಮಾವತಿಯು ಗಂಡನ ಮುಂದೆ ಚಂದ್ರವ್ವನ ಸೊಸೆಗೆ ಬಯಕೆಯೂಟ ಮಾಡಿ, ಕುಪ್ಪಸ ಮಾಡಬೇಕೆಂಬ ತನ್ನ ಯೋಚನೆಯನ್ನು ಮುಂದಿಟ್ಟಳು. ಅದಕ್ಕೆ ಏನಿಲ್ಲೆಂದರೂ ಹತ್ತು ರೂಪಾಯಿಗಳಾದರೂ ವೆಚ್ಚ ತಗಲಬಹುದೆಂದೂ ಸೂಚಿಸಿದಳು.

ಬಾಬಣ್ಣನಿಗೆ ಬೇರೆಯೇ ಒಂದು ಚಿಂತೆ ಹತ್ತಿದ್ದಿತು. ಈಗಾಗಲೇ ಅವನು ಹೊಟೇಲಿನವರಿಗೆ ಎಂಭತ್ತು ರೂಪಾಯಿಗಳ ವರೆಗೆ ಹಣ ಕೊಡ ಬೇಕಾಗಿದ್ದಿತು. ಅವರು ಈಗ ಇಪ್ಪತ್ತು ರೂಪಾಯಿಗಳನ್ನಾದರೂ ಕೊಟ್ಟರೆ ಗಾಣ ಆಗಿ ಬೆಲ್ಲ ಮಾರುವ ವರೆಗೆ ತಡೆಯಲು ಒಪ್ಪಿದ್ದರು. ಅಷ್ಟನ್ನೂ ಕೊಡ ಲಿಕ್ಕೆ ಇವನ ಹತ್ತರ ಹಣವಿರಲಿಲ್ಲ. ಮೇಲೆ ಇದೊಂದು ಕುಪ್ಪಸ ಮಾಡುವ ವೆಚ್ಚ ಬೇರೆ. ಎರಡನ್ನೂ ಇಲ್ಲ ಎನ್ನಲು ಬರುವಂತಿಲ್ಲ. ಅದಕ್ಕಾಗಿ ಮೂವತ್ತು ರೂಪಾಯಿಗಳ ವ್ಯವಸ್ಥೆಯನ್ನು ಆತ ಮಾಡಲೇ ಬೇಕಾಗಿತ್ತು. ಊರೊಳಗೆ ಹೋಗಿ ಸೆಟ್ಟರ ಹತ್ತರ ಅಂಜುತ್ತ ಅಂಜುತ್ತ ಕೇಳಿದ. ಅವರು ರೋಖ ಹಣ ಕೊಡಲು ಒಪ್ಪಲಿಲ್ಲ. ಅಂಗಡಿಯೊಳಗಿನ ಸಾಮಾನು ಬೇಕಾದಷ್ಟು ಒಯ್ಯಲು ಹೇಳಿದರು. ಬಾಬಣ್ಣ ನಿರುಪಾಯನಾದ. ಎರಡು ದಿನ ವಿಚಾರಿಸಿದ ನಾಲ್ಕು ಸಲ ಹೊಟೇಲಿಗೆ ಹೋಗಿ ಚಹ ಕುಡಿದ. ಆಮೇಲೆ ಆದಪ್ಪ ಮಾಸ್ತ ರರ ಹತ್ತರ ಹೋಗಿ ಕೇಳಿದ.

ಮಾಸ್ತರರ ಸಂಬಳ ಅಂದೇ ಒಂದಿದ್ದಿತು. ಮನೆಯ ವೆಚ್ಚಕ್ಕೆ ಹಣದ ಅಗತ್ಯವೂ ಅಷ್ಟೇ ಇತ್ತು. ಆದರೂ ವಿಚಾರಿಸಿದರು. ಬಾಬಣ್ಣ ಹಲವು ಸಲ ಹಣ ಕೇಳಿರುವನು, ಕೊಟ್ಟಿಲ್ಲ. ತೊಂದರೆ ಇದ್ದಾಗ ಸಾಗಿಸುವದಿಲ್ಲ ಅನ್ನು ವನು. ಇದೊಂದು ಸಲ ಕೊಟ್ಟು ನೆರಹಾಗಬೇಕು, ತಿಂಗಳೊಪ್ಪತ್ತಿನಲ್ಲಿ ತಂದು ಕೊಡಬಹುದು. ಈಗ ಪಗಾರ ಬರದಿದ್ದರೆ ನಮ್ಮ ಮನೆ ಸಾಗುತ್ತಿರ ಲಿಲ್ಲೇನು? ಏನೋ ಈ ತಿಂಗಳ ಕೊನೆಗೆ ಹೋದ ತಿಂಗಳ ಸಂಬಳ ಸಿಕ್ಕು ವುದು. ಈ ಸಲ ಹದಿನೈದು ತಾರೀಖಿನ ಒಳಗೇ ಬಂದುದು ನಮ್ಮ ದೈವ. ಅಲ್ಲಿಯುವರೆಗೆ ಇವನಿಗೆ ಕೊಟ್ಟರಾಯಿತು. ಎಂದುಕೊಂಡು ಕೇಳಿದರು:

"ಯಾವಾಗ ತಿರುಗಿ ತಂದು ಕೊಡುವಿ?"

ಮಾಸ್ತರರಿಂದ ಹಣ ಸಿಗುವದೆಂದು ಬಾಬಣ್ಣನಿಗೆ ಮನದಟ್ಟಾಯಿತು. ಈಗಲೇ ಗಾಣ ಆದ ಮೇಲೆ ಕೊಡುವೆನೆಂದು ಹೇಳಿದರೆ ಇವರು ಕೊಡಲಿಕ್ಕಿಲ್ಲ. ಮುಂದೆ ಹೇಳಿದರಾಯಿತು. ಇವರ ಹೆಂಡತಿಗೇನೇ ಊಟ ಕುಪ್ಪಸ ಮಾಡು ವದಿದೆಯಲ್ಲ. ಅದೇನು ಹೊರಗೆ ಹೋಗುವುದೇ ಎಂದು ಭಾವಿಸಿ ನುಡಿದ:

" ನಾಲ್ಕೈದು ದಿವಸದ ಮಟ್ಟಿಗೆ ಸಾಗಿಸಿರಿ ! "

ಮಾಸ್ತರರು ಹಣವನ್ನು ಕೋಟಿನ ಜೇಬಿನೊಳಗಿಂದ ತೆಗೆದು ಅಲ್ಲಿಯೇ ಕೊಟ್ಟರು. ಸಾಲೆಯೊಳಗೆ ಹಣ ಹತ್ತರ ಇರಲಿಕ್ಕಿಲ್ಲ, ಸಂಜೆಗೆ ಬಾ ಅನ್ನುವ ರೇನೋ ಎಂದು ಯೋಚಿಸುತ್ತಿದ್ದ ಬಾಬಣ್ಣ ನೋಟುಗಳನ್ನು ಕಂಡು ಸಂತಸ ಗೊಂಡ. ಹೋಗುವಾಗ ಹೊಟೇಲಿನ ಲೆಕ್ಕವನ್ನು ಕೊಟ್ಟು, ಚಂದ್ರವ್ವನ ಮನೆಗೆ ಹೋಗಿ ಊಟಕ್ಕೆ ಮಾಡಿಸುವ ವಿಚಾರವನ್ನು ತಿಳಿಸಿಯೇ ಹೋದ.

ತೋಟದಲ್ಲಿ ಹೋಗಿ ಪದ್ಮಾವತಿಯ ಕೈಯೊಳಗೆ ಉಳಿದ ಹತ್ತು ರೂಪಾ ಯಿಗಳನ್ನೆಲ್ಲ ಬಾಬಣ್ಣ ಕೊಡಲಿಲ್ಲ. "ಸೆಟ್ಟರ ಅಂಗಡಿಯಿಂದ ಸಾಮಾನು ತಾ. ಕುಪ್ಪಸ ಒಂದನ್ನು ಕೊಳ್ಳು" ಎಂದು ಹೇಳಿ ಆರು ರೂಪಾಯಿಗಳನ್ನು ಕೊಟ್ಟ. ಉಳಿದ ರೂಪಾಯಿಗಳನ್ನು ತನ್ನ ಸ್ವಂತ ಖರ್ಚಿಗೆಂದು ಇಟ್ಟುಕೊಂಡ. ಪದ್ಮಾವತಿಯು ಅಷ್ಟು ಹಣದಲ್ಲಿಯೇ ಬಯಕೆಯೂಟ ಮುಗಿಯುವಂತೆ ವ್ಯವಸ್ಥೆ ಮಾಡಿದಳು

ಅಷ್ಟು ಸಣ್ಣ ಪ್ರಮಾಣದಲ್ಲಿ ಮಾಡಿದರೂ ತಾತಪ್ಪ ಗಂಗವ್ವನನ್ನು ಊಟಕ್ಕೆ ಕರೆಯದೆ ಬಿಡಲಿಲ್ಲ ಅವಳ ಸಂಗಡ ಸುಂದರಿಯೂ ಚಿಕ್ಕ ಹುಡು ಗನೂ ಬಂದಿದ್ದರು. ಹೀಗೆ ತೋಟದಲ್ಲಿ ಒಂದು ಪಂಕ್ತಿಯೇ ನೆರೆಯಿತು. ಸೊಸೆಯೊಡನೆ ಚಂದ್ರವ್ವನೂ ಬಂದಿದ್ದಳು. ಆದರೆ ಮಾಸ್ತರರನ್ನು ಎಷ್ಟು ಕರೆದರೂ ಅವರು ಬರಲಿಲ್ಲ. ಸಾಲೆಯ ನಿಮಿತ್ತವನ್ನು ಮುಂದೊಡ್ಡಿ ನಿಂತರು.

ಅಲ್ಲಿ ಗಂಡಸರೆಂದರೆ ತಾತಪ್ಪ ಬಾಬಣ್ಣ ಇಬ್ಬರೇ. ಆದರೂ ಓಡಾಡಿ ಎಲ್ಲ ವ್ಯವಸ್ಥೆ ಮಾಡಿದರು. ಕಬ್ಬಿನ ನೆರಳ ಬದಿಯಲ್ಲಿಯೇ ಊಟಕ್ಕೆ ಕೂಡುವದೆಂದು ಗೊತ್ತಾಗಿದ್ದಿತು. ನೀರು ಬಾಳೆಲೆಗಳನ್ನು ಅಲ್ಲಿ ಒಯ್ದು ಒದಗಿಸಿದರು. ಅಡಿಗೆಯ ಬುಟ್ಟಿಯೂ ತುಂಬಿ ಅಲ್ಲಿಗೆ ಸಾಗಿತು. ಬಸಿರಿಗೆ ಹೂ ಮುಡಿಸಲಾಯಿತು. ಎಲ್ಲರೂ ಕುಳಿತು ಊಟ ಮಾಡಿದರು.

ಊಟ ಸವಿಯಾಗಿತ್ತು. ಎಲ್ಲರಿಗೂ ಸಂತಸ. ಚಂದ್ರವ್ವನಂತೂ ಹಿರಿ ಹಿರಿ ಹಿಗ್ಗಿದ್ದಳು. ಆದರೂ ಆ ಹಿಗ್ಗಿನಲ್ಲಿ ತುಸು ದುಗುಡವೂ ಬೆರೆತಿತ್ತು. ತೋಟದಲ್ಲಿಯ ಕಬ್ಬು ಬಾಡುತ್ತಿದೆಯಲ್ಲ, ಎಂಬುದೇ ಅವಳ ಚಿಂತೆಗೆ ಕಾರಣ. ತಾವೆಲ್ಲ ತಿಂದುಂಡು ಹೋಗುತ್ತೇವೆ. ಮಾಡಿದವರಿಗೂ ಒಳ್ಳೆಯ ದಾಗಬೇಕು, ಎಂಬುದೇ ಅವಳ ಆಶೆಯಾಗಿತ್ತು. ಅದಕ್ಕಂತೇ ಊಟಕ್ಕೆ ಕುಳಿತಾಗ ಅವಳು ಸಹಜ ಅಂದಳು:

" ಬಿಸಿಲ ವೇಳೆಯೊಳಗೆ ಕಬ್ಬು ಬಾಡುತ್ತ ಇದೆ. "

" ನೀರು ಕಡಿಮೆ ಬಿದ್ದವು." ಪದ್ಮಾವತಿಯು ಅಸಮಾಧಾನದಿಂದ ನುಡಿದಳು.

" ಒಂದು ತಿಂಗಳು ಮುಂಚಿತ ಗಾಣ ಹೂಡಿದರಾಯಿತು." ಗಂಗವ್ವ ಸಮಾಧಾನ ಹೇಳುವ ರೀತಿಯಿದು.

" ಗಾಣ ಹೂಡುವುದೇನು ಹೇಳುವಿ, ಬೆಲ್ಲ ಆಗಬೇಕಲ್ಲ. " ಚಂದ್ರವ್ವ ಅಂದಳು.

" ಈಗಲೇ ಸಂತೆಗೆ ಒಯ್ದು ಮಾರಬೇಕು. " ಸುಂದರಿ ಸೂಚಿಸಿದಳು.

" ಅದೂ ಒಂದು ವಿಚಾರ ಇತ್ತು. ಆದರೆ ಸೆಟ್ಟರು ಒಪ್ಪಲಿಲ್ಲ. ಸಂತೆಗೆ ಒಯ್ದು ಮಾರಿದರೆ ಎಲ್ಲ ಕಬ್ಬವನ್ನೇನೂ ಮಾರಲಿಕ್ಕೆ ಶಕ್ಯವಿಲ್ಲ. ಕಿರುಕಳ ಬಂಡಿ ಎರಡು ಬಂಡಿ ಮಾರಿದರೆ ದುಡ್ಡು ಕೈಗೆ ಹತ್ತುವದಿಲ್ಲ, ಎಂದು ಸುಮ್ಮ ನಾದರು. ಏನು ಮಾಡಲಿಕ್ಕೂ ನಾವು ಸ್ವತಂತ್ರರಲ್ಲ " ಎಂದು ಪದ್ಮಾವತಿ ವಿವರಿಸಿದಳು.

" ಹಾಗಾದರೆ ನೀರಿಗೆ ಏನು ಮಾಡನ್ನುವರು ? " ಚಂದ್ರವ್ವನ ಪ್ರಶ್ನೆ ಯಿದು.

" ಈ ಊರ ತೋಟಗಳ ಗತಿಯೇ ಹೀಗೆ. ಮಳೆಗಾಲ ಆದರೆ ಬಾವಿಗೆ ನೀರು, ಇಲ್ಲವಾದರೆ ಇಲ್ಲ. ನಮ್ಮ ಕಡೆಗೆ ಹಾಗಿಲ್ಲ. " ಎಂದು ತಮ್ಮ ತವರು ಮನೆಯ ತೋಟದ ವಿಷಯ ಪದ್ಮಾವತಿ ಹೇಳಿದಳು.

ಹೀಗೆ ಮಾತು ತಿನಿಸು ಸಮನಾಗಿ ಸಾಗಿದ್ದಿತು. ಆಮೇಲೆ ಇಳಿಹೊತ್ತಿನ ವರೆಗೆ ವಿಶ್ರಾಂತಿ ತಕ್ಕೊಂಡರು. ತೋಟದಲ್ಲಿಯ ಉಳಿದ ಬೆಳೆಗಳನ್ನು ತಿರು ಗಾಡಿ ನೋಡಿದರು. ಏನು ಮಾಡಿದರೂ ಗಂಗವ್ವನಿಗೆ ಸಮಾಧಾನವಿಲ್ಲ.

ಎಮ್ಮೆಯನ್ನು ಕಂಡು ಮರಮರ ಮರುಗಿದಳು. ಗುಡಿಸಲಿನೊಳಗೆ ಒಲೆಯ ಮೇಲೆ ದೊಡ್ಡ ಗಡಿಗೆಯೊಂದರಲ್ಲಿ ಹಾಲು ಕಾಯುವದನ್ನು ನೋಡಿಯಂತೂ ಅವಳ ಜೀವ ಕೆಳಗೆ ಮೇಲಾಯಿತು ತನ್ನ ಮನೆಯಲ್ಲಿ ಕಾಯಬೇಕಾದ ಹಾಲು ಇಲ್ಲಿ ಕಾಯ್ಬರಿ ಅವಳು ಹೇಗೆ ಸುಮ್ಮನಿದ್ದಾಳು? ಉಟವಾಯಿತು, ತಿನಿಸಾಯಿತು ಎಲ್ಲರೂ ಸಂತೋಷದಲ್ಲಿದ್ದಾರೆ. ಆದರೆ ಅವಳಿಗೆ ಶಾಂತಿ ಯಿಲ್ಲ, ಸುಖವಿಲ್ಲ. ಅನ್ಯಮನಸ್ಕಳಾಗಿಯೇ ಇದ್ದಾಳೆ. ಹೇಗೋ ಎಲ್ಲ ರೊಡನೆ ಕಾಲಕಳೆದು ಮನೆಗೆ ಬಂದಳು.

ಬರಬರುತ್ತ ದಾರಿಯಲ್ಲಿ ಗಂಗವ್ವ ಏನೇನೋ ಲೆಕ್ಕ ಹಾಕಿದಳು. ಪದ್ಮಾವತಿಯ ಬಾಳಿನ ಇದೆಲ್ಲ ಸಿಸ್ತನ್ನು ತೋರಿಸಲಿಕ್ಕೆಂದೇ ತಾತಪ್ಪ ಊಟದ ನಿಮಿತ್ತಮಾಡಿ ತನ್ನನ್ನು ತೋಟಕ್ಕೆ ಕರೆಯಿಸಿರಬೇಕೆಂದು ಭಾವಿಸಿ ದಳು. ಇದೊಂದು ತನಗೆ ಅವಮಾನ ಎಂದು ಭಾವಿಸಿದಳು. ಅದರ ಸೇಡು ತಕ್ಕೊಳ್ಳುವುದಕ್ಕೆ ಅವಳ ಮನಸ್ಸು ಮುಂದುವರಿಯಿತು. ತನಗೆ ಇಲ್ಲದ ಎಮ್ಮೆ ಅವರಿಗೇಕೆ? ಎಂದು ಮನದಲ್ಲಿಯೇ ಕೇಳಿಕೊಂಡಳು.

ಎರಡು ದಿನಗಳು ಕಳೆದವು. ಒಂದು ದಿನ ಬೆಳಗಿನಲ್ಲಿ ದನಗಳಿಗೆ ಮೇವು ಹಾಕಲಿಕ್ಕೆ ತಾತಪ್ಪ ಎದ್ದ. ಇನ್ನೂ ತಾಸೆರಡು ತಾಸು ರಾತ್ರಿ ಇರ ಬೇಕು. ಬಾಬಣ್ಣನಿಗೆ ಏಳಲಿಕ್ಕೆ ಆಗುವದಿಲ್ಲ. ಯಾತಕ್ಕೆ ಹೂಡುವ ಎತ್ತುಗಳನ್ನು ಮೇಯಿಸಲಿಕ್ಕೆ ಬೇಕು, ಎಂದು ರಾತ್ರಿ ತಾನು ತೋಟದಲ್ಲಿ ಇದ್ದಾಗ ಎರಡೆರಡು ಸಲ ಎದ್ದು ದನಗಳಿಗೆ ಮೇವು ಹಾಕುವನು. ಈ ಹೊತ್ತೂ ಅದರಂತೆ ಹಾಕಿದ. ಎರಡೂ ಎತ್ತುಗಳು ಎದ್ದು ಗಬಗಬ ಮೇವು ತಿನ್ನಲಿಕ್ಕೆ ಆರಂಭಿಸಿದವು. ಎಮ್ಮೆಯು ಮುಂದೆಯೂ ಮೇವು ಒಗೆದ. ಆದರದು ತಿನ್ನಲಿಕ್ಕೆ ಏಳಲಿಲ್ಲ. "ದೆವ್ವಿನ ಜಾತಿ ಎದ್ದು ಮೇವು ಸಹಿತ ತಿನ್ನುವದಿಲ್ಲ" ಎಂದು ಮನದಲ್ಲಿಯೇ ಅಂದುಕೊಂಡು ತಿರುಗಿ ಹಾಸಿಗೆಯಲ್ಲಿ ಬಂದು ಮಲಗಿದ.

ಆಗ ಪದ್ಮಾವತಿ ಅರನಿದ್ರೆಯಲ್ಲಿದ್ದಳು. ಮಾವ ಹೊರಗೆ ಹೋಗಿ ಮೇವು ಹಾಕಿ ಬಂದನೆಂಬ ಕಲ್ಪನೆ ಅವಳಿಗೆ ಆಗಲಿಲ್ಲ. ದನಗಳು ಎದ್ದು ಮೇವು ತಿನ್ನುವ ಸಪ್ಪಳ ಮಾತ್ರ ಕೇಳಬಂದಿತು. ಅದೇಕೋ ಆದಿನ ಅವಳ

ಮನಸ್ಸಿಗೆ ಸಮಾಧಾನವಿಲ್ಲ. ಕೆಟ್ಟ ಕನಸುಗಳನ್ನೇ ಬೆಳತನಕ ಕಂಡಳು. ಈಗ ಮತ್ತೆ ಕನಸಿಗೆ ಆರಂಭವಾಯಿತು.

'ಒಲೆಯ ಮೇಲೆ ದೊಡ್ಡ ಹಂಡೆಯೊಂದರಲ್ಲಿ ಹಾಲನ್ನು ಕಾಯಿಸಲಿಕ್ಕೆ ಇಟ್ಟಿದ್ದಾಳೆ. ಮೇಲೆ ಕೆನೆಯು ದಪ್ಪಾಗಿ ಬಂದಿದೆ. ಇತ್ತ ತಾನು ಮಜ್ಜಿಗೆ ಮಾಡುತ್ತಿದ್ದಾಳೆ. ರವಿಗೆಯನ್ನು ಬದಿಗೆ ಮಾಡಿ ನೋಡುತ್ತಾಳೆ. ಬೆಣ್ಣೆ ಮೇಲೆ ತೇಲಿ ಬಂದಿದೆ ಗಡಿಗೆಯೊಂದನ್ನು ತಕ್ಕೊಂಡು ಬೆಣ್ಣೆ ತೆಗೆಯಲು ಕುಳಿತಳು ಎಷ್ಟು ತೆಗೆದರೂ ಬೆಣ್ಣೆಯೇ ಆಗದು. ತೆಗೆದೇ ತೆಗೆದಳು. ಹಾಲಿನ ಹಂಡೆಯ ಕಡೆಗೆ ಆಗಾಗ ಹೊರಳಿ ನೋಡುವಳು. ಹೆಮ್ಮೆ ಪಡುವಳು. ಇಷ್ಟರಲ್ಲಿ ಒಮ್ಮಿಂದೊಮ್ಮೆ ಹಾಲು ಉಕ್ಕಲು ಆರಂಭವಾಯಿತು ಓಡಿಹೋಗಿ ಒಲೆಯಮೇಲಿಂದ ಇಳಿಸಲು ಯತ್ನಿಸಿದಳು ಕೈ ಸುಟ್ಟು ಪಾತ್ರೆ ನೆಲಕ್ಕೆ ಬಿತ್ತು. ಗುಡಿಸಲು ತುಂಬ ಹಾಲೇ ಹಾಲು. ಅಸಮಾದಾನದಿಂದ ಒಂದು ಕ್ಷಣ ದಂಗುಬಡಿದು ನಿಂತಳು ಪದ್ಮಾವತಿ. ಹಿಂದೆ ಏನೋ 'ಖಡಕ್' ಎಂದು ಸದ್ದಾಯಿತು.

ಹೊರಳಿ ನೋಡಿದಳು. ಮಜ್ಜಿಗೆಯೆಲ್ಲ ನೆಲಕ್ಕೆ ಸುರಿದಿವೆ. ಕರಿಯ ಆಡವಿಂ ಬೆಕ್ಕೊಂದು ಬೆಣ್ಣೆಯ ಮುದ್ದೆಯನ್ನು ಎತ್ತಿಕೊಂಡು ಹೋಗುತ್ತಿದೆ. ನೆಲದ ಹಾಲು ಮಜ್ಜಿಗೆ ಕೂಡಿತು. ಗಂಟುಗಂಟಾಯಿತು.

ಹೊರಗೆ ಎಮ್ಮೆಗೆ ಯಾರೋ ಹೊಡೆಯುತ್ತಿದ್ದಾರೆ!

ಪದ್ಮಾವತಿಯ ಹೊಟ್ಟೆಯಲ್ಲಿ ಕಳವಳ. ಗಾಬರಿಯಾಗಿ ಕಣ್ದೆರೆದಳು. ಹೊರಗೆ ತಿಳಿಯಾದ ಬೆಳದಿಂಗಳು ಪಸರಿಸಿದೆ. ಅದನ್ನು ಕನಸಿನೊಳಗಿನ ನೆಲದ ಹಾಲು ಮಜ್ಜಿಗೆಯೆಂದೇ ಅವಳು ಭಾವಿಸಿದಳೊಂದು ಕ್ಷಣ. ನರಿಕೆಯ ಸೂರಿನೊಳಗಿಂದ ಬೆಳಗಿನ ತಂಗಾಳಿ ಬಂದು ತಗುಲಿತು. ಅವಳ ಮೈಮೇಲೆ ಮುಳ್ಳುಗಳೆದ್ದುವು. ಪದ್ಮಾವತಿ ಹಾಸಿಗೆಯಿಂದ ಎದ್ದಳು. ದನಗಳಿಗೆ ಮೇವು ಹಾಕಲೆಂದು ಹೊರಗೆ ನಡೆದಳು. ಮಲಗಿದಲ್ಲಿಂದಲೇ ತಾತಪ್ಪ ಇದನ್ನು ಕಂಡು ಹೇಳಿದ:

"ಈಗ ದನಗಳಿಗೆ ಮೇವು ಹಾಕಿರುವೆ ಆಂ!"

ಮಾವ ಈರೀತಿ ಹೇಳಿದರೂ ಕೂಡ ಪದ್ಮಾವತಿ ಹೊರಗೆ ಹೋದಳು. ಯಾಕೋ ಅವಳ ಮನಸ್ಸು ಎಮ್ಮೆಯ ಕಡೆಗೆ ಹರಿಯುತ್ತಿದ್ದಿತು. ಗಂಡ

ಸದು ಯಾವಾಗಾದರೂ ಎತ್ತುಗಳಿಗಷ್ಟೇ ಹೆಚ್ಚಿಗೆ ಮೇವು ಹಾಕುವರು. ಎಮ್ಮೆಗಳಿಗೆಂದರೆ ಅವರು ಅಷ್ಟು ಮಹತ್ವವನ್ನೇ ಕೊಡುವದಿಲ್ಲ, ಎಂದು ಕೊಂಡು ತಾನೂ ಒಂದಿಷ್ಟು ಕೈಯಲ್ಲಿ ಮೇವನ್ನು ತಕ್ಕೊಂಡೇ ಅಲ್ಲಿಗೆ ಹೋದಳು

ಎಮ್ಮೆಯು ತಾತಪ್ಪ ಹಾಕಿದ ಮೇವಿನ ಒಂದು ಎಲೆಯನ್ನೂ ಕೂಡ ಕಚ್ಚಿರಲಿಲ್ಲ. ಕಾಲು ಸೆಟಿಸಿ ಅಡ್ಡ ಬಿದ್ದಿದ್ದಿತು. ಆದರೂ ಪದ್ಮಾವತಿಯು ಅದರ ಮುಂದೆ ತಾನೊಯ್ದ ಮೇವನ್ನು ಒಗೆದಳು. ಅಂದರೂ ಅದು ಏಳ ಲಿಲ್ಲ. "ಏಳಬೇ!" ಎಂದು ಅಕ್ಕರೆಯಿಂದ ಕೈನೆವರಿದಳು. ಅದು ಮಲಗಿ ದಲ್ಲಿಯೇ ಗೋಣು ಹಾಕಿತು. ಕಾಲನ್ನು ಒಳಗೆ ಎಳೆದುಕೊಳ್ಳಲು ಪ್ರಯತ್ನ ಮಾಡಿತು. ಕಾಲುಗಳು ಒಳಗೆ ಬರಲಿಲ್ಲವೇನೊ! ಬೆಳದಿಂಗಳ ಮಂದ ಪ್ರಕಾಶದಲ್ಲಿ ಅದರ ಎರಡೂ ಕಣ್ಣುಗಳು ಹೊಳೆದುವು. ನೀರೂ ಬಳ ಬಳ ಇಳಿಯುತ್ತಿದ್ದುವು.

"ಮಾಮಾ! ಎಮ್ಮೆ ಹೀಗೇಕೆ ಮಾಡತದ ನೋಡ ಬಾ!"

ಗಾಬರಿಯಾಗಿ ನಿಂತಲ್ಲಿಯೇ ಒದರಿದಳು. ಅವಳ ದನಿ ಕೇಳಿ ಬಾಬ ಣ್ಣನೂ ಎಚ್ಚತ್ತ.

"ಈಗ ನಸುಕಿನಲ್ಲಿ ಎದ್ದು ಅಲ್ಲೇಕೆ ಹೋಗಿರುವಳೋ?"

ಎಂದ ಆತ ನಿದ್ದೆಗಣ್ಣಿನಲ್ಲಿ. ಆದರೂ ತಾತಪ್ಪನ ಜೀವ ಕೇಳಲಿಲ್ಲ. ತಾನು ಮೇವು ಹಾಕಿದಾಗ ಅದು ಎದ್ದು ತಿನ್ನಲಿಲ್ಲವೆಂಬುದು ಅವನ ಗಮ ನಕ್ಕೆ ಬಂತು. ಅವಸರದಿಂದ ಎದ್ದುಹೋಗಿ ನೋಡಿದ. ಎಮ್ಮೆಯ ಬಾಲ ಹಿಡಿದು ಜಗ್ಗಿದ. ಬೆನ್ನಹುರಿ ತಿಕ್ಕಿದ. ಕಿವಿಯಲ್ಲಿ ಊದಿದ. ಆದರೂ ಎಮ್ಮೆ ಮಿಸುಕಲಿಲ್ಲ.

"ಹುಳಗಿಳ ಮುಟ್ಟಿತೇನು ಮತ್ತ!"

ಎಂದು ಗಾಬರಿಯಾಗಿ ಅದರ ಕಿವಿ ಚಿವುಟಿದ. ಪದ್ಮಾವತಿಯ ಕಡೆಗೆ ಹೊರಳಿ,—

"ಲಾಟನು ಹಚ್ಚಿಕೊಂಡು ಬಾ ಹೋಗು ಬಾಳಾ."

ಎಂದು ಹೇಳಿದ. ಹಾಗೆಯೇ ಒಂದಿಷ್ಟು ಸುಣ್ಣವನ್ನೂ ತರಲಿಕ್ಕೆ ಸೂಚಿಸಿದ. ಬಾಬಣ್ಣನಿಗೂ ಏಳಲಿಕ್ಕೆ ಒದರಿದ. ಓಡಿ ಹೋಗಿ ಕಲ್ಲನ್ನೊಂದು

ತಂದು ಅದರ ಕೊರಳಲ್ಲಿ ಕಟ್ಟಿದ. ಇಷ್ಟರಲ್ಲಿ ಪದ್ಮಾವತಿ ಲಾಟನು ತಕ್ಕೊಂಡು ಬಂದಳು. ಹಿಂದಿನಿಂದಲೇ ಬಾಬಣ್ಣ ಸುಣ್ಣ ತಕ್ಕೊಂಡು ಬಂದ. ಎಲ್ಲರೂ ಗಾಬರಿ ಆಗಿದ್ದರು. ಕಣ್ಣಲ್ಲಿ ಸುಣ್ಣ ಹಾಕಿದರು. ಎಮ್ಮೆಯ ಮೈಗೆ ಎಲ್ಲಿಯಾದರೂ ಕಚ್ಚಾಗಿರುವದೇನು ನೋಡಿದರು. ಎಲ್ಲಿಯೂ ಕಚ್ಚು ಇದ್ದಂತೆ ಕಾಣಲಿಲ್ಲ.

ತಾತಪ್ಪ ಲಾಟನು ತಕ್ಕೊಂಡು ಸುತ್ತಲೂ ನೋಡಿದ. ದವಣಿಯಲ್ಲಿ ಹೋಗಿ ಮೇವನ್ನೂ ಸರಿಸಾಡಿದ. ಇಬ್ಬರೂ ಹಾಕಿದ ಮೇವು ಹಾಗೆಯೇ ಇದ್ದಿತು. ಅದರ ಬುಡದಲ್ಲಿ ಮಡಚಿದ ಒಂದರ್ಧ ರೊಟ್ಟಿ ಇದ್ದಿತು ಲಾಟನಿನ ಬೆಳಕಿನಲ್ಲಿ ತಾತಪ್ಪನ ಕಣ್ಣಿಗೆ ಬಿತ್ತದು. ತಾತಪ್ಪನ ಎದೆ ಜುಮ್ಮೆಂದಿತು ನಿನ್ನೆ ಮುಂಜಾನೆ ತಾನು ಗಂಗವ್ವನ ಮನೆಯಲ್ಲಿ ಉಂಡ ಕಾಡಿಗೆ ಜೋಳದ ರೊಟ್ಟಿಯ ತುಣುಕದು. ತಟ್ಟನೆ ಹೊಳೆಯಿತು; ನಡೆದ ಸಂಗತಿಯು ಕಲ್ಪನೆ ಬಂದಿತು. ಅದೇಕೋ ಅಳಿಯನಿಗೂ ಸೊಸೆಗೂ ಅದು ಕಂಡೀತೆಂದು ಹೆದರಿದ. ಕಾಲಿನಿಂದ ಸರಿಸಿ ಮುಚ್ಚಿದ. ಲಾಟನು ತಕ್ಕೊಂಡು ಇತ್ತ ಬಂದ. ಮನಸ್ಸು ವಿಫಲವಾಗಿದ್ದಿತು.

"ಇನ್ನೇನು ಬದುಕತಗ ಎಮ್ಮೆ!"

ಎಂದು ದುಃಖದಿಂದ ಎಂದ. ಪದ್ಮಾವತಿಯ ಕಣ್ಣೀರು ಈಗಾಗಲೇ ಗಲ್ಲದ ಮೇಲೆ ಇಳಿದಿದ್ದುವು. ಅವು ಧಾರೆಯಾಗಿ ಸುರಿಯತೊಡಗಿದುವು ಎಮ್ಮೆಯ ಹತ್ತಿರ ಹೋಗಿ ಅದರ ಮುಖವನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡಳು. ತಲೆಯಮೇಲೆ ಕೈಯಾಡಿಸತೊಡಗಿದಳು. ಬಿಕ್ಕಿಬಿಕ್ಕಿ ಅಳತೊಡಗಿದಳು.

ತಾತಪ್ಪ ನಿರಾಶೆಯಿಂದ ಲಾಟನು ದೂರದಲ್ಲಿ ಇಟ್ಟು ಗುಡಿಸಲಿನ ಕಡೆಗೆ ಹೋದ. ಬಾಬಣ್ಣನನ್ನೂ ಕರೆದ. ಆತ ಬರಲಿಲ್ಲ. ಅಲ್ಲಿಯೇ ನೆಲಕ್ಕೆ ಕುಳಿತ. ಎಮ್ಮೆ ಕಾಲುಗಳನ್ನು ನೆಲಕ್ಕೆ ತಿಕ್ಕಹತ್ತಿತು. ಬಾಯಿಂದ ಬುರುಗು ಬಂದಿತು. ಪದ್ಮಾವತಿ ತನ್ನ ಸೆರಗಿನಿಂದ ಒರಸಿದಳು. ಎಮ್ಮೆಗೆ ಏನೂ ಆಗದಿರಲಿ, ದೇವರಿಗೆ ಐದು ರೂಪಾಯಿಯ ಕಪ್ಪುರ ಸುಡುವೆನೆಂದು ಹರಕೆ ಹೊತ್ತಳು. ನೆಲದ ಮಣ್ಣನ್ನು ಎತ್ತಿ ಅಂಗಾರವೆಂದು ಅದರ ಹಣೆಗೆ ಹಚ್ಚಿದಳು. ತನ್ನ ಹಣೆಗೂ ಹಚ್ಚಿಕೊಂಡಳು.

ಪದ್ಮಾವತಿಯ ಬೇಡಿಕೆಯನ್ನು ದೇವರು ಮನ್ನಿಸಲಿಲ್ಲ. ಅವನ ಕೈಯೊಳಗೂ ಅದು ಇರಲಿಲ್ಲ!

೧೮

ಎಮ್ಮೆ ಸತ್ತುದರಿಂದ ಪದ್ಮಾವತಿಯ ಕಣ್ಣೀರು ಮೂರು ನಾಲ್ಕು ದಿನಗಳ ವರೆಗೆ ಒಂದೇ ಸವನೆ ಸುರಿದುವು. ಮನೆಯ ಮಕ್ಕಳಿಗೆಲ್ಲ ದುಃಖ. ತಾತಪ್ಪನ ಮನಸ್ಸೂ ತುಂಬ ಭಾರವಾಗಿದ್ದಿತು. ಬಾಬಣ್ಣನೂ ಅಸಮಾಧಾನಕ್ಕೆ ಒಳಗಾಗಿದ್ದ. ಉರೊಳಗಿನ ಹಲವರು ಬಂದು ಸಮಾಧಾನ ಹೇಳಿ ಹೋದರು. ಅವರಲ್ಲಿ ಮೊದಲು ಬಂದವಳೆಂದರೆ ಗಂಗವ್ವ. ಅವಳು ತಾಸೆರಡು ತಾಸು ಕಳಿತು ಪದ್ಮಾವತಿಯನ್ನು ವಿವಿಧ ಮಾತುಗಳಿಂದ ಸಂತೈಸಿ ಹೋದಳು.

ತಾತಪ್ಪ ಈಗ ಐದಾರು ದಿನಗಳಿಂದ ಊರಲ್ಲಿ ಹೋಗಿಲ್ಲ. ಅವನ ಮನಸ್ಸಿನಲ್ಲಿ ಒಂದೇಸವನೆ ಹೋರಾಟ ನಡೆದಿದೆ. ಎರಡು ಹೊತ್ತು ಪದ್ಮಾವತಿ ಕರೆಯಲು ಎದ್ದು ಹೋಗಿ ಊಟ ಮಾಡುವ. ಮತ್ತೆ ಬಂದು ಮೂಲೆ ಹಿಡಿದು ಕೂಡುವ. ಮತ್ತೆ ಅವನ ಮನಸ್ಸಿನಲ್ಲಿ ಹೊಯ್ದಾಟ.

ಇನ್ನು ಗಂಗವ್ವನ ಮನೆಗೆ ಹೋಗಬೇಕೋ ಬೇಡವೋ ?

ಅವಳೇ ಹೀಗೇಕೆ ಮಾಡಿಸಿದಳು ?

ತನಗೆ ಎಮ್ಮೆ ಬೇಕಿದ್ದರೆ ನನಗೆ ಹೇಳಬೇಕಿತ್ತು !

ಇನ್ನು ಅವಳ ವಿರುದ್ಧ ನಿಲ್ಲಲೆ ?

ಅವಳ ಮನೆಯಲ್ಲಿ ದನಕರುಗಳಿಲ್ಲವೆ ?

ಹೀಗೆಲ್ಲ ಅವನ ಮನಸ್ಸಿನಲ್ಲಿ ವಿಚಾರಗಳೆದ್ದರೂ ಗಂಗವ್ವ ಈ ಕೆಲಸ ಮಾಡಿಸಿರುವಳೆಂಬುದು ಅಳಿಯನಿಗೂ ಸೊಸೆಗೂ ತಿಳಿಯದಂತೆ ಎಚ್ಚರ ವಹಿಸಿದ್ದನು ಅದಕ್ಕಂತಲೇ ಆದಿನ ಇರುಳು ವಿಷ ಹಾಕಿದ ರೊಟ್ಟಿಯ ತುಣುಕನ್ನು ಆತ ಕಾಲಿನಿಂದ ಮುಚ್ಚಿದ್ದು. ಇದೂ ಅಲ್ಲದೆ ಹೊಲೆಯರು ಸತ್ತ ಎಮ್ಮೆಯನ್ನು ಸುಲಿದು, ಸಾಯಂಕಾಲ ಬಂದು, ಪದ್ಮಾವತಿಯ ಮುಂದೆ ವಿಷದಿಂದ ಎಮ್ಮೆ ಸತ್ತಿದೆ ಎಂದು ಹೇಳಿದಾಗ ತಾನೇ ಮುಂದಾಗಿ ಬೆದರಿಸಿ ಕಳಿಸಿದ್ದ. ಚಂದ್ರವ್ವ ಸಮಾಧಾನ ಹೇಳಲಿಕ್ಕೆ ಬಂದಾಗ ಪದ್ಮಾವತಿಯು ಅಳುತ್ತ ಹೇಳಿದಳು :

" ಕೆಟ್ಟ ಜನರಿಗೆ ನೋಡುವದಾಗಲಿಲ್ಲ. ನನ್ನ ಮಕ್ಕಳ ಬಾಯಲ್ಲಿ ಮಣ್ಣು ಹಾಕಿದರು! "

" ಯಾರ ಮಾಡಿರುವರು ನನಗೆಲ್ಲ ಗೊತ್ತಿದೆ. "

ಬಾಬಣ್ಣನ ನಿರ್ಧಾರದ ನುಡಿಯಿದು!

" ಯಾರ ಇದ್ದರೇನು ? ಅವರ ಹೆಸರ ತಗೊಂಡ ನಿಮಗೆ ಏನು ಮಾಡುವುದು? ಹಾನಿಯಾದದ್ದೇನು ತಿರುಗಿ ಬರತದ? ಸುಮ್ಮನೆ ನಿಮ್ಮ ನಿಮ್ಮ ಎಚ್ಚರದೊಳಗಿರುವುದಾಯಿತು. ಯಾರ ಹೆಸರು ಹೇಳಿ ಮತ್ತೆ ಕೆಟ್ಟ ಆಗಬಾರದು. ಇಲಿಗೆ ಬಡಿಯಲಿಕ್ಕೆ ಹೋದರೆ ಗಣಪತಿಗೆ ಪೆಟ್ಟು ತಗಲುವದು. "

ಚಂದ್ರವ್ವ ಈರೀತಿ ಸಮಾಧಾನ ಹೇಳಿ, ಮುಂದಿನ ಪ್ರಪಂಚದ ದಾರಿ ತೋರುವಳು. ಇದನ್ನೆಲ್ಲ ಕೇಳಿಕೊಂಡು ತಾತಪ್ಪ ನುಡಿಯುವನು. ಇವರ ಮಾತನ್ನು ಅಲ್ಲಗಳೆಯುವದೇ ಅವನ ಉದ್ದಿಶ್ಯ :

" ಯಾರ ಯಾತಕ್ಕ ಮಾಡಲಿಕ್ಕೆ ಹೋದಾರು? ನಮ್ಮ ದೈವ ಕೆಟ್ಟ. ಎಲ್ಲೋ ಮೇಯಲಿಕ್ಕೆ ಹೋದಾಗ ನಾಗರ ಹಾವು ಕಚ್ಚೇದ. ರಾತ್ರಿ ನಾವು ನಿದ್ದೆ ಹತ್ತಿ ಮಲಗಿದ್ದೇವೆ. ಅದು ವಿಷ ಏರಿ ಸತ್ತಿದೆ. ತೀರ ಹೆಚ್ಚ ಆದಾಗ ನಾವು ನೋಡಿದೇವೆ. "

ಇದು ತಾತಪ್ಪನ ಕಾರಣ. ಅವನಿಗೆ ಮಾತ್ರ ಗಂಗವ್ವನೇ ಎಮ್ಮೆ ಸಾಯಲು ಕಾರಣಳಾಗಿರುವಳೆಂದು ಮನದಟ್ಟಾಗಿದೆ. ಆದರೂ ಅದನ್ನು ಹೊರಗೆ ಹೇಳಲಾರ. ಈಗ ಹೇಳಿದರೆ ಅಳಿಯನ ಮನೆತನದ ದೃಷ್ಟಿಯಿಂದ ಇನ್ನು ಮುಂದೆ ತಾನು ಅಲ್ಲಿ ಹೋಗುವುದು ಅನುಚಿತವೆನಿಸುವುದು. ಊರ ಜನರೂ ಹಳಿಯುವರು. ತಾನೇ ಹೇಳಿ ಮಾಡಿಸಿರುವನೆಂದೂ ಅನ್ನಬಹುದು. ಇದನ್ನೆಲ್ಲ ತಪ್ಪಿಸಿಕೊಳ್ಳಲಿಕ್ಕೆ ಅವನ ಪ್ರಯತ್ನ.

ಮೇಲೆ ಈ ಪ್ರಯತ್ನ ಸಾಗಿದ್ದರೂ ಹೃದಯದಲ್ಲಿ ತೂಗಾಟ ತಪ್ಪಿದ್ದಲ್ಲ. ಗಂಗವ್ವನೊಡನೆ ಬಹುದಿನಗಳಿಂದ ನಡೆದು ಬಂದ ಸಂಬಂಧ ಕಡಿದುಕೊಳ್ಳಲಾಗದ ಮನಸ್ಥಿತಿ ಒತ್ತಟ್ಟಿಗೆ. ಅವಳ ವಿಶ್ವಾಸಘಾತಕ ಕೃತಿಯ ನಿಷೇಧ ಇನ್ನೊಂದು ಕಡೆಗೆ. ದಿನಗಳೆದಂತೆ ಅವನ ದೃಷ್ಟಿಯಲ್ಲಿ ಗಂಗವ್ವ ಕ್ಷಮೆಗೆ

ಪಾತ್ರಳೆನಿಸಿಕೊಳ್ಳುತ್ತ ನಡೆದಳು. ಒಂದು ವಾರದ ನಂತರ ಹಿಂದೆಳೆಯುವ ಮನಸ್ಥಿತಿಯಲ್ಲಿಯೇ ಆತ ಗಂಗವ್ವನ ಮನೆಗೆ ಹೋದ.

ಗಂಗವ್ವನಿಗೂ ಹೆದರಿಕೆ ಇದ್ದಿತು. ತಾನು ಮಾಡಿಸಿದ ಕೆಲಸ ಒಳ್ಳೆಯ ದಲ್ಲ. ಏನೋ ಮಾತ್ಸರ್ಯದ ಮನಸ್ಥಿತಿಯಲ್ಲಿ ಬೇಡರವನಿಗೆ ಹತ್ತು ರೂಪಾಯಿಗಳನ್ನು ಕೊಡುವದನ್ನು ಮಾಡಿ ಎಮ್ಮೆಗೆ ವಿಷ ಹಾಕಿಸಿದೆ. ಈಗ ಅವರಿಗೂ ಇಲ್ಲ, ನನಗೂ ಇಲ್ಲದಂತಾಗಿ ಹೋಯಿತು. ಮೇಲಾಗಿ ನನ್ನ ಕೃತಿಯು ಗುಟ್ಟು ತಾತಪ್ಪನಿಗೂ ಹೊಳೆದುಹೋಯಿತು. ಇಂಥದರಲ್ಲಿ ಆತ ನುರಿತವ. ನನ್ನ ಹೆಜ್ಜೆಯನ್ನು ಗುರುತಿಸದೇ ಬಿಡುವನೇ? ಅದಕ್ಕೇ ಆತ ಇನ್ನೂ ನನ್ನ ಮನೆಗೆ ಬರಲಿಲ್ಲ. ಹಿಂದೆ ಹುಟ್ಟಿಸಿದ—ಪದ್ಮಾವತಿಯ ಸಂಬಂಧದ—ಸುದ್ದಿಯಿಂದಲೇ ಆತ ಅವರ ಮನೆ ಬಿಡುವಂತಾಗಿತ್ತು. ಈಗೀಗ ಇತ್ತ ಆತ ಹೆಚ್ಚಾಗಿ.ಬರುತ್ತಿದ್ದ. ಇದನ್ನು ಮಾಡಿ ಮತ್ತಿಷ್ಟು ಕೆಡಿಸಿ ಕೊಂಡೆ. ಎಂದು ಚಿಂತಿಸುತ್ತಿದ್ದಳು. ತಾತಪ್ಪ ಬಾರದೆ ದಿನಗಳು ಕಳೆದಷ್ಟು ಈ ಚಿಂತೆ ಮತ್ತಿಷ್ಟು ಹೆಚ್ಚಾಗತೊಡಗಿತ್ತು.

ಇಂದು ಅವಳ ಮನೆಗೆ ತಾತಪ್ಪ ಬಂದ. ಅವಳಿಗೆ ತುಂಬ ಸಮಾಧಾನ. ಆದರೆ ಅದನ್ನು ವ್ಯಕ್ತಮಾಡಲು ಹಿಂಜರಿಯುವಳು. ಅವನ ಕೂಡ ಮಾತಾ ಡಲೂ ಅವಳಿಗೆ ಹೆದರಿಕೆ. ಅವನ ಸ್ಥಿತಿಯೂ ಹಾಗೆಯೇ ಗಂಗವ್ವನಂಥವ ಳೊಡನೆ ಏನೆಂದು ಮಾತನಾಡುವುದು? ಏನೋ ಮನಸ್ಸು ಕೇಳಲಿಲ್ಲ, ಅಲ್ಲಿಯವರೆಗೆ ಬಂದಿದ್ದ. ಊರೊಳಗೆ ಬಂದ ಮೇಲೆಯೂ ಕೂಡ ಒಮ್ಮೆ ತಿರುಗಿ ತೋಟಕ್ಕೆ ಹೋಗಲೇ? ಎಂದು ತನ್ನಲ್ಲಿಯೇ ತಾನು ಕೇಳಿಕೊಂಡಿದ್ದ. ಆದರೂ ಆ ಮಾತು ಅವನಿಂದ ಸಾಧ್ಯವಾಗಲಿಲ್ಲ. ಹೇಗೋ ಗಂಗವ್ವನ ಮನೆ ಯನ್ನು ಬಂದು ಸೇರಿದ್ದ.

ಆ ಇರುಳು ತಾತಪ್ಪ ಗಂಗವ್ವ ಇಬ್ಬರೂ ಕೂಡಿ ಕಳೆದರೂ ಹೆಚ್ಚಾಗಿ ಯಾರೂ ಮಾತನಾಡಲಿಲ್ಲ. ಇಬ್ಬರೂ ತಪ್ಪು ಮಾಡಿದವರಂತೆ ವರ್ತಿಸಿದರು. ಬೆಳಗಿನಲ್ಲಿ ತಾತಪ್ಪ ತೋಟದ ಕಡೆಗೆ ಹೊರಟ. ಮತ್ತೆ ಯಾವಾಗ ಬರುವಿ? ಎಂದು ಗಂಗವ್ವನೂ ಕೇಳಲಿಲ್ಲ. ಕೇಳುವ ಧೈರ್ಯವೂ ಅವಳಲ್ಲಿ ಇರಲಿಲ್ಲ ವೇನೋ!

ಆದರೂ ಈ ಸ್ಥಿತಿ ಬಹಳ ದಿನಗಳವರೆಗೆ ಉಳಿಯಲಿಲ್ಲ. ದಿನಗಳೆದಂತೆ ಅವರಿಬ್ಬರ ನಡುವಿನ ಕಾವಳ ಕರಗುತ್ತ ನಡೆಯಿತು.

ತೋಟದಲ್ಲಿಯು ಕಬ್ಬು ದಿನದಿನಕ್ಕೆ ಬಾಡುತ್ತ ನಡೆದಿದ್ದಿತು. ಮನೆಯಲ್ಲಿ ಗಾಣದ ವಿಚಾರ ಹೊರಟಿತು. ಇನ್ನೂ ಒಂದು ತಿಂಗಳಿಗೆ ಆಗಬೇಕಿದ್ದ ಗಾಣವನ್ನು ಈಗಲೇ ಹೂಡಬೇಕಾಯಿತು. ಗಾಣಕ್ಕೆಂದು ಬಾಳವ್ವನನ್ನು ಕರೆಯಿಸುವ ವಿಚಾರ ಹೊರಟಿತು. ಅವಳೂ ಬಹಳ ದಿನಗಳಿಂದ ತವರು ಮನೆಗೆ ಬಂದಿರಲಿಲ್ಲ.

" ಎಮ್ಮೆ ಸತ್ತುದು ಗೊತ್ತಾದರೆ ಅವಳು ನಿಲ್ಲುತ್ತಿರಲಿಲ್ಲ ! "

ಬಾಬಣ್ಣ ಅಕ್ಕನ ವಿಷಯಕ್ಕೆ ಹೀಗೆ ಹೇಳಿದ.

" ನಾ ಹೇಳಿ ಕಳಿಸಿದೇನ್ರಿ. ಆದರೂ ಬರಲಿಲ್ಲ. ಯಾವಾಗ ಆದರೂ ಬಾಳವ್ವ ಹೀಗೆಯೇ. ಸತ್ತರೂ ಕೆಟ್ಟರೂ ಬರದಿದ್ದರೆ ಯಾವಾಗ ಬರುವವರು ಈ ಹೆಣ್ಣುಮಕ್ಕಳು ? "

ಪದ್ಮಾವತಿಯು ಅತ್ತಿಗೆಯ ಮೇಲೆ ಆರೋಪ ಹೊರಿಸಿದಳು.

" ನೀ ಯಾರ ಕಡೆಯಿಂದ ಹೇಳಿರುವಿ ? "

" ಕಮತರ ಮುದುಕಿ ತನ್ನ ಮಗಳ ಮನೆಗೆ ಹೋದಳು. ಅವಳ ಊರೂ ಬಾಳವ್ವನ ಊರೂ ಒಂದೇ. ಅಂತ ಹೇಳಿ ಕಳಿಸಿದ್ದೆ. "

" ಅವಳು ಹೋಗಿ ಹೇಳಿರುವಳೋ ಇಲ್ಲೋ ಯಾರಿಗೆ ಗೊತ್ತು ? "

ಎಂದು ಬಾಬಣ್ಣ ಅಕ್ಕನ ಮೇಲೆ ನಂಬಿಗೆಯನ್ನು ಪ್ರದರ್ಶಿಸಿದ. ಕೊನೆಗೆ ಬಾಳವ್ವನನ್ನು ಗಾಣಕ್ಕೆ ಕರೆಯಲು ತಾತಪ್ಪನೇ ಹೋಗುವದೆಂದು ನಿಶ್ಚಯವಾಯಿತು. ಇಲ್ಲಿ ಬೇಕಾಗುವ ಉರುವಲು, ಗಾಣದ ಒಲೆ, ಪಾತ್ರೆಗಳು ಎಲ್ಲ ವ್ಯವಸ್ಥೆಗಳನ್ನೂ ಮೊದಲು ಮಾಡಿದ. ಆಮೇಲೆ ಅಪ್ಪಣ್ಣನಿಗೂ ತನ್ನ ಎತ್ತುಗಳನ್ನು ತಕ್ಕೊಂಡು ಗಾಣಕ್ಕೆ ಬರಬೇಕೆಂದು ಸೂಚಿಸಿದ. ಇನ್ನೂ ಬೇಕಾಗುವ ಹತ್ತೆಂಟು ಎತ್ತುಗಳ ಸಲುವಾಗಿ ಊರಲ್ಲಿ ಹೋಗಿ ಹಲವರಿಗೆ ಹೇಳಿ ವ್ಯವಸ್ಥೆ ಮಾಡಲು ಬಾಬಣ್ಣನಿಗೆ ಸೂಚಿಸಿದ. ಒಂದು ಎತ್ತಿಗೆ ದಿನಾಲು ನಾಲ್ಕು ಸೇರು ಬೆಲ್ಲವನ್ನು ಬಾಡಿಗೆಯೆಂದು ಕೊಡಲಿಕ್ಕೆ ಅಡ್ಡಿಯಿಲ್ಲವೆಂದು ತೀರ್ಮಾನಿಸಿದ. ಎತ್ತುಗಳ ಸಂಗಡ ಬಂದ ಆಳುಗಳಿಗೆ ಮೂರು ಸೇರಿನಂತೆ ಬೆಲ್ಲ, ಮೇಲೆ ದಿನಕ್ಕೆರಡು ಕಬ್ಬು ಕೊಡುವದೆಂದೂ ಅಳಿಯನಿಗೆ ಹೇಳಿದ.

ಈ ಎಲ್ಲ ನಿಯಮಗಳಿಗೆ ಒಳಪಡುವಂಥವರನ್ನು ಕೆಲಸಕ್ಕೆ ಹೇಳಲಿಕ್ಕೆ ಅಳಿಯನಿಗೆ ಒಪ್ಪಿಸಿ, ತಾನು ಬಾಳವ್ವನನ್ನು ಕರೆಯಲಿಕ್ಕೆ ತೆರಳಿದ.

ಪದ್ಮಾವತಿಗಂತೂ ಈಗ ಬಿಡುವೇ ಇಲ್ಲ. ನಾಳೆ ಬೆಳಗಾದರೆ ಗಾಣ ಬಂತು. ಮನೆಗೆ ಒಂದೆರಡು ವಾರಕ್ಕೆ ಸಾಲುವಷ್ಟು ಜೋಳ ಬೀಸಿ ಇಡಬೇಕು. ಬರುವ ಹೋಗುವ ಜನರಿಗೆ ರಸದಲ್ಲಿ ಹಾಕಿ ಕುಡಿಯಲು ಅಳ್ಳಿಟ್ಟು ಮಾಡಿಡಬೇಕು. ಗಾಣ ಹೂಡುವದೆಂದರೆ ಮದುವೆ ಮಾಡಿದಂತೆ. ಸಾಮಾನು ಒಂದು ಬೇಕೋ ಎರಡ ಬೇಕೋ. ಗಾಣಕ್ಕೆ ಹಾಕಲಿಕ್ಕೆ ಔಡಲ ಎಣ್ಣೆ ತೆಗೆಯಬೇಕು. ಗಾಣದೇವಿಯ ಪೂಜೆಗೆ ಎಲ್ಲ ಜಿನಸಿನ ವ್ಯವಸ್ಥೆ ಮಾಡಬೇಕು. ಇದರಲ್ಲಿ ಅವಳಿಗೆ ಮೈ ತುರಿಸಿಕೊಳ್ಳುವುದಕ್ಕೂ ಸಮಯವಿಲ್ಲ.

ಬಾಬಣ್ಣ ಊರಿಗೂ ತೋಟಕ್ಕೂ ಎಡತಾಕಿ ಗಾಣಕ್ಕೆ ಬೇಕಾಗುವ ಎಲ್ಲ ಸಲಕರಣೆಗಳನ್ನು ಕೂಡಿಸಿದ. ಹಲವು ಜನರಿಗೂ ಹೇಳಿದ. ದುಡಿಯಲಿಕ್ಕೆ ಬರುವವರು ಕೆಲವರಾದರೆ, ಕಬ್ಬು ತಿಂದು ರಸ ಕುಡಿದು ಹೋಗಲಿಕ್ಕೆಂದು ಬರುವವರು ಹಲವರು. ಊರಲ್ಲಿ ಸೆಟ್ಟರಿಗೆ ಬೇಕಾದ ಜನರೂ ಬಹಳ. ಅದರಲ್ಲಿ ಊರ ಮುಂದಿನ ತೋಟ. ಎಲ್ಲರೂ ಬರುವವರೇ. ಬಾಬಣ್ಣ ಬಹಳ ಜನರನ್ನು ಆಮಂತ್ರಿಸದಿದ್ದರೂ ಹೊಟೇಲಿನ ಒಡೆಯನನ್ನೂ, ಆದಪ್ಪ ಮಾಸ್ತರರನ್ನು ಕರೆಯಬೇಕಾದುದರಿಂದ ಸಾಲೆಯ ಎಲ್ಲ ಮಾಸ್ತರರನ್ನೂ ರಸ ಕುಡಿಯಲು ಬರಲಿಕ್ಕೆ ಹೇಳಿ ಬಂದನು.

ಆದಪ್ಪ ಮಾಸ್ತರರು ರಸ ಕುಡಿಯಲಿಕ್ಕೆ ಸಿಗುವದೆಂದು ಸಂತೋಷಗೊಳ್ಳುವದಕ್ಕಿಂತ ಹೆಚ್ಚಿಗೆ ಗಾಣವಾದೊಡನೆಯೇ ತಮ್ಮ ಮೂವತ್ತು ರೂಪಾಯಿಗಳಾದರೂ ಸಿಕ್ಕುವವಲ್ಲ ಎಂದು ಸಂತಸಪಟ್ಟರು. ಒಂದು ವಾರದಲ್ಲಿ ಕೊಡುವೆನೆಂದು ಹೇಳಿ ಬಾಬಣ್ಣ ಒಯ್ದ ಹಣವನ್ನು ಇನ್ನೂ ಮುಟ್ಟಿಸಿರಲಿಲ್ಲ. ತನ್ನ ಹೆಂಡತಿಗೆ ಬಯಕೆಯೂಟ ಕುಪ್ಪಸ ಮಾಡಿರುವ. ನಾಲ್ಕು ದಿವಸ ತಡೆದು ಕೇಳೋಣ ಎಂದು ಆದಪ್ಪ ಮಾಸ್ತರರು ಮೊದಲು ಸ್ವಲ್ಪ ಸಡಿಲುಬಿಟ್ಟರು. ತೀರಿತು, ಬಾಬಣ್ಣ ಮುಂದೆಯೇ ನುಗಿಸಿದ. ಮೆಲ್ಲನೆ ದೊರಕಿದಾಗ ಮಾಸ್ತರರಿಗೆ ಗಾಣವಾದ ಕೂಡಲೆ ಕೊಡುವೆನೆಂದು ಹೇಳಿ ಪಾರಾದ. ಹೀಗಾಗಿ ಅವರೂ ಗಾಣದ ದಾರೀ ಕಾಯುವಂತಾಯಿತು.

ಗಾಣ ಹೂಡುವುದು ಇನ್ನೂ ಐದಾರ ದಿನಗಳಿರುವಾಗ ಬಾಳವ್ವ ತವರು ಮನೆಗೆ ಬಂದಳು. ಅವಳಿಗೆ ಎಮ್ಮೆ ಸತ್ತ ಸುದ್ದಿಯನ್ನು ಯಾರೂ ತಿಳಿಸಿರ ಲಿಲ್ಲವಂತೆ. ಇಲ್ಲಿ ಬಂದು ತುಂಬ ಹಳಹಳಿಸಿದಳು. ಈಗ ಅವಳ ಮಗನೂ ದೊಡ್ಡವನಾಗಿದ್ದ. ಅವನನ್ನೂ ಸಂಗಡ ಕರೆದುಕೊಂಡು ಬಂದಿದ್ದಳು.

ಇನ್ನೆರಡು ದಿನಗಳಲ್ಲಿ ಗಾಣ ಹೂಡುವದಿದೆ ಎಂದರೆ ಪದ್ಮಾವತಿಯು ಸ್ವತಃ ಊರೊಳಗೆ ಹೋಗಿ ಸೆಟ್ಟರ ಮನೆಯ ಹೆಂಗಸರಿಗೂ ಚಂದ್ರವ್ವನ ಮನೆಯವರೂ ಗಾಣಕ್ಕೆ ಬರಲು ಔತಣನವಿತ್ತಳು. ಮನಸ್ಸು ಒಪ್ಪ ದಿದ್ದರೂ ಗಂಗವ್ವನ ಮನೆತನಕ ಹೋಗಿಯೂ ಕರೆದು ಬಂದಳು. ಗಾಣ ದೇವಿಯ ಪೂಜೆಯ ದಿವಸ ಎಲ್ಲರಿಗೂ ಊಟಕ್ಕೆ ಬರಲಿಕ್ಕೆ ಹೇಳಿದಳು. ಹಾಗೆಯೇ ಚಂದ್ರವ್ವನಿಗೂ ಸುಂದರವ್ವನಿಗೂ ಆದಿನ ಅಡಿಗೆ ಮಾಡಲಿಕ್ಕೆ ಬರಲಿಕ್ಕೆ ಆಗ್ರಹದಿಂದ ಹೇಳಿ ಬಂದಳು.

ಗಾಣದೇವಿಯ ಪೂಜೆ ವೈಭವದಿಂದ ಆಯಿತು. ಊರೊಳಗಿನ ಹಲವು ಜನರು ಊಟಕ್ಕೆ ಬಂದಿದ್ದರು ಇಂತಹ ತುಟ್ಟಿಯ ದಿನಗಳಲ್ಲಿಯೂ ಊಟದ ವ್ಯವಸ್ಥೆ ಚನ್ನಾಗಿಯೇ ಇತ್ತು. ಸಾಕಷ್ಟು ದೊಡ್ಡ ಪ್ರಮಾಣ ದಲ್ಲಿಯೂ ಇತ್ತು. ಜನ್ಮದಲ್ಲಿ ಒಮ್ಮೆ ಗಾಣ ಹೂಡುವವರು, ಯಾವುದಕ್ಕೂ ಮಿಜಿ ಮಿಜಿ ಬೇಡ, ಎಂದು ಬಾಬಣ್ಣನ ಹೇಳಿಕೆ. ತಾತಪ್ಪನೂ ಗಾಣ ದಲ್ಲಿಯೇ ಜನರು ತಿನ್ನುಣ್ಣುವವರು, ಸಾವಿರ ಜನರ ಕರುಳು ತಣಿಯುವುದೂ ಇಂಥ ಸಂದರ್ಭದಲ್ಲಿಯೇ ಎಂದು ಸಾರಿದ. ಪದ್ಮಾವತಿಯಂತೂ ತವರುಮನೆ ಯಲ್ಲಿ ಹಲವು ಸಲ ಗಾಣ ಮಾಡಿದ ಅನುಭವಿಕಳು ಆದರಿಂದ ಅವಳೂ ತುಸು ಮನಸ್ಸು ದೊಡ್ಡದು ಮಾಡಿದಳು. ಸೆಟ್ಟಿಯಂತೂ ಹತ್ತು ವ ಸಾಮಾನು ಗಳನ್ನೆಲ್ಲ ಉದ್ದರಿ ಕೊಡಲು ಸಿದ್ಧನಿದ್ದ. ವೆಚ್ಚ ಬಾಬಣ್ಣನದೆಂದ ಮೇಲೆ ಕೊಡಲಿಕ್ಕೆ ಅವನದೇನು ಗಂಟು ಖರ್ಚಾಗುವುದು ? ಇಂದಿಲ್ಲ ನಾಳೆ ಬಂದೇ ಬರುವದೆಂಬ ಭರವಸೆಯೂ ಇತ್ತು. ಅದಕ್ಕಂತಲೇ ಬೇಕಾದ ಹಾಗೆ ಹಿಂದು ಮುಂದಿನ ಎಣಿಕೆ ಹಾಕದೆ ಎಲ್ಲ ಜಿನಸುಗಳನ್ನು ಕೊಟ್ಟನು. ತರುವವರಿಗೂ ರೋಖ ರೊಕ್ಕ ಕೊಡುವ ಪ್ರಸಂಗವಿಲ್ಲದುದರಿಂದ ಜಡ ಹರಿಯಲಿಲ್ಲ. ಅಂದರೂ ಪದ್ಮಾವತಿಯು ಒಳಗೊಳಗೇ ಲೆಕ್ಕದಲ್ಲಿ ಇದ್ದಳು.

ಗಾಣ ಹೂಡುವ ಮುಂಚೆ ಊರಲ್ಲಿ ಕಬ್ಬಿನ ಲೂಟಿಯನ್ನು ಮಾಡಿ ಬರಲಿಕ್ಕೇಬೇಕು. ಗ್ರಾಮದೇವತೆ—ಪದ್ಮಾವತೀದೇವಿಗೆ—ಸಲ್ಲತಕ್ಕ ಮುಡಿಪದು. ಕ್ಷೇತ್ರಪಾಲಕಳ ಶಾಂತಿಯದು. ಅದಕ್ಕಾಗಿ ಒಂದು ಬಂಡಿಯಲ್ಲಿ ಗರಿಸಹಿತ ಕಬ್ಬುಗಳನ್ನು ತುಂಬಿಕೊಂಡು ಊರ ಕಡೆಗೆ ಸಾಗಿದರು. ಗಾಡಿಯ ಮುಂದೆ ಕೊಂಬು ಹಲಗೆಯವರನ್ನು ಬಾರಿಸಲಿಕ್ಕೆ ಕರೆದಿದ್ದರು. ಮುಂಜಾನೆ ಹತ್ತು ಗಂಟೆಗೆ ಅಗಸೆಯಲ್ಲಿ ಕಹಳೆ ಊದುವದನ್ನು ಕೇಳಿದೊಡನೆಯೇ ಸೆಟ್ಟರ ತೋಟದ ಕಬ್ಬಿನ ಲೂಟಿ ಬಂತೆಂದು ಹಳ್ಳಿಗರಿಗೆ ಅರ್ಥವಾಯಿತು. ಹಲವು ಹುಡುಗರು, ತರುಣರು, ಹಿರಿಯರು ಗುಂಪುಗೂಡಿದರು. ಬಂಡಿಯ ಬೆನ್ನು ಹತ್ತಿ ನಡೆದರು.

ಬಂಡಿಯ ಮೇಲೆ ಮುಂದೆ ಎತ್ತುಗಳನ್ನು ಹೊಡೆಯಲು ಬಾಬಣ್ಣ ಕುಳಿತಿದ್ದ. ಹಿಂದೆ ತಾತಪ್ಪ ಕಬ್ಬಿನ ಮೇಲೆ ಕುಳಿತಿದ್ದ. ಎತ್ತುಗಳನ್ನು ಝೂಲು ಗೆಜ್ಜೆಗಳಿಂದ ಸಿಂಗರಿಸಿದ್ದರು. ಅವೂ ಠೀವಿಯಿಂದ ನಡೆದಿದ್ದುವು. ಅವುಗಳ ಕೋಡುಗಳಲ್ಲಿ ಸೆಟ್ಟರ ಹೆಣ್ಣುಮಕ್ಕಳ ಕಾಲೊಳಗಿನ ಬೆಳ್ಳಿಯ ಸರಪಳಿ, ಪೈಜಣಗಳು ಒಪ್ಪುತ್ತಿದ್ದುವು. ಬಂಡಿಯನ್ನು ಬಾರಿಸುತ್ತ ಊದುತ್ತ ದೇವಿಯ ಗುಡಿಯ ಮುಂದೆ ತಂದು ನಿಲ್ಲಿಸಿದರು. ಅಷ್ಟರಲ್ಲಿ ಲೂಟಿಗಾಗಿ ನೂರಾರು ಜನರೂ ಸೇರಿದ್ದರು.

ತಾತಪ್ಪ ಬಂಡಿಯಿಂದ ಕೆಳಗಿಳಿದು ದೇವಿಯ ಬಾಗಿಲಿಗೆ ಐದು ಕಬ್ಬುಗಳನ್ನು ಕಟ್ಟಿ ಬಂದ. ಹಾಗೆಯೇ ಊರೊಳಗಿನ ಇನ್ನೊಂದು ಬಸ್ತಿಗೂ ಐದು ಕಬ್ಬುಗಳ ಕಟ್ಟನ್ನು ಸಲ್ಲಿಸಿದ

ಇಷ್ಟರಲ್ಲಿ ಊದುವವರು ಬಾರಿಸುವವರು ಉಟ್ಟ ದೋತರವನ್ನು ಚೆನ್ನಾಗಿ ಮೇಲಕ್ಕೆ ಕಟ್ಟಿಕೊಂಡು ಓಡಲಿಕ್ಕೆ ಸಿದ್ಧರಾಗಿದ್ದರು. ಬಾಬಣ್ಣ ಗಾಡಿಯ ಈಸುಗಳ ಮೇಲೆ ನಿಂತು, ಚಬುಕ ಮಡಚಿ ಹಿಡಿದಿದ್ದ. ನಿಂತಲ್ಲಿಯೇ ದೇವಿಯ ಗುಡಿಯ ಕಡೆಗೆ ನೋಡಿ ವಂದಿಸಿದ. ಭಕ್ತಿಯಿಂದ ಕಬ್ಬಿನ ಲೂಟಿಗೆ ಒಪ್ಪಿಗೆ ಕೇಳಿಕೊಂಡ. ಕೂಡಲೆ ಕೊಂಬು ಮೊಳಗಿತು. ಹಲಿಗೆ ಸಪ್ಪಳ ಮಾಡಿದುವು. ಎತ್ತುಗಳು ಮುನ್ ಸೂಚನೆಯನ್ನು ಅರಿತವರಂತೆ ತಾವಾಗಿಯೇ ಓಡಲಿಕ್ಕೆ ಆರಂಭಿಸಿದುವು, ತೋಟದ ಕಡೆಗೆ ಮುಖ ಮಾಡಿ. ಜನ ಕಬ್ಬುಗಳನ್ನು ಹಿರಿಯಲಿಕ್ಕೆ ಆರಂಭಿಸಿದರು. ಗದ್ದಲವೋ ಗದ್ದಲ.

ಬಂಡಿ ಓಡುತ್ತಲಿದೆ. ಹಿಂದೆ ಜನ ಕಬ್ಬಿನ ಗರಿ ಹಿಡಿದು ಎಳೆಯುವರು, ಕೈಗೆ ಬಂದಷ್ಟು ತಕ್ಕೊಂಡು ಹೋಗುವರು. ಹೀಗೆ ಅಗಸೆಗೆ ತಿರುಗಿ ಗಾಡಿ ಬರುವಷ್ಟರಲ್ಲಿ ತೆರವಾಯಿತು. ಕಬ್ಬಿನ ಲೂಟಿ ವೈಭವದಿಂದ ಸಾಗಿತು ಬಾಬಣ್ಣ ಅಭಿಮಾನದಿಂದ ಬಂಡಿ ಹೊಡೆದುಕೊಂಡು ತೋಟಕ್ಕೆ ಬಂದ. ಆ ದಿನವೇ ಸಾಯಂಕಾಲ ಗಾಣಕ್ಕೆ ಆರಂಭವಾಯಿತು.

ಗಾಣ ಒಂದು ವಾರದವರೆಗೂ ಸಾಗಿತು. ತೋಟದ ತುಂಬೆಲ್ಲ ಜಾತ್ರೆ ನೆರೆದಂತೆ ಜನ ತುಂಬಿರುವುದು. ಪದ್ಮಾವತಿಯು ಮದುಮಗನ ತಾಯಿಯಂತೆ ಕೆಲಸ ಮಾಡುವವರ ಮೇಲ್ವಿಚಾರಣೆ ಮಾಡುತ್ತ ಓಡಾಡುವಳು. ಅವಳಿಗೆ ಹೇಳತೀರದಷ್ಟು ಉತ್ಸಾಹ. ಗಾಣದ ಉಂಡೆಗಳನ್ನು ಕಟ್ಟಿದಳು. ಜನರಿಗೆಲ್ಲ ತಿನ್ನಲಿಕ್ಕೆ ಕೊಟ್ಟಳು. ಬಾಳವ್ವ ಗಂಡನ ಮನೆಗೆ ಹೋಗುವಾಗ ಕೊಡಲಿಕ್ಕೆಂದು ಒಂದು ದೊಡ್ಡ ಡಬ್ಬಿಯನ್ನೂ ತುಂಬಿ ಇಟ್ಟಳು. ಐದಾರು ಕೊಡ ಕಾಕಂಬಿ ತೆಗೆದಳು. ನಾಳೆ ತನಗೆ ಬೇಕಾದವರಿಗೆ ಕೊಡಲಿಕ್ಕೆ ಬರುವದೆಂದು ಬಗೆದಳು. ಕೆನೆಬೆಲ್ಲವನ್ನಂತೂ ಪ್ರತಿದಿನ ತೆಗೆದೇ ತೆಗೆದಳು. ಹೀಗೆ ಒಂದೇ ಸವನೆ ಗಾಣದಲ್ಲಿ ಹಗಲಿರುಳು ನಿದ್ರೆ ಇಲ್ಲದೆ ಓಡಾಡಿದುದರಿಂದ, ಒದರಾಡಿದುದರಿಂದ ಅವಳ ದನಿ ಕೂತಿತ್ತು; ಕಣ್ಣುಗಳು ಉರಿಯತೊಡಗಿದುವು. ಆದರೂ ಅವಳಿಗೆ ಅದಾವುದರ ಅರಿವೂ ಇಲ್ಲ. ಜನರು ರಸ ಕುಡಿದು ತಣಿದರಲ್ಲ. ನಮ್ಮ ಕೈಯಿಂದಲೂ ದಾನವಾಯಿತಲ್ಲ ಎಂಬ ಸಮಾಧಾನ ಅವಳ ಮುಖದ ಮೇಲೆ ನೆಲೆಸಿತ್ತು.

ಜನರು ದನಗಳಿಗೆ ತಿನ್ನಲು ಕಬ್ಬಿನ ಗರಿಯನ್ನು ಒಯ್ದು ಹಾಕಲು ಅವಳಿಗೂ ತನ್ನ ಎಮ್ಮೆಯು ನೆನಪಾಗುವುದು. ಅದು ಬದುಕಿದ್ದರೆ ತಾನೂ ಹೀಗೆಯೇ ಹಾಕಬಹುದಿತ್ತಲ್ಲ ಎಂದು ನೆನೆಯುವಳು. ಹಿಂದೊಮ್ಮೆ ಒಡ್ಡಿನ ಬದಿಗೆ ಮೇಯಲಿಕ್ಕೆ ಬಿಟ್ಟಾಗ ಕಬ್ಬಿನ ಗರಿಗೆ ಎಮ್ಮೆ ಬಾಯಿ ಹಾಕಲು ಅದರ ಮುಖದ ಮೇಲೆ ಹೊಡೆದ ಸಂದರ್ಭ ನೆನಪಾಗಿ ಹೊಟ್ಟೆಯಲ್ಲಿ ಕಳವಳವಾಗುವುದು, ಕಣ್ಣುಗಳು ತೇವಗೊಳ್ಳುವವು. ಹಾಗೆಯೇ ದುಃಖವನ್ನು ನುಂಗಿಕೊಂಡು ಕೆಲಸ ಮಾಡುವಳು.

"ಏನೇ ಆಗಲಿ, ತಾತಪ್ಪ ಒಮ್ಮೆ ಗಾಣ ಮಾಡಿಸಿ ಕಬ್ಬು ತಿನ್ನಿಸಿದ ಆಂ ?" ಎಂದು ಹಲವು ಸಲ ಅಪ್ಪಣ್ಣ ಗಂಗವ್ವನಿಗೆ ಹಿಗ್ಗಿ ಹಿಗ್ಗಿ ಹೇಳಿದ. ಆ ಉಬ್ಬಿನಲ್ಲಿ ಗಾಣದ ಎತ್ತುಗಳನ್ನು ಓಡಿಸದೆಯೂ ಇರಲಿಲ್ಲ ಆತ.

"ಮನುಷ್ಯ ಮಾಡಲಿಕ್ಕೆ ನಿಂತನೆಂದರೆ ಯಾವುದು ಅಸಾಧ್ಯ ಅದ ಅಪ್ಪಣ್ಣಾ?" ಸೆಟ್ಟಿ ಎಲೆ ಅಡಿಕೆ ತಿನ್ನುತ್ತ ಕಂಬಳಿಯ ಮೇಲೆ ಕುಳಿತಲ್ಲಿಂದಲೇ ಕೇಳುವನು. ಗಂಗವ್ವನ ಕಾರಭಾರವನ್ನು ಆತ ಅಲ್ಲಿ ಕುಳಿತುಕೊಂಡೇ ಏಳೂ ದಿವಸ ಕಂಡಿದ್ದ. ಗಾಣ ಆರಂಭವಾಗುವ ದಿನ ತೋಟಕ್ಕೆ ಬಂದ ಸೆಟ್ಟರು ಕೊನೆಯ ದಿನದವರೆಗೂ ತೋಟ ಬಿಟ್ಟು ಕದಲಲಿಲ್ಲ. ಪದ್ಮಾವತಿಯೂ ತನ್ನ ಮನೆಗೆ ಎಷ್ಟು ಕಾಕಂಬಿ, ಕೆನೆಬೆಲ್ಲ ತೆಗೆಯುವಳೋ ಅದರ ಎರಡಷ್ಟನ್ನು ಕುಳಿತಲ್ಲಿಂದಲೇ ತೆಗೆಯಿಸಿ ಮನೆಗೆ ಕಳಿಸುತ್ತಿದ್ದ. ನಗುನಗುತ್ತ ಎಲ್ಲರೊಳಗೂ ಕೂಡಿ ಗಾಣವನ್ನು ಮಾಡಿಸಿಕೊಂಡ. ತನ್ನ ಪಾಲು ದೊಡ್ಡದಾದುದರಿಂದ ಕೂಲಿ ಕೊಡುವ ಪ್ರಸಂಗ ಬಂದಾಗಲೆಲ್ಲ ಮುಂದೆ ನಿಂತು ತೂಗಿ ಕೊಡುತ್ತಿದ್ದ. ಇದರಿಂದ ಕೆಲಸದ ಆಳುಗಳಿಗೇ ಅಸಮಾಧಾನ ಹೊರತಾಗಿ ಬಾಬಣ್ಣನ ಮನೆಯವರಿಗಾರಿಗೂ ಅಸಂತುಷ್ಟಿಯಿಲ್ಲ. ಪದ್ಮಾವತಿಯಂತೂ ಯಾವುದಕ್ಕೂ ಸೆಟ್ಟರನ್ನೇ ಮುಂದೆ ಮಾಡುವಳು.

ಒಂದು ದಿನ ಸಾಯಂಕಾಲ ಸಾಲೆಯ ಎಲ್ಲ ಮಾಸ್ತರರೂ ರಸ ಕುಡಿಯಲು ಸೆಟ್ಟರ ತೋಟಕ್ಕೆ ಬಂದರು. ಸಂಗಡ ಹತ್ತೆಂಟು ನಿಂಬೆಯ ಹಣ್ಣುಗಳನ್ನೂ ತಂದಿದ್ದರು. ತಾತಪ್ಪ ಗಾಣದ ಬಾಯಿಗೆ ಒಳ್ಳೆಯ ಕಬ್ಬುಗಳನ್ನು ಕೊಟ್ಟು ಎರಡು ಬಿಂದಿಗೆ ತಾಜಾ ರಸವನ್ನು ಹಿಡಿದು ತಂದು ಎಲ್ಲರ ಮುಂದೆ ಇಟ್ಟ. ಪದ್ಮಾವತಿಯು ಗಂಡನನ್ನು ಗುಡಿಸಲಿನ ಕಡೆಗೆ ಕರೆದು ಒಂದು ಮೊರದಲ್ಲಿ ಹತ್ತಿಪ್ಪತ್ತು ಉಂಡಿಗಳನ್ನೂ ಒಂದು ತಾಟಿನಲ್ಲಿ ಅಳ್ಳಿಟ್ಟು ಕೆನೆಬೆಲ್ಲಗಳನ್ನೂ ಇಟ್ಟು ಮಾಸ್ತರರು ಕುಳಿತಲ್ಲಿ ಕಳಿಸಿದಳು. ಬಾಬಣ್ಣನ ದೋತರ ಸೆರಗು ಹಿಡಿದುಕೊಂಡೇ ಅವನ ನಡುವಿನ ಹುಡುಗ ಬೆನ್ನು ಹತ್ತಿದ್ದ. ಅವನಿಗೂ ಉಂಡಿ ಬೇಕಾಗಿತ್ತೇನೋ. ತಿನ್ನುವದಿಲ್ಲ, ಎಂಜಲ ಮಾಡಿ ಕೆಡಿಸುವನೆಂದು ಪದ್ಮಾವತಿ ಕೊಟ್ಟಿರಲಿಲ್ಲ. ಅದಕ್ಕಾಗಿ ಅಪ್ಪನ ಹಿಂದೆ ಸಾಗಿದ್ದನಾತ.

"ಹೀಗೆ ಮಾಡಿದರೆ ಮಾಸ್ತರರು ನಿನ್ನ ಸಾಲೆಗೆ ಒಯ್ಯುತಾರೆ ನೋಡು."

ಮಾಸ್ತರರು ಕುಳಿತ ಗಾಣದ ಬದಿಯಲ್ಲಿ ಹಾಕಿದ ಹಂದರವನ್ನು ಪ್ರವೇಶಿಸುತ್ತ ಬಾಬಣ್ಣ ಮಗನಿಗೆ ನುಡಿದ. ಮಾತಿನಲ್ಲಿ ಹುಡುಗನನ್ನು ಹೆದರಿಸುವ ಠೀವಿಯಿತ್ತು.

" ಏಕೆ, ಸಾಲೆಗೆ ಬರುವದಿಲ್ಲ ಅನ್ನುವನೇನು ? "

ಒಬ್ಬ ಮಾಸ್ತರರು ಕೇಳಿದರು.

" ಸಾಲೆ ಅಂದರೆ ಅಂಜುವವು ಅಲ್ಲರಿ ಹುಡುಗರು ! "

ಅಲ್ಲೇ ಕುಳಿತ ತಾತಪ್ಪ ನಗುತ್ತ ನುಡಿದ.

" ಅಂಜಲಿಕ್ಕೇನು, ನಾಳಿಗೆ ಬರತಾನ ನೋಡು ಸಾಲಿಗೆ. " ಹುಡುಗನ ಕಡೆಗೆ ಹೊರಳಿ " ಯಾಕಪ್ಪ ನಾಳಿಗೆ ಬರುವಿಯಿಲ್ಲ ಸಾಲೆಗೆ ? ನಿನಗೆ ಪಾಟಿ ಪೆನ್ಸಿಲ ಕೊಡತೇವಿ. " ಎಂದು ಆಕ್ಕರೆಯಿಂದ ನುಡಿದು ಒಬ್ಬ ಮಾಸ್ತರರು ಹತ್ತರ ಕರೆದುಕೊಳ್ಳಲಿಕ್ಕೆ ಹೋದರು.

ಹುಡುಗ ನಾಚಿ ಹಿಂದೆ ಸರಿದ.

" ನಿನಗ ಉಂಡಿ ಬೇಕೇನೋ ? ತಗೋ ! "

ಎಂದು ಆದಪ್ಪ ಮಾಸ್ತರು ಉಂಡಿಯ ಕೈಯನ್ನು ಮುಂದೆ ನೀಡಿದರು. ಹುಡುಗ ಹತ್ತರ ಬಂದು ತಕ್ಕೊಂಡ. ಆಗಲೇ ಅವನ ಕೈ ಹಿಡಿದು ಎಳೆದು ಹತ್ತರ ಕೂಡಿಸಿಕೊಂಡರು ಮಾಸ್ತರು. ಆ ಮೇಲೆ ಬಾಬಣ್ಣನಿಗೆ ಹೇಳಿದರು:

" ಆ ಹಿರಿಯ ಹುಡುಗನನ್ನ ಒಬ್ಬನ್ನ ಸಾಲೆಗೆ ಹಾಕಲಿಲ್ಲ, ಅದು ಇಲ್ಲೇ ಇಲ್ಲ. ಇವನನ್ನಾದರೂ ಹಾಕಿರಿ. ಹುಡುಗ ಹುಶ್ಯಾರ ಕಾಣತಾನ. "

" ನೋಡೋಣಲ್ಲರಿ ! ನಾವು ಮಾಡತೇವಂದರೆ ಏನು ಆಗ್ತದ ? ಎಲ್ಲಾ ದೇವರ ಕೂಡಿಸಿ ಕೊಡಬೇಕು. ಅವನು ದೈವದೊಳಗೆ ಬೇಡಿ ಬಂದಿರಬೇಕು." ಬಾಬಣ್ಣ ಹೇಳಿದ.

" ದೈವ ಗಿಯ್ವ ಈಗ ಎಲ್ಲಾ ಹೋಗೇದ ಬಾಬೂ. "

ಇನ್ನೊಬ್ಬ ಮಾಸ್ತರರು ನುಡಿದರು.

" ಸಾಲಿ ಸಮುದ ನಮ್ಮಂಥವರಿಗೆ ಏನ ಮಾಡೋದರಿ ? ನೆರಳೊಳಗ ಕುಳಿತು ಹುಡುಗರು ಬೆಂಡಿನಂತೆ ಆಗತಾವು. ನಾಳೆ ನೆಟ್ಟಗ ಒಕ್ಕಲತನಕ್ಕೂ ಬರುವದಿಲ್ಲ ಅವರು. "

ಬೆಲ್ಲ ಅಡಲಿಕ್ಕೆ ಬಂದ ಒಬ್ಬನು ಕುದಿಯುತ್ತಿರುವ ರಸದ ಕಾಯಿಲೆ ಯೊಳಗಿನ ಮಳ್ಳಿಯನ್ನು ತೆಗೆಯುತ್ತ ನುಡಿದ. ಹೊರಗೆ ಕೊರ್‍ರ್ರಿಂದು ಗಾಣ ಒದರುತ್ತ ಇದ್ದಿತು. ಒಲೆಯಲ್ಲಿ ಉರುವಲ ಒಗೆಯುತ್ತ ಕೆಳಗೆ ನಿಂತ ಹೊಲೆಯ ನುಡಿದ,—

" ಕಲಿಯೋದೆಲ್ಲ ಬ್ರಾಂಬ್ರ ಹುಡುಗರಿಗೇ. ನಮ್ಮ ಹುಡಗ್ರ ಕಲಿತರ ಮತ್ತ ಅಡ್ಡ ಹಾದಿ ಹಿಡಿತಾವ ಗೌಡಾ. ನೋಡ ನಮ್ಮ ಬಸ್ಯಾನ ಮಗ ಕಲತಾನ, ಈಗ ಆಯಗಾರಿಕೆಗೆ ಹೋಗಬೇಕಾದ್ರ ನಾಚತಾನ. ಇಂಥವರನ್ನ ತಗೊಂಡ ಏನ ಮಾಡೋದು ? "

" ಅದೇನೂ ಕೇಳುವಂತಿಲ್ಲ. ಈ ಹುಡುಗನನ್ನ ಸಾಲೆಗೆ ಕಳಿಸಲಿಕ್ಕೇ ಬೇಕು. "

ರಸವನ್ನು ಕುಡಿಯುತ್ತ ಆದಪ್ಪ ಮಾಸ್ತರರು ಹೇಳಿಬಿಟ್ಟರು.

" ಈಗಲೇ ಬೇಕಾದರೆ ನಿಮ್ಮ ಮನೆಗೇ ಕರೆದುಕೊಂಡು ಹೋಗಿರಿ ! ಸಾಲೆ ಕಲಸರಿ. ಇಲ್ಲಾದರ ದನ ಕಾಯಲಿಕ್ಕೆ ಹಚ್ಚರಿ. "

ಹೊರಗೆ ಇದ್ದ ಪದ್ಮಾವತಿ ನುಡಿದಳು. ಗಾಣದಲ್ಲಿ ಕೆಲಸ ಮಾಡುವ ಗಂಡಸರಿಗೆ ಬುತ್ತಿಕೊಡಲು ಬಂದ ಹೆಂಗಸರಿಗೆ ಬುತ್ತಿಗಬ್ಬುವೆಂದು ಎರಡೆರಡು ಕಬ್ಬುಗಳನ್ನು ಕೊಡಲಿಕ್ಕೆ ಅಲ್ಲಿ ಬಂದಿದ್ದಳಾಕೆ.

" ಯಾಕಪ್ಪ, ಬರುವಿ ಏನು ನಮ್ಮ ಮನೆಗೆ ? "

ಮಾಸ್ತರರು ಅಕ್ಕರೆಯಿಂದ ಹುಡುಗನ ಬೆನ್ನ ಮೇಲೆ ಕೈಯಾಡಿಸುತ್ತ ಕೇಳಿದರು. ಹುಡುಗ ಅದಕ್ಕೇನೂ ಹೇಳಲಿಲ್ಲ. ಸಂಕೋಚದಿಂದ ತಲೆ ತಗ್ಗಿಸಿದ.

ಹೀಗೆ ವಿನೋದದಲ್ಲಿ ಕಾಲ ಕಳೆಯುತ್ತ ನಾಲ್ವರೂ ಮಾಸ್ತರರು ಕೂಡಿ ಎರಡು ಬಿಂದಿಗೆ ರಸವನ್ನು ಕುಡಿದರು. ಅದರಲ್ಲಿ ಸೆಟ್ಟರೂ ಒಬ್ಬರು ಪಾಲುಗಾರರಾಗಿದ್ದರು. ತಾತಪ್ಪ ಮತ್ತೆ ರಸವನ್ನು ಹಿಡಿದು ತರುವ ಇಚ್ಛೆಯನ್ನು ಪ್ರದರ್ಶಿಸಿದ. ಆದರೆ ಯಾರೂ ಇನ್ನು ಕುಡಿಯಲು ಒಪ್ಪಲಿಲ್ಲ.

ಗಾಣವೆಲ್ಲ ಒಳ್ಳೆಯ ರೀತಿಯಿಂದ ಸಾಗಿದರೂ ಬಾಬಣ್ಣ ಬಯಸಿದಷ್ಟು ಬೆಲ್ಲ ಹೊರಡಲಿಲ್ಲ. ಒಂದು ತಿಂಗಳ ಮುಂಚಿತ ಗಾಣ ಹೂಡಬೇಕಾದುದರಿಂದ ಕಾಯಿಲಿಗೆ ಮೂರೇ ಮುದ್ದೆ ಬೆಲ್ಲ ಇಳಿದವು. ಸೆಟ್ಟರೂ ನಾಲ್ಕು ಮುದ್ದೆ ಇಳಿಯಬಹುದೆಂದು ನಿರೀಕ್ಷಿಸಿದ್ದರು. ಅವರ ಅನುಮಾನವೂ ತಪ್ಪಾಯಿತು. ಆದರಿಂದ ಕೊನೆಕೊನೆಯ ದಿನಗಳಲ್ಲಿ ಅವರು ಸ್ವಲ್ಪ ನಿರುತ್ಸಾಹಿಯೇ ಆದರು. ಗಾಣದಲ್ಲಿ ಆಗುವ ಈ ಲೆಕ್ಕ ಮೀರಿದ ವೆಚ್ಚಕ್ಕೂ ಅವರ ಮನಸ್ಸು ಬೇಸರಪಟ್ಟಿತ್ತು. ಮನದಲ್ಲಿಯೇ, 'ಲೆಕ್ಕವರಿಯದ ಒಕ್ಕ

ಲಿಗರಿಗೇ ಇದೆಲ್ಲ ಸಲ್ಲುವುದು. ದುಡ್ಡಿನ ಬೆಲ್ಲ ಬೇಡಿದರೂ ಗಿರಾಕಿಗೆ ಕೊಡಲು ಕೈಯಲ್ಲಿ ತಕ್ಕಡಿ ಹಿಡಿಯುವಂಥ ನಮಗೆ ಇದು ಒಪ್ಪುವಂಥದಲ್ಲ' ಎಂದು ಕೊಂಡರು. ಅದಕ್ಕೆಂತಲೇ ಅವರು ಎರಡು ಮೂರು ಸಲ ಹೀಗೆ ಅಂದುದು:

"ಗಾಣದೊಳಗೆ ಮನೆಯವರಿಗೆ ಏನು ಉಳಿಯತದ ಸೊಪ್ಪಿ ?"

"ಸೊಪ್ಪಿನೂ ಒಲೆಯಲ್ಲಿ ಸುಟ್ಟ ಹೋಗತಾವು ಸೆಟ್ಟರೆ !"

ಒಬ್ಬ ಒಕ್ಕಲಿಗ ಸೆಟ್ಟರ ಕಳವಳವನ್ನು ನೋಡಿ ನಕ್ಕು ನುಡಿಯುವ ಆದರೂ ಬಾಬಣ್ಣಾ ಸಮಾಧಾನ ಹೇಳುವ :

"ಗಾಣದೊಳಗೆ ಜನ ತಿಂದಷ್ಟ ಉಂಡಷ್ಟೇ ಬಂತು. ನಡುವೆ ನಮ್ಮ ಕೈಯಿಂದೇನು ಕೊಡಲಿಕ್ಕೆ ಆಗತದ? ಯಾರೂ ಮುಸುರೆ ಕೈಯಿಂದ ಕಾಗೆ ಹೊಡೆಯುವದಿಲ್ಲ; ಬೆಲ್ಲ ತಿನಲಿಕ್ಕೆ ಕೊಡುವ ಮಾತಂತೂ ಒತ್ತಟ್ಟಿಗಿರಲಿ. ಇದರೊಳಗೇ ಏನು ಪುಣ್ಯ ಬಂದಷ್ಟು ಬರಲಿ."

ಬಾಬಣ್ಣನ ಮಾತಿನಂತೆಯೇ ಅವನ ಮನೆಯವರೆಲ್ಲರ ಭಾವವಿದ್ದಿತು. ಆದಕ್ಕೆ ತಕ್ಕ ವರ್ತನ ಅವರದು. ಅದು ಸ್ವಾಭಾವಿಕವೂ ಇದ್ದಿತು. ಆದರೆ ಸೆಟ್ಟರಿಗಿದು ಸೇರದು. ಸೂ—ಮಕ್ಕಳು ಯಾರದನ್ನೋ ಒಯ್ದು ಯಾರಿಗೋ ದಾನ ಮಾಡುವರಾಯಿತು. ಇವರದೇನು ಹೋಗುವುದು ? ಲೆಕ್ಕ ಇಲ್ಲ, ಪಕ್ಕ ಇಲ್ಲ. ನಾಳೆ ಲೆಕ್ಕಕ್ಕ ಹತ್ತಲಿ ಅಂದರೆ ತೋಟ ಬಿಟ್ಟ ಬತ್ತಲೆ ಹೋಗ ಬೇಕಾಗತದ ಇವರು ಎಂದುಕೊಳ್ಳುವರು. ಆದರಂತೆ ಬಿಗುವಿನಿಂದಲೇ ನೆಡೆದುಕೊಳ್ಳುವರು.

ಸೆಟ್ಟರೆಷ್ಟು ಬಿಗುವಿನಿಂದ ವರ್ತಿಸಿದರೂ ನಡೆಯುವದೆಲ್ಲ ಕ್ರಮಬದ್ಧ ನಡೆಯಲೇ ಬೇಕಲ್ಲವೆ? ಕೊನೆಯ ದಿವಸ ಬಂಡಿಯಲ್ಲಿ ಎರಡು ಹೊರೆ ಕಬ್ಬು, ನಾಲ್ಕಾರು ಕೊಡ ಕಬ್ಬಿನ ಹಾಲನ್ನು ಇಟ್ಟುಕೊಂಡು ಊರಲ್ಲಿ ಹೋದರು. ಗಾಣಕ್ಕೆ ಬರಲಿಕ್ಕೆ ಆಗದವರಿಗೆ—ತಮಗೆ ಬೇಕಾದವರಿಗೆ— ಒಂದೊಂದು ತಂಬಿಗೆ ಹಾಲು, ಎರಡೆರಡು ಕಬ್ಬುಗಳನ್ನು ಮನೆಗೆ ಒಯ್ದು ಕೊಟ್ಟರು. ಕಲ್ಲಪ್ಪಕಕ್ಕನ ಮನೆಗೂ ಐದು ಕಬ್ಬುಗಳೂ ರಸವೂ ಹೋಯಿತು. ಅವನೂ ಬಾರದೆ ನಿಂತವರಲ್ಲಿ ಒಬ್ಬ. ಗೌಡನ ಮನೆಗಂತೂ ಈ ಮೊದಲೇ ರಸದ ಕೊಡ, ಕಬ್ಬಿನ ಹೊರೆ ಸಾಗಿದ್ದಿತು. ಅದರಂತೆ ಊರೊಳಗೆ ಸೆಟ್ಟರಿಗೆ ಬೇಕಾದವರ ಮನೆಗೂ ರಸ, ಕಬ್ಬುಗಳನ್ನು ಮುಟ್ಟಿಸಲಾಯಿತು.

ಗಾಣ ಮುಗಿದ ಮೇಲೆ ಎಲ್ಲ ಬೆಲ್ಲವನ್ನೂ ಬಂಡಿಯಲ್ಲಿ ಹೇರಿಕೊಂಡು ಸೆಟ್ಟರು ತಮ್ಮ ಮನೆಗೆ ಒಯ್ದರು. ಬಾಬಣ್ಣನಾದರೂ ಇಲ್ಲಿ ಗುಡಿಸಲಿನಲ್ಲಿ ಇಟ್ಟುಕೊಂಡು ಏನು ಮಾಡುವುದು? ಲೆಕ್ಕಾಚಾರದಂತೆ ಎಲ್ಲ ಕೊಡುವರೆಂದು ತಿಳಿದು ಸುಮ್ಮನೆ ಬಿಟ್ಟ. ಮುಂದೆ ಗಾಣದ ನಿದ್ದೆ, ಉಳಿದ ಕೆಲಸಗಳಿಂದು ಒಂದೆರಡು ವಾರಗಳು ಕಳೆದುವು. ಬಾಳವ್ವ ಗಂಡನ ಮನೆಗೆ ಹೊರಟು ಸಿದ್ಧವಾಗಿ ನಿಂತಳು. ಅವಳಿಗೆ ಸೀರೆ ತರಬೇಕಾಯಿತು. ಅದಕ್ಕಾಗಿ ಸೆಟ್ಟರ ಹತ್ತರ ಹೋದರು. ಅವರು ಆಗ ಬೆಲ್ಲದ ಲೆಕ್ಕ ಮಾಡುವ ಗೊಡವೆಗೆ ಹೋಗಲಿಲ್ಲ. ತಮ್ಮ ಅರಿವೆಯ ಅಂಗಡಿಯಿಂದ ಸೀರೆಯೊಂದನ್ನು ತೆಗೆಯಿಸಿ ಕೊಟ್ಟರು. ಮತ್ತೂ ಒಂದು ವಾರ ಉರುಳಿತು. ಹೊಟೇಲಿನ ಮಾಲಕರು ಹಣದ ತಗಾದೆ ಹಚ್ಚಿದರು. ಆದಪ್ಪ ಮಾಸ್ತರರೂ ಸಹಜವಾಗಿ ಹೇಳಿ ಕಳಿಸಿದರು. ಇನ್ನು ಬಾಬಣ್ಣ ಸುಮ್ಮನೆ ಕೂಡುವಂತಿರಲಿಲ್ಲ. ಎಲ್ಲರಿಗೂ ಗಾಣದ ನೆವ ಹೇಳುತ್ತ ಹಣ ಕೊಡುವದನ್ನು ಮುಂದೂಡಿದ್ದ. ಈಗ ಏನೂ ಹೇಳಲಿಕ್ಕೆ ಬರುವಂತಿರಲಿಲ್ಲ. ಅಲ್ಲದೆ ಸೆಟ್ಟರ ಲೆಕ್ಕದಲ್ಲಿ ಬಂದ ಹಣದಿಂದಲೇ ತನ್ನ ಹೊಟೇಲಿನ ಬಾಕಿ ತೀರಿಸಿ, ಆಮೇಲೆ ಮನೆಯಲ್ಲಿ ಉಳಿದ ಹಣದ ಲೆಕ್ಕ ಕೊಡಬೇಕೆಂದು ಅವನ ವಿಚಾರ. ಅದಕ್ಕಾಗಿಯೇ ಸೆಟ್ಟರ ಹತ್ತರ ಹೋಗಿ ಲೆಕ್ಕಕ್ಕೆ ಅವಸರ ಮಾಡಹತ್ತಿದ.

ಬಾಬಣ್ಣನ ಅವಸರವನ್ನು ಕಂಡು ಸೆಟ್ಟರು ನಿದಾನವಾಗಿ ಯೋಚಿಸಿ ಹೇಳಿದರು:

" ನಿಮ್ಮ ಮಾವನನ್ನು ಕರಕೊಂಡು ಬಾ. ಹಿಂದಿನ ಎತ್ತಿನ ಹಣ, ಅಂಗಡಿ ಬಾಕಿ ಎಷ್ಟೆಷ್ಟ ಆಗತದ ನೋಡಬೇಕು. "

" ಇನ್ನೂ ಮೆಣಸಿನ ಕಾಯಿ ಅವ. ಆಗ ಎಲ್ಲ ನೋಡಿದರೆ ಬಂದೀತು. ಈಗ ಸಧ್ಯಕ್ಕ ಖರ್ಚಿಗೆ ಒಂದು ನೂರ ರೂಪಾಯಿ ಕೊಟ್ಟುಬಿಡಿರಿ, ಸಾಕು" ಎಂದು ಬಾಬಣ್ಣ ಸವಲತ್ತು ತೋರಿಸಿದ. ಆದರೂ ಸೆಟ್ಟರು ಹಣ ಕೈಯಿಂದ ಕೊಡಲಿಕ್ಕೆ ಹಿಂದೆ ಮುಂದೆ ನೋಡಹತ್ತಿದರು. ಕೊನೆಗೂ ಕೇಳಿದರು:

" ನಿನ್ನ ಪಾಲಿನ ಬೆಲ್ಲ ಎಲ್ಲಿ ಮಾರುವವ ? "

"ಎಲ್ಲೇನು. ಪೇಟೆಯ ಧಾರಣೆಯಂತೆ ನೀವೇ ತಕ್ಕೊಳ್ಳಿರಲ್ಲ." ಎಂದೂ ಹೇಳಿದ ಬಾಬಣ್ಣ. ಆದರೂ ಸೆಟ್ಟರು ಕೈ ಸಡಿಲು ಬಿಡಲಿಲ್ಲ. ಈಗ ಕೈ

ಎತ್ತಿ ಕೊಟ್ಟರೆ ಹೋಗುವದೆಂದು ಅವರು ಭಾವಿಸಿದರು. ಎತ್ತಿನ ರೂಪಾಯಿಗಳು ಅದರ ಬಡ್ಡಿ, ಅಂಗಡಿಯ ಬಾಕಿ ಎಲ್ಲ ಕಳೆದು ಏನು ಉಳಿದದ್ದು ಒಯ್ಯಲಿ; ಹಿಂದಿನಿಂದ ಈ ಒಕ್ಕಲಿಗರ ಬೆನ್ನು ಹತ್ತಿ ಎಲ್ಲಿ ತಿರುಗುವುದು, ಎಂದು ಯೋಚಿಸಿದರು. ಆದರೂ ಈಗ ಏರಿದ ದರದಲ್ಲಿ ಬೆಲ್ಲದ ಲೆಕ್ಕ ಹಿಡಿಯಲು ಅವರ ಮನಸ್ಸು ಒಪ್ಪದು. ಇನ್ನೂ ಗಾಣಗಳು ಆಗಲಿ, ಸುತ್ತಲಿನ ಪೇಟೆಗೆ ಹೊಸ ಬೆಲ್ಲ ಬರಲಿ, ಆಗ ಧಾರಣೆ ಒಂದು ನಿಜಕ್ಕೆ ಬರುವದು, ಇಳಿದೇ ಇಳಿಯುವುದು; ಅಂದಿನ ದರದಿಂದ ಲೆಕ್ಕ ಮಾಡಿದರಾಯಿತು, ಎಂದುಕೊಂಡು ಹೇಳಿದರು,—

" ಈಗೇನು ಅಷ್ಟು ರೂಪಾಯಿ ಸಿಗುವದಿಲ್ಲ ನಿನಗ. ಬೇಕಾದರೆ ಸಧ್ಯಕ್ಕೆ ಇಪ್ಪತ್ತೈದ ರೂಪಾಯಿ ಒಯ್ಯು. "

ಅಷ್ಟೇ ಹಣ ತಂದರೆ ಬಾಬಣ್ಣನ ಸಾಲ ತೀರುವಂತಿಗಲಿಲ್ಲ. ಆದಪ್ಪ ಮಾಸ್ತರರಿಗೇ ಆತ ಮೂವತ್ತು ರೂಪಾಯಿ ಕೊಡಬೇಕಾಗಿತ್ತು. ಅಲ್ಲದೆ ಹೊಟೆಲಿನ ಬಿಲ್ಲೊಂದು ಕುಳಿತಿದ್ದಿತು.

" ಅಷ್ಟರಿಂದ ಏನಾಗೋದು ? ಮುಗಿಲಿಗೆ ತೂತ ಬಿದ್ದಾಗ ಕೈ ಹಚ್ಚಿ ಹೋದರಂತ. " ಎಂದು ಬಾಬಣ್ಣ ತುಸು ಬೇಸರದಿಂದ ನುಡಿದ.

" ನೋಡಪ್ಪ, ನನಗ ಸರಿ ಕಂಡಷ್ಟು ಕೊಡತೇನಂತ ಹೇಳಿದೆ. "

ಎಂದು ನುಡಿದು ಸೆಟ್ಟರೂ ಸುಮ್ಮನಾದರು. ಬಾಬಣ್ಣ ತಿರುಗಿ ತೋಟಕ್ಕೆ ಬಂದ. ಹೊಟೆಲಿನ ಕಡೆಗೆ ಚಹ ಕುಡಿಯಲಿಕ್ಕೂ ಹೋಗಲಿಲ್ಲ ಹೋದರೆ ಹಿಂದಿನ ಬಾಕಿ ಕೇಳುವನೆಂಬ ಹೆದರಿಕೆ ಇತ್ತು. ಮಾಸ್ತರರ ಮನೆಯ ಕಡೆಗೂ ಹಾಯಲಿಲ್ಲ. ಆದರೂ ಮತ್ತೆ ನಾಲ್ಕಾರು ದಿನಗಳಲ್ಲಿ ಬರುವೆನೆಂದು ಸೆಟ್ಟರಿಗೆ ಹೇಳಿದ. ಯಾವಾಗ ಹೋದರೂ ಸೆಟ್ಟರು ತಮ್ಮ ಲೆಕ್ಕ ಬಿಟ್ಟು ಹಿಂದೆ ಸರಿಯಲಿಲ್ಲ. ಮನೆಯಲ್ಲಿ ಪದ್ಮಾವತಿಗೂ ತಾತಪ್ಪನಿಗೂ ಇದರ ಚಿಂತೆ ಇರಲಿಲ್ಲ. ಇಂದಿಲ್ಲ ನಾಳೆ ಮಾಡಿದರಾಯಿತು, ಎಷ್ಟು ಮುದ್ದೆ ಬೆಲ್ಲ ಆಗಿದೆ ಎಂಬುದು ಊರಿಗೇ ಗೊತ್ತಿದೆ. ನಮ್ಮ ಪಾಲಿನದು ನಮಗೆ ಬಂದೇ ಬರುತ್ತದೆ. ಈಗೇನು ಅವಸರ? ಸಾವಕಾಶ ಬೇಸಿಗೆಯಲ್ಲಿ ಲೆಕ್ಕ ಮಾಡಿಕೊಂಡರಾಯಿತು. ಇನ್ನೂ ಮೆಣಸಿನಕಾಯಿ ಅವೆ. ಈಗಲೇ ಹಣದ ತಗಾದೆ ಹಚ್ಚಿದರೆ ಸೆಟ್ಟರು ಮುಂದಿನ ವರ್ಷ ತೋಟವನ್ನು ತಮಗೆ ಕೊಡ

ಲಿಕ್ಕಿಲ್ಲ ಎಂಬ ಹೆದರಿಕೆ ಪದ್ಮಾವತಿಗೆ ಇತ್ತು. ಅವಳು ಮುಂದಿನ ವರ್ಷ ಕಬ್ಬು ಎಲ್ಲಿ ಹಚ್ಚಬೇಕು, ಗೆಣಸು ಎಲ್ಲಿ ನೆಡಬೇಕು. ಎಂಬುದನ್ನು ಲೆಕ್ಕ ಹಾಕುತ್ತಿದ್ದಳು. ಹಣದ ಲೆಕ್ಕ ಅವಳ ಕನಸು ಮನಸಿನಲ್ಲಿಯೂ ಇರಲಿಲ್ಲ.

ಇಂಥ ಸಂದರ್ಭದಲ್ಲಿ ಒಂದು ಘಟನೆ ಸಂಭವಿಸಿತು. ಊರೊಳಗಿಂದ ಬರುವಾಗ ತಾತಪ್ಪ ಒಂದು ಸುದ್ದಿಯನ್ನು ತಂದ. ಸರಕಾರದವರು ಸಾಲದಲ್ಲಿ ರೈತರು ಕಳಕೊಂಡ ಹೊಲಗಳನ್ನೆಲ್ಲ ತಿರುಗಿ ಕೊಡಿಸಬೇಕೆಂದು ಮಾಡಿದ್ದಾರೆ, ಒಕ್ಕಲಿಗರ ಋಣಪರಿಹಾರ ಕಾಯಿದೆಯದು, ಅದಕ್ಕಾಗಿ ಹೊಲಗಳನ್ನು ಸಾಲದಲ್ಲಿ ಮಾರಿದವರೆಲ್ಲ ಅರ್ಜಿ ಮಾಡಬೇಕಾಗುವುದು, ಊರಲ್ಲಿ ಹಲವರು ಮಾಡುತ್ತಲಿದ್ದಾರೆ, ಎಂಬುದೇ ಆ ಸುದ್ದಿ. ಇದನ್ನು ಕೇಳಿ ಬಾಬಣ್ಣ ಉಬ್ಬಿದ. ತನ್ನ ಮೂರು ಕೂರಿಗೆ ಅಡವಿಯೆಲ್ಲ ಸಾಲದಲ್ಲಿಯೇ ಹೋಗಿದೆ. ಸರಕಾರ ಬಿಡಿಸಿ ಕೊಟ್ಟರೆ ಒಳ್ಳೆಯದೆ ಆಯಿತು. ಮರುದಿನವೇ ತಾನೂ ಅರ್ಜಿಯನ್ನು ಹಾಕಬೇಕೆಂದು ಯೋಚಿಸಿದ. ಅದರಂತೆ ಮಾವನಿಗೂ ತಿಳಿಸಿದ.

ಅಳಿಯನ ಹೊಲಗಳನ್ನು ತಿರುಗಿ ಸಂಪಾದಿಸಿ ಕೊಡುವ ಹಂಬಲ ತಾತಪ್ಪನಿಗೂ ಇತ್ತು. ಅರ್ಜಿಗೆ ಬೇಕಾಗುವ ಮಾಹಿತಿಯನ್ನೆಲ್ಲ ತಾನು ಕೂಡಿಸುವೆನೆಂದಾಗಿ ಹೇಳಿದ. ಮನೆಯೊಳಗಿನ ಕಾಗದ ಪತ್ರಗಳನ್ನೂ ಹುಡುಕಿ ತೆಗೆದ. ಕಲ್ಲಪ್ಪ ಮೊದಲು ಬಾಬಣ್ಣನ ಕಡೆಯಿಂದ ಹೊಲದ ತೋರವತ್ತಿಯ ಕಾಗದ ಮಾಡಿಸಿಕೊಂಡುದು, ಸೆಟ್ಟರು ಸಾಲಕ್ಕಾಗಿ ಮಾಡಿಸಿಕೊಂಡ ಕಾಗದಗಳೆಲ್ಲವೂ ದೊರೆತವು. ಕೊನೆಯ ಹೊಲದ ಖರೀದಿ ಪತ್ರದಲ್ಲಿಯಂತೂ ಗೌಡರ ಅಂಗಡಿಯ ಬಾಕಿ ತೀರಿಸಲಿಕ್ಕಾಗಿ ಹಣಬೇಕಾಗಿದೆ ಎಂಬುದನ್ನು ಉಲ್ಲೇಖ ಮಾಡಿದೆ ಎಂದು ಬಾಬಣ್ಣ ಹೇಳಿಯೇ ಇದ್ದ. ಅಂದ ಮೇಲೆ ತಾತಪ್ಪನ ಹುರುಪು ಕೇಳುವದೇನು? ಒಂದು ದಿನ ತಾಲೂಕಿನ ಮುಖ್ಯ ಸ್ಥಳಕ್ಕೆ ಹೋಗಿ ವಕೀಲರಿಗೆ ಭೆಟ್ಟಿಯಾಗಿ ಎಲ್ಲ ಕಾಗದ ಪತ್ರ ತೋರಿಸಿ, ಸಲಹೆ ಕೇಳಿಕೊಂಡು ಬಂದ. ಇನ್ನು ಅರ್ಜಿಕೊಡುವ ಕೆಲಸ ಒಂದೇ ಉಳಿಯಿತು.

ಆಗ ಪದ್ಮಾವತಿಯು ನಡುವೆ ಬಾಯಿ ಹಾಕದೆ ಸುಮ್ಮನಿರಲಿಲ್ಲ.

" ಹೊಲವನ್ನೇನೋ ಸರಕಾರ ತಿರುಗಿ ಕೊಡಿಸುವದೆಂದರೆ ಪುಕ್ಕಟೆ ಏನು ಕೊಡಿಸುವದಿಲ್ಲವಲ್ಲ! " ಎಂದು ಮೆಲ್ಲನೆ ಸಾಯಂಕಾಲ ಎಲ್ಲರೂ ಕುಳಿತಾಗ ಮಾತು ತೆಗೆದಳು.

" ಹಾಗೇ ಹೇಗೆ ಕೊಡಿಸಿಯಾರು ? ಅವರ ಕೊಟ್ಟ ಗಂಟ ನಾವು ಕೊಡಲಿಕ್ಕೆ ಬೇಕಲ್ಲ. " ತಾತಪ್ಪ ವಿವರಿಸಿದ.

" ಅದನ್ನು ಕೊಡಲಿಕ್ಕೆ ನಮ್ಮಲ್ಲಿ ದುಡ್ಡ ಎಲ್ಲಿ ಅವ ? " ಪದ್ಮಾವತಿಯ ಪ್ರಶ್ನೆಯಿದು.

ತಾತಪ್ಪ ಸುಮ್ಮನಾದ. ಉತ್ಸಾಹದಿಂದ ಮುಂದೆ ಬಂದವನಿಗೆ ಒಮ್ಮೆಲೇ ಎದೆ ಹಿಡಿದು ಹಿಂದೆ ನುಗಿಸಿದಂತಾಯಿತು. ಹೆಂಡತಿಯ ಮಾತಿಗೆ ಬಾಬಣ್ಣನೇ ಉತ್ತರ ಹೇಳಿದ,—

" ನಮ್ಮ ಹೊಲಗಳೆಲ್ಲ ಒಂಬತ್ತುನೂರು, ಸಾವಿರಕ್ಕ ಕೂರಿಗೆಯಂತೆ ಮಾರಾಟ ಆಗಿವೆ. ಈಗ ಹದಿನೇಳ ನೂರು, ಎರಡ ಸಾವಿರಕ್ಕ ಕೂರಿಗೆ ಅಡವಿ ಮಾರಾಟ ಆಗುವವು. ತಿಳಿತು ? "

" ಆಗ ಅಡವಿಗಳ ಧಾರಣಿ ಅಗ್ಗ ಇತ್ತು. "

ಎಂದಳು ಪದ್ಮಾವತಿ. ಪತಿಯ ಮಾತಿನಿಂದ ಅವಳ ಸಮಸ್ಯೆ ಬಿಟ್ಟಂತಾಗಲಿಲ್ಲ. ಇದು ಬಾಬಣ್ಣನಿಗೂ ಹೊಳೆಯಿತು. ಅಂತಲೇ ಸ್ವಲ್ಪ ವಿಚಾರಿಸಿ ನುಡಿದ,—

" ಈಗ ಒಂದ ಕೂರಿಗೆ ಹೊಲ ಕೊಟ್ಟೆವೆಂದರೆ ಆ ಮೂರೂ ಕೂರಿಗೆ ಹೊಲ ತಿರುಗಿ ಸಿಗತದ. "

" ನಮ್ಮ ಹೊಟ್ಟೆ ತುಂಬಿ ಕೊಳ್ಳುವುದು ನಮಗೆ ಇಂಥ ದಿನದೊಳಗ ಕಠಿಣ ಆಗಿದೆ. ಕಲ್ಲಿಗೆ ಹತ್ತಿ ಬೆಲ್ಲ ಹೋದಂತೆ ಅದೂ ಒಂದ ಕೂರಿಗೆ ಹೊಲ ಹೋದೀತು ನೋಡಿರಿ. " ಎಚ್ಚರವಿತ್ತಳು ಪದ್ಮಾವತಿ.

ತಾತಪ್ಪ ಸುಮ್ಮನೆ ಕುಳಿತಿದ್ದ. ಬಾಬಣ್ಣನ ವಿಚಾರ ಅವನಿಗೆ ಸೇರಲಿಲ್ಲ. ಇದ್ದ ಹೊಲವನ್ನು ಕೊಟ್ಟು, ಕೊಟ್ಟ ಹೊಲವನ್ನು ಗಳಿಸುವುದು ಎಲ್ಲಿಯ ನ್ಯಾಯ, ಎಂದುಕೊಂಡ. ಮಳೆಯ ನೀರನ್ನು ಬಿಟ್ಟು ಮಂಜಿನ ನೀರಿಗೆ ಕೈಯೊಡ್ಡಿದಂತೆಯೇ ಈ ಕೆಲಸ ಎಂದ. ಪದ್ಮಾವತಿಯ ಸಮಸ್ಯೆಗೂ ಸಮರ್ಪಕ ಉತ್ತರ ಅವನಿಗೆ ದೊರೆಯದಾಯಿತು. ಮಾವನು ಮೌನವಾಗಿರುವುದನ್ನು ಕಂಡು ಪದ್ಮಾವತಿ ಮಾತನ್ನು ಮುಂದುವರಿಸಿದಳು.

" ನಾನು ಹೆಂಗಸು. ಇದರಲ್ಲಿ ನನಗೇನು ತಿಳಿಯುವುದು? ಗಂಡಸರು ನೀವೇ ವಿಚಾರಿಸಿ, ಯಾರನ್ನಾದರೂ ತಿಳಿದವರನ್ನ ಕೇಳಿ ಮಾಡಿರಿ. ಹೀಗೆ

ನೀವು ಮಾಡುವಿರಿ ಅಂದರೆ ಸೆಟ್ಟರು ನಮ್ಮನ್ನೇನ ತೋಟದೊಳಗೂ ಇರುವ ಗೊಡುವದಿಲ್ಲ."

"ಈ ತೋಟಕ್ಕಾಗಿ ನನಗ ಹೊಲ ಕಳಕೊಳ್ಳು ಅನ್ನುವಿ ಏನು?" ಬಾಬಣ್ಣಾ ಕೆರಳಿ ಕೇಳಿದ.

"ನಿಮಗೆ ತಿಳಿದಂತೆ ಮಾಡಿರಿ, ನನಗ ಅನಿಸಿದ್ದನ್ನ ನಾ ಹೇಳಿದೆ."

"ಕಾಯ್ದೆ ಏನು ನಮ್ಮ ಮನೆಯಲ್ಲಿ ಆಗ್ತಾವೇನು? ಕಾಯ್ದೆ ಪ್ರಕಾರ ಅವರೂ ನಡೆದಾರು, ನಾವೂ ನಡೆಯೋಣ."

ಬಾಬಣ್ಣಾ ಮತ್ತೂ ಆವೇಶದಲ್ಲಿಯೇ ನುಡಿದ.

"ಏನು ಮಾಡುವದನ್ನು ವಿಚಾರ ಮಾಡಿ ಮಾಡೋಣಲ್ಲ. ಈಗೇಕೆ ಅಷ್ಟ ನೀನಾದರೂ ಸಿಟ್ಟಿಗೆ ಬರುವಿ?"

ಎಂದು ಅಳಿಯನಿಗೆ ತಾತಪ್ಪ ಸಮಾಧಾನ ಹೇಳಿದ. ಈ ಪ್ರಸಂಗ ಹೀಗೆಯೇ ಬೆಳೆದು ವಿರಸಕ್ಕೂ ಹೋದೀತೆಂದು ಮಾತನ್ನು ಮುಗಿಸಿಯೇ ಬಿಟ್ಟ. ಮಾತು ಮುಗಿದರೂ ಅವನ ತಲೆಯಲ್ಲಿಯ ವಿಚಾರ ನಿಲ್ಲಲಿಲ್ಲ ಹೇಗೆ ಮುಂದುವರಿಯಬೇಕು, ಯಾವುದನ್ನು ಮಾಡಿದರೆ ಒಳ್ಳೇದು, ಎಂಬು ದನ್ನೇ ಆ ದಿನ ಇರುಳೆಲ್ಲ ವಿಚಾರಿಸಿದ. ಅದಕ್ಕಾಗಿ ಅವನಿಗೆ ಆದಿನ ಚನ್ನಾಗಿ ನಿದ್ರೆಯೂ ಕೂಡ ಹತ್ತಲಿಲ್ಲ.

ಪದ್ಮಾವತಿಯ ಸ್ಥಿತಿಯೂ ಹಾಗೆಯೇ. ಇದೂ ಒಂದು ಕೂರಿಗೆ ಹೊಲ ವನ್ನು ಮಾರಿ, ಎಲ್ಲಿ ಮಕ್ಕಳಿಗೆ ಊರ ಭೂಮಿಯಲ್ಲಿ ಅಡವಿಯೇ ಇಲ್ಲದಂತೆ ಮಾಡುವರೇನೋ ಎಂಬ ಚಿಂತೆ ಅವಳಿಗೆ.

ಮರುದಿನ ತಾತಪ್ಪನು ಅರ್ಜಿ ಕೊಡುವ ಸಿದ್ಧತೆ ಮಾಡುವ ಮೊದಲು ಕಲ್ಲಪ್ಪನಿಗೆ ಆ ಸುದ್ದಿ ತಿಳಿಯುವಂತೆ ವ್ಯವಸ್ಥೆ ಮಾಡಿದನು. ಅವನಲ್ಲಿ ಹೋಗಿ ಕೂಡುವವರ ಮುಂದೆಲ್ಲ ಹೇಳಿದನು. ಇದನ್ನು ಕೇಳಿ ಕಲ್ಲಪ್ಪನು ತಾನಾಗಿಯೇ ತಮ್ಮ ಕಡೆಗೆ ಬರಬಹುದೆಂದು ನಿರೀಕ್ಷಿಸಿದನು. ಹಾಗೆ ಬಂದರೆ ಅವನಿಂದ ಆ ಎರಡು ಕೂರಿಗೆ ಅಡವಿಯ ಬಗ್ಗೆ ಇನ್ನೊಂದು ಸಾವಿರದಷ್ಟು ರೂಪಾಯಿಗಳನ್ನು ಇಸಿದುಕೊಂಡು ಇಲ್ಲಿಯೇ ಒಪ್ಪಂದದಲ್ಲಿ ಮುಗಿಸಿದ ರಾಯಿತೆಂದು ಮನದಲ್ಲಿ ಮುಂಡಿಗೆ ಮಾಡಿದನು. ಆಮೇಲೆ ಸೆಟ್ಟರನ್ನು ಕಣ ಕೋಣ ಎಂದು ಲೆಕ್ಕ ಹಾಕಿದನು.

ಒಂದು ವಾರ ಕಳೆದರೂ ಕಲ್ಲಪ್ಪ ಇವರ ಕಡೆಗೆ ಬರಲಿಲ್ಲ. ಈ ಸುದ್ದಿಯನ್ನು ಹೇಳಲಿಕ್ಕೆ ಹೋದವರ ಮುಂದೆ ಸ್ಪಷ್ಟವಾಗಿ ಹೇಳಿಯೂ ಬಿಟ್ಟ:

" ಸರಕಾರೇನು ಹುಚ್ಚಿಲ್ಲ. ಹೀಗೆ ಸಿಕ್ಕ ಸಿಕ್ಕವರ ಹೊಲಗಳನ್ನೆಲ್ಲ ತಿರುಗಿ ಕೊಡಿಸುತ್ತ ಹೋದರೆ ನಾಳೆ ವ್ಯವಹಾರವೇ ನಡೆಯಲಿಕ್ಕಿಲ್ಲ. ನಮ್ಮ ದುಡ್ಡೇನು ಹುಣಸೇ ಪಕ್ಕ ಅಲ್ಲ."

ಈ ಮಾತು ಇನ್ನಿಷ್ಟು ಬಣ್ಣ ಬಳಿದುಕೊಂಡು ತಾತಪ್ಪನ ಮುಂದೆ ಬಂದು ನಿಂತಿತು. ಆಗ ಅವನು ಮತ್ತಿಷ್ಟು ರೇಗಿ ನುಡಿದ:

" ವಕೀಲರನ್ನ ಕೇಳಿ ಬಂದಿರುವೆ. ತಕ್ಕೊಂಡೇ ತೋರಿಸುವೆ."

ಇದಕ್ಕೆ ಪ್ರತಿಯಾಗಿ ಕಲ್ಲಪ್ಪನೂ ಹೇಳಿ ಕಳಿಸಿದ:

" ಸುಮ್ಮನೇ ಇಲ್ಲಿ ಮಾತಾಡುವದೇತಕ್ಕೆ? ಕೋರ್ಟು ಏನು ಮಾಡಿದ್ದು ಆಗಲಿ. ನಾನೂ ಒಂದು ಕೈ ನೋಡಬೇಕೆಂದಿರುವೆ."

ಇಂಥ ಮಾತುಗಳಿಂದ ತಾತಪ್ಪ ಇನ್ನಿಷ್ಟು ಮುಂದುವರಿಯುವಂತಾಯಿತು. ಬಾಬಣ್ಣನನ್ನು ಊರೊಳಗೆ ಕರೆಯಿಸಿಕೊಂಡು ವಿಚಾರ ನಡೆಯಿಸಿದ. ಗಂಗವ್ವನ ಮನೆಯಲ್ಲಿ ಮತ್ತೆ ಪರಿಷತ್ತು ಕೂಡತೊಡಗಿತು. ಚಹದ ಕಪ್ಪಿನ ಸುಳಿದಾಟ ಆರಂಭವಾಯಿತು. ಇದರಲ್ಲಿ ಇನ್ನೂ ಒಂದು ವಾರ ಸರಿಯಿತು.

ಈಗಾಗಲೇ ಊರೊಳಗಿನ ಹಲವು ಜನ ರೈತರು ಸರಕಾರಕ್ಕೆ ಅರ್ಜಿಗಳನ್ನೂ ಕೊಟ್ಟರು. ಒಕ್ಕಲಿಗರಲ್ಲಿಯೂ ಸಾವುಕಾರರಲ್ಲಿಯೂ ಚುರಸಿನ ಮಾತುಗಳೂ ನಡೆದವು. ಅನೇಕ ಜನ ಸಾವುಕಾರರೂ ವಕೀಲರನ್ನು ಹೋಗಿ ಸಲಹೆ ಕೇಳಿ ಬಂದರು. ಆದರೂ ಅವರಿಗೆ ಅಷ್ಟು ಅನುಕೂಲವಾದ ಕಾಯಿದೆ ಅದು ಇದ್ದಂತಿರಲಿಲ್ಲ. ಅಂದರೂ ಅರ್ಜಿ ಮಾಡಿದವರ ಹೊಲಗಳೆಲ್ಲ ತಿರುಗಿ ಸಿಕ್ಕೇ ಸಿಗುವವೆಂಬ ನಿಯಮವೂ ಇರಲಿಲ್ಲ. ಆದರೆ ಜನರು ಮಾತ್ರ ಹಾಗೆ ತಿಳಿದುಕೊಂಡಿದ್ದರು, ಅರ್ಜಿ ಹಾಕಲಿಕ್ಕೆ ಉದ್ಯುಕ್ತರಾಗಿದ್ದರು. ಅವರ ಹೊಲಗಳು ಅವರಿಗೆ ಸಿಗಲಿ ಸಿಗದಿರಲಿ, ವಕೀಲರಿಗೆ ಅರ್ಜಿಗೆ ಇಪ್ಪತ್ತೈದು ರೂಪಾಯಿಗಳಂತೆ ಫೀ ಮಾತ್ರ ಸಿಕ್ಕೇ ಸಿಗುವುದು. ಅದರಿಂದ ಈ ಚಳವಳಿಗೆ ಅವರು ಇನ್ನಿಷ್ಟು ಸ್ಫೂರ್ತಿಯಿತ್ತರು. ಅಂತಲೇ ಆ ತಿಂಗಳಲ್ಲಿ ಆ ತಾಲೂ

ಕಿಗೆ ಸಾಲ ಪರಿಹಾರಕ್ಕಾಗಿ ಹೋದ ಅರ್ಜಿಗಳು ಎಂಭತ್ತು ಸಾವಿರ. ಇನ್ನೂ ಬಾಬಣ್ಣನಂಥವರ ಅರ್ಜಿಗಳು ಹೋಗಬೇಕು.

ಸೆಟ್ಟರು ಕಣ್ಣು ಮುಚ್ಚಿಕೊಂಡೇನೂ ಕುಳಿತಿರಲಿಲ್ಲ. ಊರೊಳಗಿನ ಪರಿಸ್ಥಿತಿಯ ಅರಿವು ಅವರಿಗೂ ಇತ್ತು. ಇಷ್ಟರಲ್ಲಿಯೇ ಅವರ ಮೇಲೆ ಒಂದಿಬ್ಬರು ಅರ್ಜಿಗಳನ್ನೂ ಮಾಡಿದ್ದರು. ಬಾಬಣ್ಣನ ವಿಷಯಕ್ಕೂ ಅವರಿಗೆ ಸಂಶಯವಿತ್ತು. ಆತಲೇ ಅವರು ಪದ್ಮಾವತಿಯು ಅಂಗಡಿಗೆ ಸಾಮಾನು ಒಯ್ಯಲಿಕ್ಕೆ ಬಂದಾಗ ಸಹಜ ಕೇಳಿದರು:

" ನಿನ್ನ ಗಂಡನೂ ಏನು ಅರ್ಜಿ ಗಿರ್ಜಿ ಮಾಡುವುದರಲ್ಲಿ ತೊಡಗಿದಾನ ಏನಬೆ ? "

" ಯಾತರ ಅರ್ಜಿರಿ ? "

ಪದ್ಮಾವತಿ ಬೆರಗಿನಿಂದ ನುಡಿದಳು. ನುಡಿಯುವಂತೆಯೂ ಇತ್ತು. ಇತ್ತೀಚೆಗೆ ಅವರ ಮನೆಯಲ್ಲಿ ಈ ವಿಷಯಕ್ಕೆ ಮಾತುಗಳು ಹೊರಟಿರಲಿಲ್ಲ.

" ಊರೊಳಗೆ ಏನೇನೋ ನಡೆದದಲ್ಲ ? "

ಸೆಟ್ಟರ ಈ ಮಾತಿನಿಂದ ಅವಳಿಗೆ ಹೊಳೆಯಿತು. ಅದಕ್ಕೆ ಅವಳು ಹೇಳಿದಳು,—

" ಹೀಗೆಲ್ಲ ಹೊಲ ತಿರುಗಿ ಸಿಕ್ಕರೆ ದಿನಾ ಸಿಕ್ಯಾವು. ಸಿಗಬೇಕಾಗಿದ್ದ ಹೊಲ ಮೊದಲ ಹೋಗತಿದ್ದುವು ಏಕೆ ? "

ಅಷ್ಟಕ್ಕೆ ಸೆಟ್ಟಿಯೂ ಸುಮ್ಮನಾದ. ಆವರೆ ಅದೇ ದಿವಸ ಸಂಜೆಗೆ ಬಾಬಣ್ಣ ಹೆಂಡತಿಗೆ ಹೇಳಿದ. ಗಂಗವ್ವನಲ್ಲಿ ಖರ್ಚಿಗಾಗಿ ನೂರು ರೂಪಾಯಿ ಸಾಲ ತೆಗೆದು ಸೆಟ್ಟರ ಮೇಲೆಯೂ ಕಲ್ಲಪ್ಪನ ಮೇಲೆಯೂ ಅರ್ಜಿ ಕೊಟ್ಟುದೇ ಮಾತಿನ ಮುಖ್ಯ ಸಂಗತಿಯಾಗಿದ್ದಿತು. ಗಂಡನ ಮಾತು ಕೇಳಿ ಪದ್ಮಾವತಿ ತುಂಬ ನೊಂದುಕೊಂಡಳು. ತಾನು ಅದೇ ಹೊತ್ತು ಸೆಟ್ಟರಿಗೆ ಹಾಗೆ ಹೇಳಿ ಬಂದುದೂ ಇವರು ತನಗೆ ಗೊತ್ತಿಲ್ಲದೆ ಅರ್ಜಿ ಹಾಕಿದುದೂ ಕೂಡಿತು. ಸೆಟ್ಟರಿಗೆ ನಾಳೆ ಇದು ತಿಳಿದರೆ ತನ್ನನ್ನು ಸುಳ್ಳುಗಾರಳೆಂದು ತಿಳಿಯುವರಲ್ಲ ಎಂಬುದೇ ಅವಳ ಚಿಂತೆ. ಆ ಚಿಂತೆಯಿಂದ ಅವಳಿಗೆ ಆ ದಿನ ಬೆಳತನಕ ನಿದ್ರೆಯೇ ಹತ್ತಲಿಲ್ಲ. ತಾನೊಂದು ದೊಡ್ಡ ತಪ್ಪು ಮಾಡಿದಂತೆ ಅವಳಿಗೆ ಅನಿಸಹತ್ತಿತು.

ಮರು ದಿನ ಬೆಳಗಾಗುತ್ತಲೇ ಊರೊಳಗೆ ಅವಳಿಗೆ ಏನೂ ಕೆಲಸವಿಲ್ಲ ದಿದ್ದರೂ ಸಹಜ ಹೋದಳು. ಅಂಗಡಿಗೆ ಹೋಗಿ ಏನೋ ಒಂದೆರಡು ಸಾಮಾನು ಕೊಂಡಂತೆ ಮಾಡಿ ಸೆಟ್ಟರಿಗೆ ಸ್ವಾಭಾವಿಕವಾಗಿ ಅನುಮಾನ ಬರುವಂತೆ ಅರ್ಜಿ ಮಾಡಿದ ಸಂಗತಿಯನ್ನು ಸೂಚಿಸಿದಳು. ಆಗ ಅವಳ ಮನಸ್ಸಿಗೆ ಹಗುರೆನಿಸಿತು ಹಾಗೆಯೇ ತೋಟಕ್ಕೆ ಬಂದು ತಾನು ಮಾಡಿದ ಕೆಲಸವನ್ನು ಗಂಡನಿಗೂ ಹೇಳಿದಳು. ತನ್ನಿಂದ ಯಾರ ಕೆಲಸವೂ ಕೆಡಬಾರ ದಲ್ಲ, ಎಂಬುದೇ ಅವಳ ಆಶಯವಾಗಿತ್ತು.

" ನಿನಗೇತಕ್ಕೆ ಕಾರಭಾರ ಬೇಕಿತ್ತು ? "

ಬಾಬಣ್ಣ ಹೆಂಡತಿಯನ್ನು ಕೇಳಿದ

" ಹಾಗಾದರೆ ನಾ ಸುಳ್ಳ ಜೀವಲೇನು ? "

" ನೀ ಸತ್ಯುಳ್ಳಾಕೆ ಆಗಲಿಕ್ಕೆ ಹೋಗು. ನಾಳೆ ತೋಟದಿಂದ ಒದ್ದ ಹೊರಗೆ ಹಾಕತಾನ. ಕೂಡ ಆಮೇಲೆ," ಬಾಬಣ್ಣ ಹಂಗಿಸಿದ.

" ತೋಟ ಬೇಕಾಗಿದ್ದರೆ--ಇಂಥ ಅಂಜಿಕೆ ನಿಮಗೆ ಇದ್ದರೆ—ಅರ್ಜಿ ಏಕೆ ಮಾಡತಿದ್ದಿರಿ ? "

" ತೋಟಕ್ಕಾಗಿ ಹೊಲ ಕಳಕೊಳ್ಳು ಅನ್ನುವಿ ಏನು ? ಒಳ್ಳೇ ಶಾಣ್ಯಾಕಿ ಆದಿಯಲ್ಲ ನೀನು ? "

" ಎಂದಾದರೂ ನೀವು ಅರ್ಜಿ ಮಾಡಿದ್ದು ಹೊರಬೀಳತಿಕ್ಕುದೇ ಅಲ್ಲ?"

ಪದ್ಮಾವತಿಯೂ ತುಸು ಕಾವೇರಿಯೇ ನುಡಿದಳು.

" ಅಷ್ಟರೊಳಗೆ ನಾವು ಮೆಣಸಿನ ಕಾಯಿ ಜೋಳ ತೋಟದಿಂದ ಮನೆಗೆ ಸಾಗಿಸತಿದ್ದೆವು. ತಿಳಿಯಿತು ? "

ಗಂಡನ ಈ ವರ್ತನೆಯ ರೀತಿ ಅವಳಿಗೆ ಸೇರಲಿಲ್ಲ. ಏನಾದರೂ ನಾಳೆ ಊರಲ್ಲಿ ತಾವು ಜನ್ಮ ಮಾಡತಕ್ಕದ್ದಿದೆ, ಇಂಥ ಠಕ್ಕತನ ಉಪಯೋಗದ್ದಲ್ಲ ವೆಂದು ಭಾವಿಸಿದ್ದಳು. ಅಂದರೂ ಬಾಬಣ್ಣ ತನ್ನ ವ್ಯವಸ್ಥೆಯಲ್ಲಿಯೇ ಇದ್ದ. ಇದನ್ನು ಪದ್ಮಾವತಿಯೂ ಸೆಟ್ಟರಿಗೆ ಹೋಗಿ ಇನ್ನೊಮ್ಮೆ ತಿಳಿಸಬೇಕೆಂದು ಯೋಚಿಸಿದಳು. ಆದರೆ ಗಂಡನ ವಿರುದ್ಧ ದೂರು ಹೇಳುವ ಧೈರ್ಯ ಆ ಹೆಣ್ಣಿನ ಹೃದಯಕ್ಕೆ ಆಗಲಿಲ್ಲ. ಆದರೆ ಸೆಟ್ಟರೇನು ಕಣ್ಣು ಮುಚ್ಚಿಕೊಂಡು

ಕುಳಿತಿರುವರಿ ? ಅವರಿಗೆ ಬಾಬಣ್ಣನ ಚಟುವಟಿಕೆಗಳೆಲ್ಲ ತಿಳಿದುವು. ಅದ ರಂತೆ ಗೌಡರಿಗೆ ಹೇಳಿ ವ್ಯವಸ್ಥೆಯನ್ನೂ ಮಾಡಿಸಿದರು. ಇದು ಗೌಡನಿಗೂ ಬೇಕಾದ ಸಂಗತಿಯೇ ಆಗಿತ್ತು ಕಲ್ಲಪ್ಪನಿಂದಲೂ ಈಗಾಗಲೇ ಅವರ ಕಡೆಗೆ ಬಾಬಣ್ಣನ ವಿಷಯಕ್ಕೆ ಮಾತು ಬಂದಿತ್ತು.

ಮಾವ ಅಳಿಯ ಇಬ್ಬರೂ ಕೂಡಿ ಎಷ್ಟು ಪ್ರಯತ್ನಪಟ್ಟರೂ ತೋಟ ಬಿಡುವ ಮುಂಚೆ ಸೆಟ್ಟಿಯ ಸಾಲವನ್ನೆಲ್ಲ ರೀತಿಯಂತೆ ತೀರಿಸಲೇ ಬೇಕಾ ಯಿತು ಗೌಡರೂ ಸೆಟ್ಟರೂ ಕೂಡಿ ಆ ರೀತಿ ಒತ್ತಾಯಗೊಳಿಸಿದರು. ಅವನ ಸಾಲವನ್ನು ಇಟ್ಟುಕೊಳ್ಳುವುದು ತಾವು ಈಗಾಗಲೇ ಸಾಲ ಪರಿಹಾರ ಸಮಿ ತಿಗೆ ಮಾಡಿಕೊಂಡ ಅರ್ಜಿಗೆ ಮಾರಕವಾಗುವದೆಂದೂ ಇವರಿಗೆ ಎನಿಸಿತು. ಅದಕ್ಕಾಗಿ ಬಹಳ ಯೋಚಿಸಿದರು ಸೆಟ್ಟರಂತೂ ತಮ್ಮ ಎತ್ತನ್ನು ತಾವು ತಿರುಗಿ ಇಟ್ಟುಕೊಳ್ಳಲು ಸಿದ್ಧರಿದ್ದಿಲ್ಲ ಈಗಾಗಲೇ ಅದು ಯಾತ ಜಗ್ಗಿ ಜಗ್ಗಿ ಸೊರಗಿದ್ದಿತು ಪೇಟಿಯಲ್ಲಿ ಒಯ್ದರೆ ಮುಂಚಿನ ಬೆಲೆ ಬರುವಂತಿರ ಲಿಲ್ಲ. ಹೀಗಾಗಿ ಅವನ ಹಣವನ್ನೆಲ್ಲ ಇವರು ತೆರಲೇಬೇಕಾಯಿತು. ಅವರ ಮನೆಯಲ್ಲಿಟ್ಟ ಬೆಲ್ಲ ಅಂಗಡಿಯ ಬಾಕಿಯಲ್ಲಿ ಮುರಿದು ಲೆಕ್ಕ ಸಮ ಹೋಯಿತು. ಇನ್ನೂ ಬಾಬಣ್ಣ ಕೊಡಬೇಕಾದ ಸಾಲ ಬಹಳ ಉಳಿಯಿತು. ಸೆಟ್ಟರ ಎತ್ತಿನ ಬೆಲೆ, ಅದರ ಬಡ್ಡಿ ಕೊಡಬೇಕು, ಹೊಟೇಲಿನ ಬಿಲ್ಲು ತೀರಿಸ ಬೇಕು. ಮಾಸ್ತರರ ಹಣವಂತೂ ಅವರ ಲೆಕ್ಕದಲ್ಲಿಯೇ ಇಲ್ಲ. ಗಂಗವ್ವನ ಸಾಲವಂತೂ ಮೊನ್ನಿನದಲ್ಲವೆ ?

ಹೀಗಾಗಿ ಬಾಬಣ್ಣ ಅದೂ ಒಂದು ಕೂರಿಗೆ ಹೊಲವನ್ನು ಮಾರಾಟಕ್ಕೆ ಹಚ್ಚಬೇಕಾಯಿತು. ಅದನ್ನು ಗಂಗವ್ವನೇ ಕೊಳ್ಳಲಿಕ್ಕೆ ಸಿದ್ಧಳೂ ಆದಳು. ಈಗ ಅದರ ಬೆಲೆ ಹದಿನೈದು ನೂರಾಗಿದ್ದಿತು. ಅಷ್ಟನ್ನು ಕೊಡಲೂ ಅವಳು ಹಿಂದೆ ಮುಂದೆ ನೋಡಲಿಲ್ಲ. ಒಂದು ಚೀಲ ಜೋಳಕ್ಕೆ ಅರವತ್ತುನಾಲ್ಕು ರೂಪಾಯಿ ಬರುವಾಗ ಅದೇನು ದೊಡ್ಡ ರಕಮು ಎನಿಸಲಿಲ್ಲ ಅವಳಿಗೆ. ಆ ಸಲ ಸುಗ್ಗಿಯಲ್ಲಿ ಬಂದ ಇಪ್ಪತ್ತೈದು ಚೀಲ ಜೋಳ ಮಾರಿದರೆ ಇದೊಂದು ಕೂರಿಗೆ ಹೊಲ ಬರುವದಲ್ಲ ಎಂದು ಲೆಕ್ಕ ಹಾಕಿದಳು.

ಅವಳ ಲೆಕ್ಕ ಸರಿಹೋಯಿತು. ಬಾಬಣ್ಣ ಹೊಲ ಕೊಟ್ಟು ಎಲ್ಲರ ಸಾಲ ವನ್ನು ತೀರಿಸಿದ. ಅಂದರೂ ಅವನ ಕೈಯಲ್ಲಿ ಆರು ನೂರು ರೂಪಾಯಿಗಳು

ಉಳಿದುವು. ಅವೂ ಹತ್ತರವಿದ್ದರೆ ವೆಚ್ಚ ಮಾಡಿ ಬಿಡುವನೆಂಬ ಚಿಂತೆ ಪದ್ಮಾವತಿಗೆ. ಅದಕ್ಕಿಂತಲೇ ಅವಳು ಚಂದ್ರಪ್ಪನ ಬೆನ್ನಿಗೆ ಬಿದ್ದು, ಆ ರೂಪಾಯಿಗಳನ್ನು ಗಂಡನ ಕೈಯಿಂದ ಉಚ್ಚಿಕೊಂಡು ಆದಪ್ಪ ಮಾಸ್ತರರ ಹತ್ತರ ಇಡಲಿಕ್ಕೆ ಹಚ್ಚಿದಳು. ಆದರೂ ಅವಳ ಚಿಂತೆ ತಪ್ಪಲಿಲ್ಲ ಗಂಡನಿಗೆ ಆಗಾಗ ಅನ್ನುವಳು.

"ಸೆಟ್ಟರ ಕೂಡ ಸಿಟ್ಟು ಮಾಡಿ ಉಪ್ಪ ಇಲ್ಲದೆ ಉಂಡರಂತ"

"ಈಗೇನಾಯ್ತು ?"

"ಕಾಣಿಸುವದಿಲ್ಲೇನು ? ನಾಲ್ಕು ಚೀಲ ಮೆಣಸಿನ ಕಾಯಿ ಬಂದ ಮನೆಯೊಳಗ ಬಿದ್ದುವು. ಎತ್ತ ಒಂದ ಬಾಗಿಲೊಳಗ ನಿಂತಿತು. ಇದ್ದ ಒಂದು ಕೂರಿಗೆ ಅಡವಿಯೂ ಹೋಯಿತು. ನಾಳೆ ನಾವೂ ಮಕ್ಕಳೂ ಖುರ್ಪಿ ತಗೊಂಡ ಇನ್ನೊಬ್ಬರ ಹೊಲಕ್ಕೆ ಹೋಗಲಿಕ್ಕೆ ಬೇಕಲ್ಲ."

ಪದ್ಮಾವತಿ ತುಂಬ ನೊಂದುಕೊಂಡು ನುಡಿಯುತ್ತಿದ್ದಳು. ಅದಕ್ಕೆ ಬಾಬಣ್ಣ ಸಮಾಧಾನ ಹೇಳುವ:

"ಈಗ ಒಂದ ಕೂರಿಗೆ ಹೋದದ್ದೇ ಹೇಳುವಿ. ಮುಂದೆ ಬರುವ ಮೂರ ಕೂರಿಗೆಯ ಮಾತನ್ನೇ ಎತ್ತವಲ್ಲಿಯಲ್ಲ ನೀನು ?"

"ನಾಳಿನದನ್ನು ಯಾರು ಕಂಡವರು ? ಬದುಕಿದವರಾರೋ ಸಾಯು ವವರಾರೋ ! ಈಗಂತೂ ಇದ್ದ ಹೊಲವೂ ಒಂದ ಹೋಯ್ತಲ್ಲ !"

ಪದ್ಮಾವತಿಯ ನಿಟ್ಟುಸುರಿನ ನುಡಿಯಿದು.

೧೯

ಆದಪ್ಪ ಮಾಸ್ತರರ ತಂದೆ ಮುಪ್ಪಾಗಿದ್ದರು. ಇನ್ನು ಮುಂದೆ ಅವ ರಿಂದ ಮನೆತನದ ಭೂಮಿಗಳನ್ನು ಸ್ವತಃ ಸಾಗುವಳಿ ಮಾಡುವುದು ಆಗು ವಂತಿರಲಿಲ್ಲ. ಅದಕ್ಕಾಗಿ ಯಾವನಾದರೊಬ್ಬ ರೈತನಿಗೆ ಲಾವಣಿ ಕೊಡ ಬೇಕಾಗಿದ್ದಿತು. ಮಾಸ್ತರರ ದೃಷ್ಟಿಯಲ್ಲಿ ಬಾಬಣ್ಣನೊಬ್ಬ ಇದ್ದ. ಅಡವಿ ಯನ್ನು ಕಳೆದುಕೊಂಡು ಕಂಗಾಲ ಆದಂಥವನಿಗೆ ನಾವು ಪಾಲಿನಿಂದ ಭೂಮಿ ಯನ್ನು ಕೊಟ್ಟು ಯಾಕೆ ನೆರವಾಗಬಾರದೆಂದು ಅವರ ವಿಚಾರ. ಚಂದ್ರಪ್ಪ ನದೂ ಹಾಗೆಯೇ. ಬಾಬಣ್ಣನ ಕಡೆಗೆ ನೋಡದಿದ್ದರೂ ಪದ್ಮಾವತಿಯ ಮುಖವನ್ನು ನೋಡಿಯಾದರೂ ಅವರಿಗೆ ಹೊಲ ಹಚ್ಚುವುದು ಅವಶ್ಯವೆಂದು

ಭಾವಿಸಿದ್ದಳು ಅವಳಿಗೆ ಹಗಲಿರುಳೂ ಪದ್ಮಾವತಿಯ ಚಿಂತೆಯೇ. ಮನೆಯಲ್ಲಿ ಮೂವರು ಮಕ್ಕಳು, ಮತ್ತೆ ನಾಲ್ಕನೆಯ ಮಗುವಿನ ತಾಯಿಯಾಗುವ ಲಕ್ಷಣ ತೋರುತ್ತಲಿದೆ. ಗಂಡ ಇಂಥವ, ಹೇಗೆ ಪದ್ಮಾವತಿ ಪ್ರಪಂಚ ಸಾಗಿಸುವಳೋ ಎಂಬ ವಿಚಾರವೇ ವಿಚಾರ ಅವಳಿಗೆ. ಆದರೂ ತಾನಾಗಿಯೇ ಗಂಡನ ಮುಂದೆ ಹೊಲವನ್ನು ಬಾಬಣ್ಣನಿಗೆ ಲಾವಣಿ ಕೊಡಿರೆಂದು ಹೇಳಲಾರಳು.

ಮಾಸ್ತರರ ತಂದೆಯ ಕಡೆಯಿಂದಲೇ ಒಂದು ದಿನ ಮಾತು ಬಂತು:

" ಯುಗಾದಿ ಅಂತೂ ಆಗಿಹೋಯ್ತು. ಇನ್ನು ಯಾರನ್ನ ಆದರೂ ಒಳ್ಳೆಯ ಕುಳ ನೋಡಿ ಹೊಲ ಹಚ್ಚಬೇಕು. "

" ಬಾಬಣ್ಣನಿಗೆ ಯಾಕೆ ಕೊಟ್ಟ ಬಿಡಬಾರದು ? ಹೇಗಾದರೂ ಒಂದ ಎತ್ತೂ ಅದ. ದುಡಿಯುವವನೂ ಇದ್ದಾನೆ. " ಮಾಸ್ತರರು ಅಂದರು.

" ಅವನು ದುಡಿಯುವವನಿದ್ದರೆ ನನ್ನ ಕಣ್ಣ ಮುಂದೇ ಇಷ್ಟ ಹೊಲ ಕಳಕೊಂಡ ಹೀಗೆ ಕಂಗಾಲ ಆಗತಿದ್ದನೇನು ? "

" ವೇಳೆ ಕೆಟ್ಟ ಹತ್ತಿದ ಮೇಲೆ ಏನು ಆಗುವದಿಲ್ಲ ? " ಚಂದ್ರವ್ವ ನಡುವೆ ಮಾತು ಸೇರಿಸಿದಳು.

" ವೇಳೆ ಕೆಟ್ಟ ಹತ್ತಲಿಕ್ಕೆ ಏನಾತು ? ಲೆಕ್ಕಾ ಹಾಕಿ ಪ್ರಪಂಚ ಮಾಡಬೇಕಾಗತದ. ಹೋಗಬೇಡ ಅಂದವರಲ್ಲಿ ಹೋಗತಾನ ಮಾಡಬೇಡ ಅಂದದ್ದನ್ನ ಮಾಡತಾನ. ಮತ್ತ ಉಪಕಾರ ಮಾಡಿದವರ ಮೇಲೆ ತಿರುಗಿ ಬಿದ್ದ. ಇಂಥವನ್ನ ತಗೊಂಡ ಏನು ಮಾಡೋದು ? ತನಗ ತಿಳಿಯದಿದ್ದರೆ ಇನ್ನೊಬ್ಬರು ಹೇಳಿದ್ದನ್ನ ಆದರೂ ಕೇಳಿಕೊಂಡ ಇರಬೇಕು. "

" ಇನ್ನೇನ ನಿನ್ನ ಕೈಯಿಂದ ದುಡಿಯುವದಾಗುವದಿಲ್ಲ. ಯಾವನಾದರೂ ದುಡದದ್ದ ಪಾಲ ಒಂದ ತಿನ್ನುವವನೇ. ನೀ ಕೂತ ಹೇಳು. ಬಾಬಣ್ಣ ದುಡಿಯಲಿ. ಅವನ ಹೊಟ್ಟೆಯೂ ತುಂಬಿತು. ನಮ್ಮ ಅಡವಿಯ ಕೆಲಸೂ ಆಯಿತು. " ಮಾಸ್ತರರು ಸಲಹೆ ಹೇಳಿದರು ತಂದೆಗೆ.

" ನೀನೂ ನಿನ್ನ ಹಡೆದಾಕೆ ಏನು ಮಾಡಿಕೊಳ್ಳುವಿರಿ ಮಾಡಿಕೊಳ್ಳಿರಿ. ನನ್ನ ಏನೂ ಕೇಳಬೇಡಿರಿ. ಏನೋ ಮೊನ್ನೆ ಆರನೂರ ರೂಪಾಯಿ ತಂದ ನಿಮ್ಮಲ್ಲೆ ಇಟ್ಟಾನಂತ ನಿಮ್ಮ ಬಾಯಿಗೆ ನೀರ ಬಿಟ್ಟದ "

"ಯಾರಿಗಾದರೂ ಹಚ್ಚಲಿ ಬಿಡಪ್ಪ ಹೊಲ. ನಮಗೆ ಏತಕ್ಕೆ ಬೇಕು ಉಸಾಬರಿ ಸರಳ ಹೇಳಲಿಕ್ಕೆ ಹೋದರೆ ಇಲ್ಲದ್ದೊಂದ ಮೈಮೇಲೆ ಬರತದ." ಚಂದ್ರವ್ವ ಗಂಡನ ಮಾತನ್ನು ನಡುವೆಯೇ ತಡೆದು ತನ್ನ ಮಗನಿಗೆ ಹೇಳಿದಳು.

"ಅಲ್ಲಽ ಅಂದರೆ. ಹೊಲ ಕೇಳಲಿಕ್ಕೆ ಬಂದಿಲ್ಲ, ಏನಿಲ್ಲ. ಅವನ ಮನೆ ಮುಟ್ಟ ಹೋಗಿ ಹೊಲ ಮಾಡು ಅನ್ನೋದು ಅಂದರೆ? ನಮ್ಮ ಹೊಲವೇನು ಕರಿಕೆ ಹತ್ತಿ ಪಡ ಆಗಿ ಹೊರಟದ? ಇದೇ ಮಾಲಗಾರ ಹುಡುಗ ಹಗಲೀ ರಾತ್ರಿ ಎಡತಾಕಲಿಕ್ಕೆ ಹತ್ತಿದಾನ, ಹೊಲದ ಆಶೆಗಾಗಿ ನೋಡು!" ಚಂದ್ರವ್ವನ ಬಿಗುವಿನ ಮಾತಿಗೆ ಅವಳ ಪತಿ ಒಂದು ಹೆಜ್ಜೆ ಮುಂದೆ ಬಂದ.

"ಹೀಗನ್ನರಿ! ಅಂದರೆ ನಾನೂ ಒಪ್ಪುವೆ." ಚಂದ್ರವ್ವ ಸ್ವಲ್ಪ ತಡೆದು "ನಿಮಗೆ ಏನು ಹೇಳೋದು? ಈಗ ದಿನಕ್ಕ ಮೂರು ಸಲ ಬಂದ ಪದ್ಮಾವತಿ ಕಣ್ಣೀರು ಹಾಕಲಿಕ್ಕೆ ಹತ್ತಿರುವಳು. ಹೊಲಾ ಕೊಟ್ಟಾರೋ ಇಲ್ಲೋ ಅಂತ ಬಾಯಿ ತೆರಕೊಂಡ ಕೂತಿದಾಳ. ಇನ್ನೇನು ಬಂದ ನಿಮ್ಮ ಕಾಲ ಹಿಡಿಯುವದೊಂದೇ ಉಳಿಯಿತು." ಹೀಗೆ ವಿವರಿಸಿದಳು.

"ಹೊಲ ಆಕೆ ಮಾಡುವಾಕ್ಯೊ ಅವನು ಮಾಡುವವನೋ? ನಡುವೆ—ಒಳ್ಳೆಯ ಸುಗ್ಗಿಯೊಳಗೆ—ಎಲ್ಲಿಯಾದರೂ ಓಡಿ ಹೋದ ಅಂದರೆ ಕಿಸವಾಯಿ ಆಗಿ ಕೂಡೋದು ಆದೀತು." ಮತ್ತೂ ಮಾಸ್ತರರ ತಂದೆ ಸಂಶಯ ಎತ್ತಿದರು.

"ನಿಮ್ಮ ಮುಂದೆ ಮಾತಾಡುವ ಮಾತೇ ಉಳಿಯಲಿಲ್ಲ. ಎಲ್ಲಾ ಪದ್ಮಾವತಿಯ ಮೇಲೇ ನಮ್ಮ ಭಾರ. ಅವನನ್ನ ಉದ್ಯೋಗಕ್ಕ ಹಚ್ಚುವಾಕೆಯೂ ಅವಳೇ. ಆಕೆ ಮನೆಯೊಳಗ ಒಂದು ಗಂಡಸು ಇದ್ದಂತೆ ಇದ್ದಾಳ ತಿಳಿತು?" ಪತಿಗೆ ಚಂದ್ರವ್ವ ತಿಳಿಸಿ ಹೇಳಹೋದಳು.

"ಎಲ್ಲಾ ಗೊತ್ತದ. ಆದರೆ ಒಳ್ಳೇ ಸುಗ್ಗಿ ದಿನದೊಳಗೇ ಹಡೆದ ಮನೆಯೊಳಗ ಕೂಡತಾಳ. ಏನು ಮಾಡುವಾಕೆ ನೀ?" ಸ್ವಲ್ಪ ಅಣಕದ ಸ್ವರದಲ್ಲಿ ಹೆಂಡತಿಗೆ ಕೇಳಿದನಾತ.

ಇಲ್ಲಿಯವರೆಗೆ ತಂದೆತಾಯಿಂದಿರ ಮಾತುಗಳನ್ನು ಮೌನವಾಗಿ ಕೇಳುತ್ತ ಕುಳಿತ ಆದಪ್ಪ ಮಾಸ್ತರರು ಈಗ ಮಾತನ್ನು ಮುಂದೆ ಚಾಚಿದರು:

" ನೀನೂ ಬಹಳ ಜಿಕೇರಿ ಮನುಷ್ಯ. "

" ಅಷ್ಟೆಲ್ಲ ಲೆಕ್ಕ ಹಾಕಿ ಮಾಡಿದಾಗಲೇ ಪ್ರಪಂಚ ನೆಟ್ಟಗೆ ಹೋಗಿ ದಂಡೆಗೆ ಹತ್ತುವದು. ನಿನ್ನಂತೆ ಒಮ್ಮೆಲೇ ಕಿಸೆಯೊಳಗಿನ ಮೂವತ್ತು ರೂಪಾಯಿ ನೋಟ ತಗದ ಕೊಟ್ಟಿದ್ದಾಗ ನಮ್ಮ ಜನ್ಮ ಹೀಗೆ ಆಗತಿರಲಿಲ್ಲ. "

ಮಗನ ಮಾತನ್ನು ಖಂಡಿಸಿ ನುಡಿದ.

" ಮನುಷ್ಯನ ಮೇಲೆ ಇದ್ದದ್ದು ಎಲ್ಲಿಯೂ ಹೋಗುವದಿಲ್ಲ. ಈಗ ಬಂದುವು ಅಲ್ಲ ! "

" ಬರತಾವಲ್ಲ. ವೇಳೆಗೆ ಇಲ್ಲದ್ದನ್ನ ತಗೊಂಡ ಏನು ಮಾಡೋದು ? "

ಇಷ್ಟೆಲ್ಲ ಮನೆಯಲ್ಲಿ ಮಾತು ಕತೆಗಳು ನಡೆದೂ ಕೂಡ ಕೊನೆಗೆ ಮಾಸ್ತರರ ತಂದೆಯು ಬಾಬಣ್ಣನಿಗೇ ಹೊಲ ಹಚ್ಚಿದರು. ಅವರಲ್ಲಿ ಬಾಬಣ್ಣನ ವಿಷಯಕ್ಕೆ ಕರುಣೆ ಇರಲಿಲ್ಲವೆಂತಲ್ಲ. ಆದರೆ ಅವನ ನಡತೆ ಮಾತ್ರ ಅವರಿಗೆ ಸೇರುತ್ತಿರಲಿಲ್ಲ. ಅಂತಲೇ ಇಷ್ಟೆಲ್ಲ ಮಾತು ಬೆಳಸಿದರು.

ಆದಪ್ಪ ಮಾಸ್ತರರ ಹೊಲವೆಲ್ಲ ಬಾಬಣ್ಣನ ಸ್ವಾಧೀನವಾಯಿತು. ಐದು ಕೂರಿಗೆ ಹೊಲ ಅವರದು. ಅದರಲ್ಲಿ ಬಾಬಣ್ಣ ದುಡಿಯಬೇಕು. ಬೆಳೆ ಮಾಡಬೇಕು. ಅರ್ಧಪಾಲು ಒಯ್ದು ಅವರ ಮನೆಗೆ ಮುಟ್ಟಿಸಬೇಕು. ಮೇಲೆ ನೂರು ರೂಪಾಯಿಗಳನ್ನೂ ತೆರಬೇಕು. ಸರಕಾರದ ತೆರಿಗೆಯನ್ನು ಮಾತ್ರ ಹೊಲದ ಒಡೆಯರೇ ಕೊಡಬೇಕು. ಈ ರೀತಿ ಕಬುಲಾಯತ ಮಾಡಲಾಯಿತು ಈ ಕರಾರಿನಂತೆ ಹೊಲ ದೊರೆತರೂ ಬಾಬಣ್ಣನಿಗೆ ಸಂತೋಷವೇ ಆಯಿತು. ಈಗಿನ ಅವನ ಹೆಸರಿಗೆ ಯಾರೂ ಹೊಲ ಕೊಡುವಂತಿರಲಿಲ್ಲ. ಚಂದ್ರವ್ವನ ಕೃಪೆಯಿಂದ ಇಷ್ಟಾದರೂ ಸಿಕ್ಕಿತಲ್ಲ, ಎಂದುಕೊಂಡು ಆ ಹೊಲದಲ್ಲಿ ಮನ ಮುಟ್ಟಿ ದುಡಿಯತೊಡಗಿದ.

ಮಳೆಗಾಲ ಬರುತ್ತಲೇ ಹೊಲದಲ್ಲಿ ಏನೇನು ಬಿತ್ತಬೇಕೆಂಬುದನ್ನು ಬಾಬಣ್ಣ ಚಂದ್ರವ್ವನ ಹತ್ತರ ಕೇಳಿ ತಿಳಿದುಕೊಂಡ. ಆದರಂತೆ ಅವರಿಂದ ಅರ್ಧ ಬೀಜಗಳನ್ನು ಲೆಕ್ಕಾಚಾರದಂತೆ ಪಡೆದ. ಆದರೂ ಚಂದ್ರವ್ವ ಬಿತ್ತಿಗೆಯ ಕಾಲಕ್ಕೆ ಸ್ವತಃ ಹೊಲಕ್ಕೆ ಹೋದಳು. ಅವಳ ಗಂಡನೇ ಬಿತ್ತುವವ. ತನ್ನ ಹೊಲವನ್ನು ಇನ್ನೊಬ್ಬರು ಬಿತ್ತಿದರೆ ಅವನಿಗೆ ಸೇರದು. ಯಾವ

ಮಡಿಗೆ ಎಷ್ಟು ಬೀಜ ಬೀಳಬೇಕೆಂಬುದು ಅವನು ಅನುಭವದಿಂದ ಅರಿತುಕೊಂಡಿದ್ದ. ಅದರಂತೆ ಆತ ಬಿತ್ತುವವ. ಕಸುವಿನ ನೆಲವಿದ್ದಲ್ಲಿ ಒಂದು ಕಾಳು ಹೆಚ್ಚು, ಕೆಂಪು ನೆಲ ಬಂದಲ್ಲಿ ಒಂದು ಕಾಳು ತಿಳುವು ಬೀಜ ಬಿಡುವ ತೂಕ ಅವನಿಗೇ ಗೊತ್ತು. ಇಡೀ ಆಯುಷ್ಯವನ್ನೇ ಹೊಲದಲ್ಲಿ ಕಳೆದ ಆತ ಈಗ ಇನ್ನೊಬ್ಬರಿಗೆ ಲಾವಣಿ ಕೊಡಲಿಕ್ಕೂ ಹಿಂಜರಿಯುವನು. ಆದರೆ ತನ್ನ ಕೈಯಿಂದ ಕೆಲಸ ಆಗದು, ಮಗ ಮಾಸ್ತರನಾದ, ಹೀಗಾಗಿ ತನ್ನ ಅಡವಿಯನ್ನು ಅನಿವಾರ್ಯವಾಗಿ ಅನ್ಯರ ಸ್ವಾಧೀನ ಮಾಡಲು ಮನಸ್ಸು ಮಾಡಿದ ಜೀವಿಯದು. ಈಗಿನ ಹುಡುಗರಿಗೆ-ಅದರಲ್ಲಿ ಬಾಬಣ್ಣನಿಗೆ–ಅಂತೂ ಭೂಮಿ ತಾಯಿಯಲ್ಲಿ ನಿಷ್ಠೆಯೇ ಇಲ್ಲವೆಂಬುದು ಅವನ ನಂಬಿಗೆ. ಅದರಿಂದ ಆತ ಹೊಲ ಹಚ್ಚಿದ್ದರೂ ದಿನ ಬಿಟ್ಟು ದಿನಕ್ಕೊಮ್ಮೆ ಹೋಗಿ ಬರುತ್ತಲೇ ಇದ್ದ.

ಹೊಲ ಬಿತ್ತುವ ದಿನ ಚಂದ್ರವ್ವನೂ ಅವಳ ಗಂಡನೂ ಸ್ವತಃ ಹೊಲಕ್ಕೆ ಬಂದರೆಂದು ತಿಳಿದು, ಬಸಿರು ಹೆಂಗಸಾದರೂ ಪದ್ಮಾವತಿಯೂ ಹೊಲಕ್ಕೆ ಹೋಗಬೇಕಾಯಿತು. ತನ್ನ ಗಂಡನ ಸ್ವಭಾವ ಬೇರೆ, ಆ ಮುದುಕನ ಸ್ವಭಾವ ಬೇರೆ. ಎರಡೂ ಒಂದಕ್ಕೊಂದು ಹೊಂದವು. ಸುಮ್ಮನೆ ಯಾತಕ್ಕಾದರೂ ವಾದ ಹೂಡಿಕೊಂಡು ಕೂಡಬಹುದು. ತಾನು ಮುಂದಾಗಿ ಹೊಲ ಮಾಡಿದವಳಾಗಿದ್ದಾಳೆ. ಕೆಡಕುತನ ತಮ್ಮ ಪಾಲಿಗೆ ತಕ್ಕೊಳ್ಳಬಾರದು, ಎಂದುಕೊಂಡು ಪದ್ಮಾವತಿಯು ಚಳಿಮಳೆಯಲ್ಲಿ ಮಕ್ಕಳನ್ನು ಸಂಗಡ ಕರೆದುಕೊಂಡು ಹೊಲಕ್ಕೆ ಬಂದಳು.

ಚಂದ್ರವ್ವ ಪದ್ಮಾವತಿಯ ತಾಪವನ್ನು ಕಂಡು, ಅಕ್ಕರೆಯಿಂದ ಅಂದಳು,—

"ಬಸಿರು ಹೆಂಗಸಾಗಿ ನೀ ಯಾಕೆ ಬರತಿದ್ದೀ ಹೊಲಕೆ ?"

"ಅಕ್ಕಡಿ ಹಾಕಲಿಕ್ಕೆ ಬೇಕಾದೀತು ಅಂತ ಬಂದೆ."

"ನಾ ಇದ್ದೆನಲ್ಲ !"

"ಮುದಕಿಯರಾಗಿ ನೀವು ಹಾಕುವದಂತ, ನಾವು ಮನೆಯೊಳಗೆ ಕೂಡಬೇಕು ?" ಎಂದು ಪದ್ಮಾವತಿ ಕೇಳಿದಳು.

" ತೊಗರಿ ಅಕ್ಕಡಿ ಎಂದರ ಹಾಕಿದಿ ಏನಬೇ ಪದು ? " ಚಂದ್ರವ್ವನ ಗಂಡ ನಡುವೆಯೇ ಕೇಳಿದ.

" ಹಾಕದ ಏನುಃ "

ಪದ್ಮಾವತಿಯು ಮಾತನ್ನು ನಡುವೆಯೇ ತಡೆದು, ಚಂದ್ರವ್ವ ಗಂಡನಿಗೆ ಹೇಳಿದಳು ದನಿ ಸ್ವಲ್ಪ ಬಿರುಸಾಗಿದ್ದಿತು.

" ಆಕೆಯೂ ಏನು ಹಾರುವರು ಬಣಜಿಗರ ಹೆಂಗಸಂತ ತಿಳಿದಿರೋ ಏನು ನೀವು ? ಆಕೆಯೂ ಹೊಲ ಮಾಡಿದಾಳು, ಬಿತ್ತಿದಾಳು, ಅಕ್ಕಡಿ ಹಾಕಿದಾಳು. " ಪದ್ಮಾವತಿಯು ಕಡೆಗೆ ತಿರುಗಿ, ಗಂಡನ ಬೆನ್ನ ಹಿಂದೆ ಅವನಿಗೆ ಕಾಣಿಸದಂತೆ " ಅವರ ಸ್ವಭಾವವೇ ಹಾಗೆ. ನೀ ಏನ ಮನಸಿಗೆ ಹಚ್ಚಿಕೊಳ್ಳಬೇಡ." ಎಂದು ಹೇಳಿದಳು.

" ಹುಚ್ಚವ್ವ ! ನಾ ಯಾತಕ್ಕ ಮನಸ್ಸಿಗೆ ಹಚ್ಚಿಕೊಳ್ಳಲಿ. ನನಗೊಬ್ಬ ಹಡೆದವರು ಇದ್ದಂತೆ ಅವರು. " ಎಂದಳು ಪದ್ಮಾವತಿ.

ಅಂದರೂ ಚಂದ್ರವ್ವ ಮತ್ತೆ ಮಾತನ್ನು ಕಳ್ಳದನಿಯಲ್ಲಿ ಮುಂದುವರಿಸಿದಳು:

"ಯಾವಾಗಲೂ ಅಕ್ಕಡಿ ಹಾಕಲಿಕ್ಕೆ ನಾನೇ ಬೇಕು ಅವರಿಗೆ. ಬಿತ್ತಲಿಕ್ಕಂತೂ ಇನ್ನೂ ಚಡ್ಡಿ ಯಾರ ಕೈಯೊಳಗೂ ಕೊಟ್ಟಿಲ್ಲ ಅವರು. ಒಮ್ಮೆ ಎಂಥಾ ಥಂಡಿ ಉರಿ ಬಂದಿದ್ದು, ಬೆಳತನಕ ನೆರಳಿದರು. ಆದರೆ ಮುಂಜಾನೆ ಬಿತ್ತಲಿಕ್ಕೆಂದರೆ ಎದ್ದ ಹೊಲಕ್ಕ ಬಂದರಃ...."

" ಹಾಗೆ ಮಾಡಿದಾಗಲೇ ಇಷ್ಟೆಲ್ಲ ಗಳಿಸಿದಿರಿ ಅಲ್ಲ ? ಮನೆ ಕಟ್ಟದಿರಿ. ಹೊಲ ಕೊಂಡಿರಿ. "

ಪದ್ಮಾವತಿ ಹೀಗೆ ಸಹಜ ಹೇಳಿದಳು. ಆ ಸಂಗತಿ ನಿಜವಾಗಿಯೂ ಇತ್ತು. ಆದರೂ ಚಂದ್ರವ್ವ ಪದ್ಮಾವತಿಯು ನೊಂದ ಹೃದಯವನ್ನು ಶಾಂತಗೊಳಿಸುವ ದೃಷ್ಟಿಯಿಂದ ಮತ್ತೆ ಮಾತನಾಡಿದಳು:

" ಕೂಡುವ ಕಾಲಕ್ಕೆ ಯಾವ ಕಡೆಯಿಂದಾದರೂ ಬಂದ ಕೂಡತದ. ನಾವು ಮಾಡಿದೆವು ಅನ್ನೋದು ಹುಚ್ಚತನ. ಮೇಲೆ ಕುಳಿತ ಮಾಡಿಸುವವನೊಬ್ಬ ಬೇರೆಯೇ ಇದ್ದಾನ. "

" ಆಯ್ತು, ನಾವು ಮಾಡೋದನ್ನೂ ಎಚ್ಚರದಿಂದ ಮಾಡಬೇಕಲ್ಲ ? ಅದಕ್ಕೇ ನಾನೂ ಹೊಲಕ್ಕ ಬಂದೆ. ನಮ್ಮವರ ಸ್ವಭಾವ ಅಂಥದು. ನಿಮ್ಮವರು ಇಂಥವರು ಅಂದಕೊಂಡು ಕೂಸುಗಳನ್ನು ಕರೆದುಕೊಂಡು ಮಳೆ ಗಾಳಯೊಳಗ ಬಂದೆ. ಇಲ್ಲಾದರೆ ಏತಕ್ಕೆ ಬರಲಿ ? " ಎಂದು ನಿಜವಾದ ಸಂಗತಿಯನ್ನು ಪದ್ಮಾವತಿ ವಿವರಿಸಿದಳು.

ಹೀಗೆ ಎರಡೂ ಮನೆತನಗಳ ಹೆಂಗಸರ ಸೂತ್ರದ ಪ್ರಕಾರ ಅವರ ವ್ಯವಹಾರ ಮುಂದುವರಿಯಿತು. ಎರಡು ವಿಭಿನ್ನ ಸ್ವಭಾವದ ವ್ಯಕ್ತಿಗಳನ್ನು ಒತ್ತಟ್ಟಿಗೆ ಸೇರಿಸಿದಂತಾಗಿದ್ದಿತು. ಮಾಸ್ತರರ ತಂದೆ ಸ್ವಲ್ಪ ಏನಾದರೂ ಅಂದರೆ ಬಾಬಣ್ಣಾ ಸಿಟಿದು, ಸಿಡಿದು ಮೂರು ಮೊಳ ದೂರ ಹಾರುವನು. ಬಾಬಣ್ಣಾ ಹೊಲದಲ್ಲಿ ಎಡೆ ಹೊಡೆಯಲಿಕ್ಕೂ ಕಸ ತೆಗೆಯಲಿಕ್ಕೂ ನಾಲ್ಕು ದಿನ ತಡ ಮಾಡಿದರೂ ಈತ ಜಗಳ ಹೂಡುವನು. ಅವನಿಗೆ ಹೊಲದ ಕೆಲಸಗಳೆಲ್ಲ ವೇಳೆಗೆ ಸರಿಯಾಗಿ ಆಗಲಿಕ್ಕೇಬೇಕು. ಹೀಗೆಂದು ತನ್ನ ಇಚ್ಛೆಯನ್ನು ಆತ ಪ್ರದರ್ಶಿಸಿದಾಗ ಬಾಬಣ್ಣಾ ಅನ್ನುವ :

" ಪ್ರತಿಯೊಂದು ಗಳಿಗೆಗೂ ಹೀಗೆ ಅನ್ನ ಹತ್ತಿದರೆ ಹೇಗೆ ? ನಾವು ಬರೇ ನಿಮ್ಮ ಹೊಲದ ಕೆಲಸದ ಮೇಲೆಯೇ ಇಲ್ಲ. ನಮಗೂ ಹೊಟ್ಟೆಯಿದೆ, ನೆತ್ತಿಯಿದೆ. "

ಬಾಬಣ್ಣಾ ಹೇಳುವುದೂ ನಿಜವಾಗಿತ್ತು. ಅವನು ಮನೆಯ ಖರ್ಚಿಗಾಗಿ ನಡುನಡುವೆ ಎತ್ತನ್ನು ತಕ್ಕೊಂಡು, ಎರಡನೆಯವರಲ್ಲಿಯೂ ಕೆಲಸಕ್ಕೆ ಹೋಗಬೇಕಾಗುತ್ತಿದ್ದಿತು. ಬಾಡಿಗೆ ಕೂಲಿಗಳನ್ನು ಮಾಡಿಕೊಂಡು, ನಡುವೆ ಉಳಿದ ವೇಳೆಯಲ್ಲಿ ಮಾಸ್ತರರ ಹೊಲದ ಕೆಲಸವನ್ನು ಮಾಡುತ್ತಿದ್ದನು. ಹೀಗೆ ಬಾಳಿದಾಗಲೇ ಅವನ ಉಪಜೀವನ ಸಾಗುವುದು.

ಇದನ್ನೆಲ್ಲ ಮಾಸ್ತರ ಆದಪ್ಪನು ಅರಿತಿದ್ದ. ಅಂತಲೇ ಬಾಬಣ್ಣಾ ನಿರಾಶನಾದ ಸಂದರ್ಭದಲ್ಲೆಲ್ಲ ಅವನೇ ಸಮಾಧಾನ ಹೇಳುವನು.

" ಏನೂ ಹೆದರಬೇಡ ಬಾಬು. ಐದ ಕೂರಿಗೆ ಅಡವಿಯೊಳಗೆ ನನ್ನ ನಿನ್ನ ಮನೆತನಗಳೆರಡೂ ಬದುಕುವವೋ ಇಲ್ಲೋ ? "

" ಒದುಕುವಲ್ಲವೇನ್ರಿ ! "

" ತೀರಿತು. ನೀನೊಬ್ಬ ನನಗೆ ಅಣ್ಣನಿದ್ದಂತೆ. ನೀ ಅಡವೀ ಕೆಲಸ ಮಾಡು, ನಾನು ಮಾಸ್ತರಿಕೆ ಮಾಡುವೆ. ಇಬ್ಬರೂ ಕೂಡಿ ಮನೆತನ ನಡೆಯಿಸಿದರಾಯಿತು. ನನ್ನ ಮನೆ ಏನು ಬೇರೆ ಅಲ್ಲ, ನಿನ್ನ ಮನೆ ಏನು ಬೇರೆಯಲ್ಲ. ಆಯ್ತಿಲ್ಲೋ ? "

ಎಂದು ಆದಪ್ಪ ಮಾಸ್ತರರು ನುಡಿಯುವರು. ನಿಜವಾಗಿಯೂ ಅವರ ಹೃದಯ ಬಾಬಣ್ಣನ ಸಲುವಾಗಿ ಸಹಾನುಭೂತಿಯಿಂದ ತುಂಬಿದ್ದಿತು. ಹೇಗಾದರೂ ಮಾಡಿ ತನ್ನ ಕೈಯಿಂದ ಆದಷ್ಟು ನೆರವಾಗಬೇಕೆಂದು ಅವರ ಬಯಕೆ. ಅವನ ಹೊಲಗಳು ಬಿಟ್ಟು ಬಂದು, ಆತ ಮೊದಲಿನ ಸ್ಥಿತಿಗೆ ಬಂದ ಮೇಲೆ ಹೇಗಾದರೂ ಸಾಗಿಸಿಕೊಂಡು ಹೋಗಬಹುದು. ಇಂಥವರಿಗೆ ತಿಳಿದವರಾದ ನಾವೇ ಸಹಾಯ ಮಾಡದಿದ್ದರೆ ಯಾರು ಮಾಡಬೇಕೆಂದು ಅವರ ಭಾವನೆ ಅದಕ್ಕಂತಲೇ ಅವರು ಆಗಾಗ ಹಾಗೆ ಹೇಳುವರು.

" ನೀವು ಇಷ್ಟು ಕೈ ಹಿಡಿದರೆ ಸಾಕು. ನಾನೂ ಸುಧಾರಿಸಿಕೋತೇನಿ. ನನ್ನ ಹೊಲಗಳು ಬಿಟ್ಟು ಬರುವುದೇ ತಡ, ಇದೆಲ್ಲ ಸಿಸ್ತು ಕೂಡತದ. "

ಎಂದು ಬಾಬಣ್ಣನೂ ಹೇಳುವನು.

ಅವನಿಗೆ ಇಷ್ಟರಲ್ಲಿಯೇ ತನ್ನ ಹೊಲಗಳು ತಿರುಗಿ ಸಿಗಬೇಕೆಂದು ನಿರೀಕ್ಷಣೆ ಇತ್ತು. ಅರ್ಜಿಗಳನ್ನು ಹಾಕುವಾಗಂತೂ ಬಿತ್ತಿಗೆ ಬರುವಷ್ಟರಲ್ಲಿ ಜಮೀನುಗಳನ್ನು ಸರಕಾರ ತನ್ನ ಸ್ವಾಧೀನ ಕೊಡಿಸುವುದೆಂದು ಆತ ನಂಬಿದ್ದ. ಅದರಿಂದ ಯಾರ ಹೊಲಗಳನ್ನು ಮಾಡುವ ಗೊಡವೆಗೂ ಆತ ಹೋಗಿರಲಿಲ್ಲ. ಪದ್ಮಾವತಿಯ ಪ್ರಯತ್ನ ಒಳಗಿಂದೊಳಗೇ ಇರದಿದ್ದರೆ ಈ ಸಲ ಬಾಬಣ್ಣ ಆ ಆರೇಳು ನೂರು ರೂಪಾಯಿಗಳನ್ನು ಮನೆಗೆ ವೆಚ್ಚ ಮಾಡಬೇಕಾಗುತ್ತಿದ್ದಿತು. ತಿರುಗಿ ಸುಗ್ಗಿ ಬಂದರೂ ಇನ್ನೂ ಹೊಲಗಳ ಸುದ್ದಿಯಿರಲಿಲ್ಲ. ಆಗ ಬೇಸತ್ತು ಬಾಬಣ್ಣ ಮೇಲಿಂದ ಮೇಲೆ ಹೆಂಡತಿಗೆ ಅನ್ನುವನು:

" ಸರಕಾರ ಸಾಲಗಾರರನ್ನ ಉಳಿಸಲಿಕ್ಕೆ ಈ ಕಾಯಿದೆ ಮಾಡ್ಯಾರಂತ. ಒಕ್ಕಲಿಗರೆಲ್ಲ ಸತ್ತ ಮೇಲೆ ಉಳಿಸುವರೋ ಏನೋ ! "

" ಸರಕಾರಿ ಕೆಲಸ ಯಾವಾಗ ಆದರೂ ಹೀಗೇ ಅಲ್ಲ " ಎಂದು ಪದ್ಮಾವತಿ ಸುಮ್ಮನಾಗುವಳು.

ಆದರೂ ಈಗೀಗ ಊರಲ್ಲಿ ಒಬ್ಬರಿಗೋ ಇಬ್ಬರಿಗೋ ನೋಟೀಸುಗಳು ಬಂದಿದ್ದುವು. ಊರಲ್ಲಿಯೇ ಇರುವವನಾದ ತಾತಪ್ಪ ಇದನ್ನು ಅರಿತು ಕೊಂಡು ದಿನಾಲು ಊಟಕ್ಕೆ ಬಂದಾಗ ಮನೆಯಲ್ಲಿ ತಾಲೂಕ ಕಚೇರಿಯಿಂದ ತಮಗೇನಾದರೂ ಕಾಗದಗಳು ಬಂದಿವೆ ಏನೆಂದು ಕೇಳುವನು. ಏನಿಲ್ಲವೆಂದು ತಿಳಿಯಲು ಅಸಮಾಧಾನ ಹೊಂದಿ ಹೋಗುವನು. ಈಗ ಆತ ಮೊದಲಿ ನಂತೆ ಮತ್ತೆ ಗಂಗವ್ವನ ಮನೆ, ದನಗಳ ನಂತೆ, ಇವುಗಳಲ್ಲಿ ತೊಡಗಿದ್ದಾನೆ.

ಸುಗ್ಗಿ ಸಮೀಪಿಸಿತು. ಬಾಬಣ್ಣನ ಮನೆತನದ ಸ್ಥಿತಿಯಂತೂ ತೀರ ಕೆಡುತ್ತ ಬಂತು. ಮನೆಯೊಳಗಿನ ಕಾಳು ಕಡಿಗಳೆಲ್ಲ ತೀರಿದುವು. ಅವನು ಎಷ್ಟು ದುಡಿದು ತಂದರೂ ಆರು ಜನರ ಹೊಟ್ಟೆ ತುಂಬಿಸುವುದು ಕಠಿಣತರ ವಾಯಿತು. ಮಾಸ್ತರರ ಹತ್ತರಿದ್ದ ತನ್ನ ಹಣ ಬೇಡಿ ತರಬೇಕೆಂದರೆ ಅದಕ್ಕೆ ಪದ್ಮಾವತಿಯ ಒಪ್ಪಿಗೆ ಇಲ್ಲ. ತಾನು ದುಡಿಯಲು ಹೋಗುವದಿಲ್ಲ. ಬಸಿ ರಾಗಿ ಮನೆಯಲ್ಲಿ ಕುಳಿತಿದ್ದಾಳೆ. ನನಗೊಬ್ಬನಿಗೇ ಎಲ್ಲ ಕಡೆಗೂ ಜೀವ ಕೊಡು ಅನ್ನುವಳು. ಹೇಗಾಗಬೇಕು ? ಎಂದು ಹೆಂಡತಿಯ ಮೇಲೆ ಕೆರಳು ವನು.

ಏನು ಮಾಡಿದರೂ ಪದ್ಮಾವತಿಯು ಹೊಲ ಮಾರಿ ಬಂದ ದುಡ್ಡಿನಲ್ಲಿ ಒಂದು ಪೈಯನ್ನೂ ಪ್ರಪಂಚಕ್ಕೆ ಉಪಯೋಗಿಸಿಕೊಳ್ಳಲು ಸಿದ್ಧಳಿರಲಿಲ್ಲ. ಬಾಬಣ್ಣ ಒಳಗೊಳಗೇ ಸಿಟ್ಟಾದ. ಎರಡು ದಿನ ಹೆಂಡತಿಯ ಮೇಲೆ ಸಿಡಿ ಮಿಡಿಗೊಂಡ. ಗಂಡನ ವರ್ತನೆಯನ್ನು ಖಂಡಿಸಿಯೇ ಪದ್ಮಾವತಿ ನುಡಿ ದಳು.

" ದೊಡ್ಡ ಹುಡುಗ ಹೇಗಾದರೂ ಹೊಲದೊಳಗ ಹಕ್ಕೀ ಕಾಯಲಿಕ್ಕೆ ಹೋಗತದ ನಿಮದೇನು ಕೆಲಸ ಅದ ? ನಿಯಮಿತವಾಗಿ ಯಾರಲ್ಲಿ ಯಾದರೂ ಹೋದರೆ ಆಗುವದಿಲ್ಲವೇನು ? ಆ ದುಡ್ಡ ಅಷ್ಟ ನಿಮ್ಮ ಕಣ್ಣೊ ಳಗ ಚುಚ್ಚಲಿಕ್ಕೆ ಹತ್ತಿರುವವು ಕಾಣ್ತದ ? "

" ಇಂಥಾ ಹೊತ್ತಿಗೆ ಅಲ್ಲದೆ ಏನು ಮಾಡುವವವು ? "

" ಹೊತ್ತ ಹೊತ್ತ ಅನಲಿಕ್ಕೆ ಅಂಥದೇನು ಬಂದದ ? ಹರಿಶ್ಚಂದ್ರ ರಾಜನ ಹಾಗೇನ ಊರೂರ ತಿರಗಬೇಕಾಗಿಲ್ಲ ಏನಿಲ್ಲ. ಯಾರ ನಾಲ ಕೊಡಂತ ಬೆನ್ನೂ ಹತ್ತಿಲ್ಲ. ದುಡಿಯುವುದದ, ತಿನ್ನುವುದದ. ಇದರೊಳಗೇನು?"

" ಊರೂರ ತಿರಗುವುದನ್ನಷ್ಟ ಬೇಡಿಕೋ ದೇವರ ಹತ್ತರ. "

ಕೆರಳಿ ಬಾಬಣ್ಣ ನುಡಿಯುವನು. ಆದರೂ ಪದ್ಮಾವತಿ ಯಾವುದಕ್ಕೂ ಸೊಪ್ಪು ಹಾಕಲಿಲ್ಲ. ಅವನು ದುಡಿದು ತಂದಷ್ಟರಲ್ಲಿಯೇ ಅಡಿಗೆ ಮಾಡಿ ಎಲ್ಲರಿಗೂ ಹರಿದು ಹಂಚಿ ಹಾಕುವಳು. ಇದನ್ನು ತಾತಪ್ಪನೂ ಅರಿತಿದ್ದ. ಮನೆಗೆ ಏನಾದರೂ ತಂದು ಕೊಡುವಂತಹ ಆರ್ಥಿಕ ಸ್ಥಿತಿಯೂ ಅವನದಿರ ಲಿಲ್ಲ. ಇವರಿಗೆ ಏನಾದರೂ ನೆರವಾಗಬೇಕೆಂದು ಅವನ ಮನಸ್ಸಿನಲ್ಲಿದ್ದರೆ ಊಟಕ್ಕೆ ಬರುವದನ್ನು ಬಿಡುವುದೊಂದೇ ಆಗಿದ್ದಿತು. ಸಮಯ ನೋಡಿ ಕೊಂಡು ಅದನ್ನೂ ಆತ ಮಾಡುತ್ತಿದ್ದ. ಅಲ್ಲಿಯೇ ಗಂಗವ್ವನ ಮನೆ ಯಲ್ಲಿಯೇ ಏನಾದರೂ ನೆಪ ಮಾಡಿ ಊಟ ಮಾಡುವನು. ಕೆಲಸವಿಲ್ಲದಿದ್ದರೂ ಅವರ ಹೊಲದ ಕಡೆಗೆ ಹೋಗುವ. ಸುಂದರಿ ತಂದೆಯ ರೊಟ್ಟಿಯನ್ನು ತರಲು ಅಲ್ಲಿಯೇ ಉಂಡು ಸಂಜೆಯವರೆಗೆ ಕಾಲ ಕಳೆಯುವನು. ಇದನ್ನೆಲ್ಲ ಮಾಡಬೇಕಾದರೂ ತಾತಪ್ಪನ ಮನಸ್ಸು ಮುದುರಿಕೊಂಡೇ ಇರುವುದು. ಅಭಿಮಾನಿಯಾದ ಆ ಜೀವ ತನಗೆ ಇಂಥ ಸ್ಥಿತಿ ಬರಬಾರದಾಗಿತ್ತೆಂದು ಭಾವಿ ಸುವದು.

ತಾತಪ್ಪ ಗಂಗವ್ವನ ಮನೆಯಲ್ಲಿ ಊಟ ಮಾಡುವುದರಿಂದ ಅವಳಿ ಗೇನೂ ಕೊರತೆ ಇರಲಿಲ್ಲ. ಅವನೊಬ್ಬ ಮನೆಯವನಂತೆಯೇ ಅವರೆಲ್ಲ ರಿಗೆ ಅನಿಸಿದ್ದ. ಮೇಲಾಗಿ ಮೊದಮೊದಲು ಅವನಿಂದ ಎಷ್ಟೋ ಲಾಭ ವನ್ನು ಆ ಮನೆತನ ಹೊಂದಿತ್ತು. ಈಗ ತಾತಪ್ಪ ಹೀಗಿರುವುದರಿಂದ ಅವಳಿಗೆ ಸಮಾಧಾನವೇ ಇತ್ತು. ಪಕ್ಕ ಕಳಚಿದ ಪಕ್ಕಿ ಎಂದು ಅವಳಿಗೆ ಸಂತೋಷ ವಾಗಿತ್ತು.

ಸೋದರ ಮಾವನು ಊಟಕ್ಕೆ ಬರದಿದ್ದರೂ ಕೂಡ ಬಾಬಣ್ಣನಿಗೆ ತನ್ನ ಮನೆತನದ ಭಾರ ನೀಗಿಸುವುದು ಕಷ್ಟಕರವೇ ಆಗಿದ್ದಿತು. ಸುಗ್ಗಿಯ ದಿನ ಹೆಂಡತಿಯು ಹಡೆದು ಮನೆಯಲ್ಲಿ ಕುಳಿತಳು. ಮನೆಯಲ್ಲಿ ಇನ್ನೊಂದು ಜೀವ ಹೆಚ್ಚಾಯಿತು. ಗಂಡುಮಗುವಾದರೂ ಯಾರಿಗೂ ಸಂತೋಷ ತರ ಲಿಲ್ಲವದು. ಪದ್ಮಾವತಿಯಂತೂ ಮೇಲಿಂದ ಮೇಲೆ ಅನ್ನುವಳು:

" ಊರಲ್ಲಿ ಇನ್ನೊಬ್ಬ ಗುದ್ದಲಿ ಗೆಣೆಯ ಹುಟ್ಟಿದನಾಯ್ತು. "

" ಅವರ ದೈವದೊಳಗೆ ಏನು ಬರೆದದೆ ಯಾರಿಗೆ ಗೊತ್ತು ? "

ಬಾಬಣ್ಣ ಹೆಂಡತಿಗೆ ಸಮಾಧಾನ ಹೇಳುವನು.

"ಮಕ್ಕಳ ದೈವ ದೇವರೇನು ಒರೆಯುವನು? ಹಡೆದವರೇ ಬರೆಯುವವರಲ್ಲ?"

"ನಾವೂ ಬರದೇವಲ್ಲ."

ಎಂದು ಬಾಬಣ್ಣ ಆಶೆಯನ್ನು ಪ್ರದರ್ಶಿಸುವ. ಆದರೂ ಅವನ ಕರ್ತೃತ್ವ ಶಕ್ತಿಯೆಲ್ಲ ಕುಂಠಿತವಾದಂತಾಗಿದ್ದಿತು. ಮನೆಯಲ್ಲಿ ಮರುದಿನ ಬೀಸಲಿಕ್ಕೆ ಜೋಳವಿಲ್ಲ. ಬಾಣಂತಿಯಾದ ಪದ್ಮಾವತಿಯು ಈ ಸಲ ಅಕ್ಕಿಯನ್ನೂ ಕೂಡ ಕಾಣಲಿಲ್ಲ. ಬಾಬಣ್ಣ ತರುವೆನೆನ್ನುವ ಗೊಡವೆಗೂ ಹೋಗಲಿಲ್ಲ. ಅವಳೇ ಹಣ ವೆಚ್ಚಮಾಡಲು ಬೇಡನ್ನುವಳು. ಅಂದ ಮೇಲೆ ಎಲ್ಲಿಂದ ಬರಬೇಕು? ನುಚ್ಚು ತಿನ್ನಲಿ, ಎಂದು ಸುಮ್ಮನಿದ್ದ. ಈಗ ಅದಕ್ಕೂ ಚಕ್ರ ಬಂದಿತು. ಈಗ ಗತಿಗಾಣದೆ ಪದ್ಮಾವತಿಯೇ ಹೇಳಬೇಕಾಯಿತು.

"ನಾನಂತೂ ಹಡೆದ ಮನೆಯೊಳಗೆ ಕೂತೆ. ನೀವು ಮನೆಯೊಳಗ ಏನದ, ಏನಿಲ್ಲ ಅಂಬುದನ್ನೂ ನೋಡುವದಿಲ್ಲ. ಏನು ಹೇಳಬೇಕು ನಿಮಗೆ ನಾನು?"

"ಏನು ಮಾಡಲಿ ಹಾಗಾದರೆ?"

"ಚಂದ್ರವ್ವನ ಹತ್ತರ ಹೋಗಿ, ನಾ ಹೇಳಿದೇನಂತ ಹೇಳಿ ಎಂಟು ಮಣ ಜೋಳವನ್ನಾದರೂ ಕಡ ಇಸಿದುಕೊಂಡು ಬನ್ನಿರಿ ನಾಳೆ ಅವರ ಹೊಲದಲ್ಲಿಯೇ ರಾಶೀ ಮಾಡಿಕೊಟ್ಟೇರಂತೆ."

ಪದ್ಮಾವತಿ ಇಷ್ಟು ಹೇಳಿದರೂ ಬಾಬಣ್ಣ ಆ ದಿನ ಚಂದ್ರವ್ವನ ಮನೆಗೆ ಹೋಗಿ ಜೋಳ ತರಲಿಲ್ಲ. ಮತ್ತೇನೂ ವ್ಯವಸ್ಥೆಯನ್ನೂ ಮಾಡಲಿಲ್ಲ ತಿರುಗಿ ಪದ್ಮಾವತಿಯೂ ಪತಿಗೆ ಆ ವಿಷಯಕ್ಕೆ ಉಪದ್ರವ ಕೊಡಲಿಲ್ಲ. ಏನು ಮಾಡುವರು ಮಾಡಲಿ, ಎಂದು ಸುಮ್ಮನಾದಳು.

ಮರುದಿನ ಮುಂಜಾನೆ ಇನ್ನೂ ಪದ್ಮಾವತಿ ಹಾಸಿಗೆಯಲ್ಲಿರುವಷ್ಟರಲ್ಲಿಯೇ ಬಾಬಣ್ಣ ಹೊಲಕ್ಕೆ ಹೋಗಿ ಒಂದು ಸಿವುಡು ತೆನೆಗಣಿಕೆ ತಕ್ಕೊಂಡು ಬಂದ. ಹಿತ್ತಲಲ್ಲಿ ಹೋಗಿ ತೆನೆ ಸೋಸಿದ. ಮೇವನ್ನು ಕಡಿದು ಎತ್ತಿನ ಮುಂದೆ ಹಾಕಿದ. ಹಾಗೆಯೇ ಕಂಬಳಿಯಲ್ಲಿ ತೆನೆಗಳನ್ನು ಹಾಕಿ ಕಟ್ಟಿಗೆಯಿಂದ ತನ್ನ ಹಿರಿಯ ಮಗನನ್ನು ಕರೆದುಕೊಂಡು ಸೀತೆನಿ ಬಡಿಯುವಂತೆ

ಬಡಿದು ಕಾಳು ತೆಗೆದುಕೊಂಡ. ಉಳಿದ ಗೊಳ್ಳನ್ನೂ ಎತ್ತಿನ ಮುಂದೆ ಇಟ್ಟ. ಆಮೇಲೆ ಆ ಜೋಳವನ್ನು ನೆರೆಮನೆಯ ಹೆಂಗಸೊಬ್ಬಳ ಹತ್ತರ ಒಯ್ದು ಬೀಸಿ ತಂದು ಪದ್ಮಾವತಿಯ ಮುಂದೆ ಇಟ್ಟ. ಮನೆಯಲ್ಲಿ ಈ ಸಂಗತಿಯನ್ನು ತಾಯಿಗೆ ಹೇಳದಂತೆ ಮಗನಿಗೂ ಕಟ್ಟಪ್ಪಣೆ ಮಾಡಿದ.

ಪದ್ಮಾವತಿಯು ಬಾಣಂತಿಯಾದುದರಿಂದ ಇನ್ನೂ ಬೀಸುವ ಕಲ್ಲಿನ ಮುಂದೆ ಕೂಡುತ್ತಿರಲಿಲ್ಲ. ಯಾವ ಕಾಳುಗಳನ್ನಾದರೂ ಅನ್ಯರ ಹತ್ತರ ಬೀಸಿ ತರಿಸುತ್ತಿದ್ದಳು. ಇಂದು ಹಿಟ್ಟೇ ಸಜ್ಜಾಗಿ ಮುಂದೆ ಬಂದಿತು. ಕುಳಿತು ಅಡಿಗೆ ಮಾಡಿದಳು. ಗಂಡನೊಡನಿರುವ ಬಿಗುವಿನಲ್ಲಿ ಎಲ್ಲಿಂದ ತಂದರೆಂಬುದನ್ನೂ ಅವಳು ವಿಚಾರಿಸಲಿಲ್ಲ. ಅವರು ತರುವವರು, ತಾನು ಮಾಡಿ ಹಾಕುವಳು ಎಂದಿಷ್ಟೇ ಅವಳು ಅಂದು ನಂಬಿದ್ದಳು.

ಹೀಗೆಯೇ ಎರಡು ಮೂರು ದಿನ ಸಾಗಿತು. ಆಮೇಲೆ ಪದ್ಮಾವತಿಗೆ ಇವು ಹೊಸ ಜೋಳವೆಂಬುದು ಲಕ್ಷ್ಯಕ್ಕೆ ಬಂದಿತು. ತಾನಂತೂ ರೊಟ್ಟಿಯನ್ನೇ ತಿನ್ನುತ್ತಿರಲಿಲ್ಲ. ಹಿಂದಕ್ಕೆ ಒಡೆದ ನುಚ್ಚು ಮನೆಯಲ್ಲಿ ಇದ್ದಿತು. ಹುಡುಗರಿಗೂ ಗಂಡನಿಗೂ ಅವರು ತಂದ ಹಿಟ್ಟನಿಂದ ರೊಟ್ಟಿ ಮಾಡಿ ಹಾಕುವಳು. ಆದರಿಂದ ಅವಳಿಗೆ ಕೂಡಲೆ ಈ ವಿಷಯ ಹೊಳೆಯಲಿಲ್ಲ. ಒಂದು ದಿನ ಮಗನಿಗೆ ಸಹಜ ಕೇಳಿದಳು,—

"ಇಷ್ಟ ಲಗೂನೆ ರಾಶಿ ಯಾರದು ಆಯಿತೊ?"

ಹುಡುಗ ಸುಮ್ಮನಾದ. ತಾಯಿಗೆ ಏನು ಹೇಳಬೇಕೆಂಬುದು ಅವನಿಗೆ ಹೊಳೆಯಲಿಲ್ಲ. ಇದನ್ನರಿತು ಕೊಟ್ಟಿಗೆಯಲ್ಲಿದ್ದ ಬಾಬಣ್ಣ ಚಟ್ಟನೆ ಒಳಗೆ ಬಂದು ಹೆಂಡತಿಗೆ ಹೇಳಿದ,—

"ಆಜೆಯ ಮನೆಯ ಸಕ್ಕವ್ವ ಗೂಡಿಗೆ ಹೋಗುವಳು. ಅವಳಲ್ಲಿಂದ ಜೋಳ ತಕ್ಕೊಂಡು ಬೀಸಿ ತರತೇವೆ."

ಇದ್ದಿರಬಹುದು ಎಂದು ಪದ್ಮಾವತಿ ಅಷ್ಟಕ್ಕೇ ಸುಮ್ಮನಾದಳು ಆದರೂ ಬೇರೆ ವಿಷಯಕ್ಕೆ ಮಾತನ್ನೆತ್ತಿದಳು.

"ನಮ್ಮ ಹೊಲದೊಳಗಿನ ಜೋಳ ಕೊಯ್ಯಲಿಕ್ಕೆ ಬಂದಿದ್ದರೆ ನೋಡಿ ಬಂದು, ಮುಹೂರ್ತ ನೋಡಿ ನೀವೂ ಕೊಯ್ಯಿರಿ ಅಲ್ಲ"

" ನೋಡತೇನಿ. ಇನ್ನೂ ಆ ಮಹಾರಾಯ ಒಬ್ಬ ಒಪ್ಪಿಗೆ ಕೊಡ ಬೇಕಲ್ಲ. " ಬಾಬಣ್ಣ ಬೇಸರದಿಂದ ನುಡಿದ.

" ಒಪ್ಪಿಗೆ ಕೊಡಲಿಕ್ಕೇನು ? ಒಂದು ದಿವಸ ಹೋಗಿ ಹೇಳುವುದು. ಬೇಕಾದರೆ ಅವರು ಬಂದು ಒಡ್ಡಿನ ಮೇಲೆ ಹೊಲದೊಳಗೆ ಕೂಡತಾರೆ. ನೀವು ಕೊಯ್ಯಲಿಕ್ಕೆ ಆರಂಭಮಾಡಿದರಾಯಿತು ಇದರೊಳಗೆ ಏನು ಅದೆ ? ಅವರ ಹೊಲ ಅವರ ಮಾತು. ನಾವು ದುಡಿಯುವದದ. ತಿನ್ನುವದದ. " ಹೀಗೆ ಪದ್ಮಾವತಿಯು ಮನೆಯಲ್ಲಿ ಕುಳಿತೇ ಪತಿಗೆ ದಾರಿ ತೋರಿಸಿದಳು.

ಮರುದಿನ ಮುಂಜಾನೆ ಇನ್ನೂ ನಸುಕಿದ್ದಿತು. ಚಂದ್ರವ್ವ ಬಾಬಣ್ಣ ನನ್ನು ಎಬ್ಬಿಸುತ್ತ ಬಂದಳು ದೈವಕ್ಕೆ ಬಾಬಣ್ಣ ಇಂದು ಹೊಲಕ್ಕೆ ಹೋಗಿ ರಲಿಲ್ಲ. ತನ್ನ ಹಿರಿಯ ಮಗನನ್ನು ಕಳಿಸಿದ್ದ. ಚಂದ್ರವ್ವ ಬಂದುದನ್ನು ಕಂಡು ಪದ್ಮಾವತಿಯು ಆದರದಿಂದ ಸ್ವಾಗತಿಸಿ ನುಡಿದಳು:

" ಯಾಕೆ ನಸುಕಿನಲ್ಲಿ ಬಂದಿ ಅಬಚಿ ? "

ಪದ್ಮಾವತಿಯ ಮಾತಿಗೆ ಉತ್ತರವೆಂದು ಬಾಬಣ್ಣನ ಕಡೆಗೆ ನೋಡಿ ಚಂದ್ರವ್ವ ಮಾತಿಗೆ ಆರಂಭಿಸಿದಳು:

" ನಾಲ್ಕ ದಿನ ಚಲೋ ಕಾಯ್ದು ರಾಶೀ ಮಾಡಿಕೊಂಡ ಬರ್ರಿಯೋ ಬಾಬು ! ನಾಲ್ಕು ದೊಡ್ಡ ದೊಡ್ಡ ತೆನೆ ಅಷ್ಟ ಯಾರಾದರೂ ಒಯ್ದು ಬಿಟ್ಟ ರೆಂದರೆ ನಾವು ಜೋಳ ಇಲ್ಲದೆ ಕೂಡೋದ ಆದೀತು. "

" ನಾನೂ ಈಗ ನಿಮ್ಮ ಮನೆಯ ಕಡೆಗೇನೇ ಬರುವವನಿದ್ದೆ. ಕೇಳಿ, ಕುಡಗೋಲ ಹಾಕೋಣಂತ "

ಬಾಬಣ್ಣ ನುಡಿದ. ಅವನ ಮಾತು ಅಪರಾಧಿಯ ಮಾತಿನಂತಿತ್ತು.

" ನಾನು ಮೂರು ದಿನ ಆಯ್ತು ಹೇಳಲಿಕ್ಕೆ ಹತ್ತಿ. ಆಲಸ್ಯ ಮಾಡ ತಾರ ನೋಡ ತಾಯಿ ! ಇದೇನು ನನ್ನ ಕರ್ಮ ಅನ್ನುವೆ. ಚಂದ್ರವ್ವ ಅಬ ಚಿಯೇ ತಿರುಗಿ ನಮ್ಮ ಮನೆಗೆ ಬರುವಂತಾಯಿತು. ಕಾಕಾ ಏನಂದಾನು?" ಪದ್ಮಾವತಿ ನೊಂದು ನುಡಿದಳು

" ಅವರಂತೂ ಈಗ ಮೂರ ದಿನಾ ಆಯ್ತು ಕಾರ ಆಗಿದಾರ. ದಿನಾ ಹೊಲಕ್ಕ ಹೋಗತಾರೆ. ಇಂದ ನೋಡಿದ ಒಳ್ಳೆಯ ತೆನೆಯ ದಂಟ ನಾಳೆ ಇಲ್ಲಂತ ಹೇಳ್ತ ಬರತಾರ. ಹೀಗೇ ಹೇಳತಾರ ಇವರು ಅಂತ ನಾನೂ ಅನ

ತಿದ್ದೆ. ಆದರೆ ನಿನ್ನೆ ಮಧ್ಯಾಹ್ನದಾಗ ನನ್ನನ್ನೂ ಹೊಲಕ್ಕ ಕರಕೊಂಡ ಹೋಗಿ ತೋರಿಸಿದರು. ಜೋಳದ ನಿಲವು ಎಲ್ಲಿ ಒಳ್ಳೇದದ ಅಲ್ಲಿ ಎಲ್ಲ ಕಡೆಗೂ ಹತ್ತೋ ಇಪ್ಪತ್ತೋ ದಂಟ ಕಡದೇ ಇದ್ದಾರ. ಕೋಲಿ ಕಾಣಬಾರದಂತೆ ನೆಲದೊಳಗ ಕಡದಾರ ಮತ್ತ! ಹೀಗೆ ಆದರೆ ಹೊಲ ಹೇಗೆ ತಾಳಬೇಕು? ನಾಲ್ಕ ದಿನ ವಸ್ತಿ ಬಿದ್ದ ಕಾಯುವುದೂ ನೆಟ್ಟಗೆ. ಒಂದು ರೂಪಾಯಿ ಕೊಡಲಿಕ್ಕೆ ಹೋದರೂ ಮೊರದೊಳಗ ಒಂದು ಬೊಗಸಿ ಜೋಳ ಬರುವದಿಲ್ಲ. ಹಿಂದಕ್ಕ ನಾವು ಜೋಗಿತಿಯರಿಗೆ ಹಾಕಿದಷ್ಟ ಜೋಳ ಈಗ ಎರಡು ರೂಪಾಯಿ ಕೊಟ್ಟರೂ ಬರುವದಿಲ್ಲ." ಹೀಗೆ ಚಂದ್ರವ್ವನ ಉಪದೇಶ ಎಲ್ಲಿಯವರೆಗೆ ಸಾಗುತ್ತಿತ್ತೋ ಏನೋ. ಆದರೆ ಪದ್ಮಾವತಿಯೇ ನಡುವೆ ಬಾಯಿ ಹಾಕಿ ಹೇಳಿದಳು:

"ಇಲ್ಲಿ ಮನೆಯೊಳಗಾದರೂ ಮಲಗಿಕೊಂಡು ಏನು ಮಾಡುವರು? ಇಂದಿನಿಂದೂ ವಸ್ತಿಗೇ ಹೋದಾರು. ಕೈಯೊಳಗೆ ಬಂದದ ಬೆಳಿ ಕಳಕೊಂಡ ಏನು ಮಾಡುವ್ರದು?"

ಬಾಬಣ್ಣ ಹಾಲಿಗೆ ಹೆಪ್ಪು ಹಾಕಿದಂತೆ ಸುಮ್ಮನೆ ಕುಳಿತಿದ್ದ. ಇದನ್ನರಿತು ಚಂದ್ರವ್ವ ಮತ್ತೆ ಉಪದೇಶಿಸತೊಡಗಿದಳು:

"ಬಾಬು, ನೀನಾದರೂ ನಸುಕಿನಲ್ಲಿ, ಮೂರುಸಂಜೆ ಹೊಲದ ಕಡೆಗೆ ವೇಳೆ ತಪ್ಪಿಸಿ ತಪ್ಪಿಸಿ ಹೋಗಿ ಕಾವಲ ಮಾಡೋ. ಯಾರೋ ಒಯ್ಯತಿರಬೇಕು. ಮೆಟ್ಟಗಾಲಿನ ಹೆಜ್ಜೆಗಳವ. ನಮ್ಮವರ ಕಾಯಲಿಕ್ಕೆ ಕುಳಿತರೆ ಬಹಳ ಹೊತ್ತ ಹಿಡಿಯುವದಿಲ್ಲ. ಆದರೆ ಚಳಿಯೊಳಗ ಎದ್ದ ಹೋಗಲಿಕ್ಕೆ ಆಗುವದಿಲ್ಲ ಅವರಿಗೆ."

ಹೀಗೆ ಚಂಪ್ರವ್ವ ಹೇಳುವಾಗ ಅವಳ ದೃಷ್ಟಿಯು ಬಾಬಣ್ಣನ ಕೆರವಿನ ಮೇಲಿತ್ತು. ನಾಲು ಕಟ್ಟಿಸಿದ ಜೋಡುಗಳಲ್ಲಿ ಒಂದು ಅದೇ ಕಾಲಕ್ಕೆ ಹೋಳು ಬಿದ್ದಿರಬೇಕೆ?

ಚಂದ್ರವ್ವ ಇಷ್ಟೆಲ್ಲ ಹೇಳಿ ಹೋದರೂ ಬಾಬಣ್ಣ ತನ್ನ ಕಾಯಕವನ್ನು ನಿಲ್ಲಲಿಸಲ್ಲ. ಮತ್ತು ಅಂದಿನಿಂದ ವಸ್ತಿಗೂ ಹೋಗಲಿಲ್ಲ. ಇನ್ನೂ ನಾಲ್ಕು ದಿನ ಅನ್ಯರಲ್ಲಿ ಕೆಲಸ ಹತ್ತುವವು. ಅಷ್ಟು ಮಾಡಿಕೊಂಡು, ತಾನು ಮಾಡಿದ

ಹೊಲದ ಜೋಳ ಆಮೇಲೆ ಕೊಯ್ದುರಾಯಿತು. ಯಾವಾಗ ಆದರೂ ಆ ಕೆಲಸ ಇದ್ದೇ ಇದೆಯಲ್ಲ, ಎಂದುಕೊಂಡು ತನ್ನ ನಿತ್ಯ ವ್ಯವಹಾರ ನಡೆಯಿಸಿದ್ದ.

ಪದ್ಮಾವತಿಯು ಮಾತ್ರ ಗಂಡನಿಗೆ ಎರಡು ಸಾಲು ಅಂದಳು. "ತೆನೆ ಹೋಗಲಿಕ್ಕೆ ಹತ್ತಿವೆಯಂತೆ. ಯಾರ ಒಯ್ಯುತಾರೋ ಏನು ಮಾಡುವರೋ ನೋಡಿರಿ. ಮತ್ತ ನಾಲ್ಕ ದಿನ ಬಿಟ್ಟು ಕೊಯ್ಯುವಲ್ಲಿರೇಕೆ ನೀವು! ಆದರೆ ಕಾವಲ ನೆಟ್ಟಗ ಮಾಡಿರಿ!"

"ಆ ಮುದುಕ ಎಂಥವ ಇದ್ದಾನ ಗೊತ್ತ ಇಲ್ಲೇನ ನಿನಗ? ಇಲಿ ಹೋದರೆ ಹುಲಿ ಹೋಯಿತಂತ ಎಬ್ಬಿಸತಾನೆ. ಎಲ್ಲಿ ನಾಲ್ಕ ದಂಟನ್ನ ದನ ಕಾಯುವವರ ಮುರಿದು ಕಬ್ಬ ತಿಂದದ್ದಕ್ಕ ಹೀಗೆ ಹೇಳತ ಬಂದಿದಾನೆ." ಎಂದು ಬಾಬಣ್ಣ ಹೇಳಿ ಹೆಂಡತಿಯನ್ನು ಸುಮ್ಮನಾಗಿಸಿದ.

ಎರಡು ದಿನ ಕಳೆದುವು. ಮೂರನೆಯ ದಿನ ನಸುಕಿನಲ್ಲಿ ಬಾಬಣ್ಣ ಮೇವಿನ ಪೆಂಡಿಯನ್ನು ಹೊತ್ತುಕೊಂಡು ಹೊಲದಿಂದ ಮನೆಗೆ ಬರುತ್ತಿದ್ದ. ಈಗೀಗ ಆತ ಹೊಲದಲ್ಲಿಯೇ ತೆನೆಗಳನ್ನು ಕೊಯ್ದು, ಹೊರೆಯ ಹೊಟ್ಟೆಯಲ್ಲಿ ಹಾಕಿ, ಮೇಲೆ ಮೇವಿನ ಪೆಂಡಿಯಂತೆ ಕಾಣುವ ಹಾಗೆ ಮಾಡಿ ತರುತ್ತಿದ್ದ. ದಾರಿಯಲ್ಲಿ ತೆನೆಗಣಿಕೆಯನ್ನು ನೋಡಿ ಯಾರಾದರೂ ಮಾಸ್ತರರ ಮನೆಯಲ್ಲಿ ಹೇಳಬಹುದೆಂಬ ಹೆದರಿಕೆಯೇ ಹಾಗೆ ಮಾಡಲು ಹಚ್ಚಿದ್ದಿತು. ಇದೀಗ ಬಾಬಣ್ಣ ಅಗಸೆಯ ಸಮೀಪಕ್ಕೆ ಬಂದಿದ್ದ. ಅವನ ಬೆನ್ನ ಹಿಂದೆಯೇ ಕಾಲೊಳಗಿನ ಕೆರವು ಸದ್ದು ಮಾಡುವವೆಂದು ಕೈಯಲ್ಲಿ ಹಿಡಿದುಕೊಂಡು, ಮಾಸ್ತರರ ತಂದೆ ಬರುತ್ತಿದ್ದರು. ದೂರದಲ್ಲಿ ಬಾವಿಯ ಮೇಲೆ ನಸುಕಿನಲ್ಲಿ ನೀರು ಸೇದುವ ನಾಲ್ಕಾರು ಜನ ಹೆಂಗಸರೂ ಗಂಡಸರೂ ತಮ್ಮ ಕೆಲಸವನ್ನು ಬಿಟ್ಟು ಇವರು ಬರುವ ರೀತಿಯನ್ನೇ ನೋಡುತ್ತ ನಿಂತಿದ್ದರು.

ಬಾವಿಯ ಹತ್ತರವೇ ಹಾಯ್ದು ಊರೊಳಗೆ ಹೋಗಲಿಕ್ಕೆ ಬೇಕು ಅಲ್ಲಿಯೇ ದಾರಿಯದೆ. ತೀರ ಬಾವಿಯ ಸಮೀಪಕ್ಕೆ ಬರಲು ಮಾಸ್ತರರ ತಂದೆ ಅಂದರು:

"ಬಾಬು ನಿಲ್ಲು!"

ಆ ದನಿಯನ್ನು ಕೇಳಿದ ಕೂಡಲೆ ಬಾಬಣ್ಣನ ಮೈಯೆಲ್ಲ ಬೆವತಿತು. ತೊಟ್ಟ ಅಂಗಿ ತೊಯ್ದಿತು. ಆ ಕ್ಷಣ ಮೈಯೊಳಗಿನ ಶಕ್ತಿಯೆಲ್ಲ ಉಡುಗಿ

ಹೋದಂತಾಯ್ತು. ಹೆಜ್ಜೆ ಎತ್ತಲಿಲ್ಲ. ನಿಂತಲ್ಲಿಯೇ ನಿಂತ. ಹೊರಳಿ ಮಾಸ್ತರರ ತಂದೆಯ ಮುಖದ ಕಡೆಗೂ ನೋಡುವದಾಗಲಿಲ್ಲ. ನೋಡಿದ್ದರೂ ಅವನು ಕಾಣುತ್ತಿದ್ದನೋ ಇಲ್ಲವೋ ಯಾರಿಗೆ ಗೊತ್ತು? ಅಷ್ಟು ಬಾಬಣ್ಣನ ಕಣ್ಣಿಗೆ ಕತ್ತಲು ಕವಿದಂತಾಗಿದ್ದಿತು.

ಸುತ್ತಲೂ ಎಷ್ಟು ಜನ ನೆರೆದಿದ್ದರೂ ಲಕ್ಷಿಸದಷ್ಟು ಅವನ ಕಣ್ಣು ಮನಗಳು ಬಧಿರವಾಗಿದ್ದುವೆಂದೇ ಅಂದು ಆತ ಬದುಕಿದ. ಬೇಕಂತಲೇ ಜನರ ಎದುರಿಗೆ ಹಿಡಿಯಬೇಕಂತಲೇ ಮಾಸ್ತರರ ತಂದೆ ಹೊಲದಿಂದ ಅಲ್ಲಿಯವರೆಗೆ ಸುಮ್ಮನೆ ಬೆನ್ನು ಹತ್ತಿ ಬಂದಿದ್ದರು ಅದನ್ನವರು ಸಾಧಿಸಿದರು. ಕೂಡಿದ ಜನರೆದುರಿಗೆ ಹೊರೆ ಬಿಚ್ಚಿಸಿ ತೆನೆಗಳನ್ನು ತೋರಿಸಿದರು. ಬಾಬಣ್ಣನಿಗೆ ಚನ್ನಾಗಿ 'ಛೀ!' ಹಾಕಿದರು ಆಮೇಲೆ ಆ ತೆನೆಗಳನ್ನು ತನ್ನ ದೋತರ ಸೆರಗಿನಲ್ಲಿ ಕಟ್ಟಿಕೊಂಡು, ನಾಲ್ಕು ಜನರ ಎದುರಿಗೆ ಹೇಳುತ್ತ ಮನೆಗೆ ಸಾಗಿದರು ಬಾಬಣ್ಣನ ಸ್ಥಿತಿ ಹೇಗಾದೀತೆಂಬ ಅರಿವೂ ಅವರಿಗಿಲ್ಲ. ತುಡುಗ ಸಿಕ್ಕ, ಸಾಕು. ಅವನಿಗೆ ಆಗತಕ್ಕಷ್ಟು ಅವಮಾನ ಆಗಲೇಬೇಕು, ಆಯಿತು. ಎಂದಿಷ್ಟೇ ಅವರ ಮನಸ್ಸು—ಒಕ್ಕಲತನವೇ ದೇವರ ಸೇವೆಯೆಂದು ನಂಬಿದ ಅವರ ಮನಸ್ಸು-ಹೇಳುತ್ತಿತ್ತು.

ಬಾಬಣ್ಣ ಒಂದು ಕಟ್ಟಿಗೆಯ ಗೊಂಬೆಯಂತೆ ಮೇವನ್ನು ಕಟ್ಟಿಕೊಂಡ. ಹೇಗೋ ಮನೆಗೆ ಬಂದ. ಅಂಗಳದಲ್ಲಿ ಹೊರೆ ಒಗೆದವನೇ ಮರಳಿದ. ಒಳಗೆ ಕುಳಿತು ಪದ್ಮಾವತಿ ಚಹ ಕುಡಿಯಲು ಕರೆಯುತ್ತಿದ್ದಳು. ತನ್ನ ಪತಿ ಚಳಿಯೊಳಗೆ ಹೊಲಕ್ಕೆ ಹೋಗಿ ಮೇವು ತಂದಿರುತ್ತಾನೆ. ಮಧ್ಯಾಹ್ನ ಸವಡು ಸಿಗುವದಿಲ್ಲ. ಎರಡನೆಯವರಲ್ಲಿ ಕೂಲಿಗೆ ಹೋಗಬೇಕಾಗುವುದು. ಬಿಸಿ ಬಿಸಿ ಚಹ ಕುಡಿಯಲಿ. ಎಂದು ದಿನದಕ್ಕಿಂತ ತುಸು ಹೆಚ್ಚಾಗಿಯೇ ಚಹ ಮಾಡಿಟ್ಟುಕೊಂಡು ದಾರೀ ಕಾಯುತ್ತಿದ್ದಳು. ಕೂಗಿ ಕೂಗಿ ಕರೆಯುತ್ತಿದ್ದಳು

ತುಸು ಹೊತ್ತು ಕಳೆಯಿತು. ಬಾಬಣ್ಣ ತಿರುಗಿ ಬರಲಿಲ್ಲ. ಹಿತ್ತಲ ಕಡೆಗೆ ಏನಾದರೂ ಕೆಲಸವಿರಬೇಕು, ದಿನದಂತೆ ಹೋಗಿರಬಹುದು, ಈಗ ಬಂದಾನು ಎಂದುಕೊಂಡು ಪದ್ಮಾವತಿ ಚಹ ಸೋಸಿ, ಒಲೆಯ ಮುಂದಿನ ಕಿಚ್ಚಿನ ಮೇಲೆ ಇಟ್ಟು ದಾರೀ ಕಾಯ್ದಳು. ಬಾಬಣ್ಣ ಬರಲಿಲ್ಲ. ತನ್ನ ಹಿರಿಯ ಹುಡುಗನನ್ನು ಹುಡುಕಿ ಕರೆದುಕೊಂಡು ಬರಲಿಕ್ಕೆ ಕಳಿಸಿದಳು.

ಗಂಗವ್ವನ ಮನೆಯಲ್ಲಿ ಇದೀಗ ಎದ್ದು ಮುಖ ತೊಳೆಯುತ್ತಿದ್ದ ತಾತಪ್ಪನಿಗೆ ಅಗಸೆಯಲ್ಲಿ ನಡೆದ ಪ್ರಕರಣದ ಸುದ್ದಿ, ನೀರಿಗೆ ಹೋದ ಸುಂದರಿಯಿಂದ ಹತ್ತಿತು. ಸಿಡಿಲು ಬಡಿದಂತಾಯಿತು. ಕೂಡಲೆ ಅಂಗಿಯನ್ನು ತೊಟ್ಟುಕೊಂಡು, ಬಿರುಗಾಳಿಯಲ್ಲಿ ಸಿಕ್ಕ ರವದೆಯಂತೆ ಓಡಿ ಮನೆಗೆ ಬಂದ.

ಬಾಗಿಲಲ್ಲಿ ಮೇವಿನ ಹೊರೆ ಬಿದ್ದಿದ್ದಿತು. ಎತ್ತು ಕರೆಯ ಗೂಟಕ್ಕೆ ಹಾಗೇ ಕಟ್ಟಿದ್ದಿತು. ಬಾಬಣ್ಣ ಹೊರೆ ಒಗೆದಾಗಲೇ ಈಗ ಒಡೆಯ ಮೇವು ಹಾಕುವನೆಂದು ಎದ್ದು ನಿಂತ ಎತ್ತು ಹಾಗೇ ನಿಂತಿದೆ. ಆಶೆಯ ಕಣ್ಣುಗಳಿಂದ ಮೇವಿನ ಹೊರೆಯ ಕಡೆಗೆ ನೋಡುತ್ತಿದೆ.

" ಬಾಬು ! "

ಆತುರದಿಂದ ಕರೆಯುತ್ತ ತಾತಪ್ಪ ಒಳಗೆ ಬಂದ. ಧ್ವನಿ ಉದ್ವೇಗದಿಂದ ಕೂಡಿದ್ದಿತು.

" ಬಾ ಮಾಮಾ. ಹೊರಿ ಒಗೆದು ಈಗೆಲ್ಲೊ ಹೊರಗೆ ಹೋದರು ! ಚಹ ಮಾಡಿ ದಾರೀ ನೋಡತಿದ್ದೆ. ಒಳಗೇ ಬರಲಿಲ್ಲ. ಹೊಲದೊಳಗೆ ತೆನೆ ಕಳವು ಮಾಡುವವರು ಯಾರೋ ಸಿಕ್ಕರೋ ಏನೋ. ಚಂದ್ರವ್ವ ಅಬಚಿ ಮನೆಗೆ ಹೋದರೋ ಏನೋ ! "

ಎಂದು ಇದಾವುದನ್ನೂ ಅರಿಯದ ಪದ್ಮಾವತಿಯು ಚಹ ಸೋಸಿದ ಕಪ್ಪು ಅರಿವೆಯನ್ನು ಮಾವನಿಗೆ ತೋರಿಸಿದಳು. ಅದರಷ್ಟೇ ತಾತಪ್ಪನ ಮುಖವೂ ಕಪ್ಪಾಗಿದ್ದಿತು. ಅದರ ಅರಿವು ಅವಳಿಗೆ ಬರಲಿಲ್ಲ. ಮುಂದೆ ನುಡಿದಳು:

" ಚಹ ಆರಿ ಕರ್ರಗೆ ಆಗ್ತದ. ಮಾಮಾ ನೀವಾದರೂ ತಗೋ ಬರ್ರಿ ! ಅವರು ಬಂದ ಮೇಲೆ ಮತ್ತೆ ಮಾಡಿಕೊಡತೇನಂತೆ. "

" ಚಹ ಏನು ಸುಡತಿ ಪದಮವ್ವಾ ! "

ಎಂದು ನಡುಗುವ ದನಿಯಲ್ಲಿ ನುಡಿದು, ತಾತಪ್ಪ ಕೆಂಪು ಮುಖ ಮಾಡಿಕೊಂಡು ಮುಂಗೈಗಳನ್ನು ಕಡಿಯುತ್ತ ನೆಲಕ್ಕೆ ಕುಕ್ಕರಿಸಿದ. ಮಾವನು ಹೀಗೇಕೆ ಮಾಡುವನೆಂದು ಪದ್ಮಾವತಿ ಒಲೆಯ ಮುಂದಿನಿಂದ ಎದ್ದು, ಧಾವಿಸಿ ಹತ್ತರ ಬಂದು ಕೈ ಹಿಡಿದಳು. ತಾತಪ್ಪ ಕೈ ಕಸಿದುಕೊಂಡು ತನ್ನ ತಲೆಯ

ಕೂದಲುಗಳನ್ನು ಹಿಸುಕಿಕೊಳ್ಳುತ್ತ, ರಪ್ಪ ರಪ್ಪ ಎಂದು ಎದೆ ಮುಖ ಹೊಡೆದುಕೊಳ್ಳತೊಡಗಿದ.

" ಏನಾಯ್ತು ! ಏನಾಯ್ತು ! ಹೀಗೇಕೆ ? "

ಪದ್ಮಾವತಿ ಗಾಬರಿಯಾಗಿ ಕೇಳಿದಳು.

" ಘಾತ ಆಯ್ತು ! ನನ್ನ ಘಾತ ಆಯ್ತು ! ನನ್ನ ಆಳಿಯ ಎಲ್ಲಿ ಕಾಸ ಕಿಮ್ಮತ್ತಿನ ನಾಲ್ಕ ತೆನೆ ತರತಿದ್ದಂತ....ಊರ ಮುಂದ ಆ...."

ಮುಂದೆ ತಾತಪ್ಪನ ಬಾಯಿಂದ ಮಾತುಗಳು ಹೊರಡಲಿಲ್ಲ. ಮಿತಿ ಮೀರಿದ ಶೋಕ ಅಪಮಾನಗಳಿಂದ ದುಃಖ ಉಕ್ಕಿ ಬಂದಿತು. ಮುಖ ಮುಚ್ಚಿ ಕೊಂಡು ಬಿಕ್ಕಿ ಬಿಕ್ಕಿ ಅಳಹತ್ತಿದ.

೨೦

ಮಾಸ್ತರರ ತಂದೆ ಮು ಆಳುಗಳನ್ನು ಹಚ್ಚಿ ಜೋಳದ ನಿಲುವು ಕೊಯ್ಸಿ ದರು. ರಾಶಿಯನ್ನೂ ಮಾಡಿಸಿದರು ಆಳಿನ ಲೆಕ್ಕವನ್ನೆಲ್ಲ ಮಗನ ಕಡೆಯಿಂದ ಬರೆಯಿಸಿ ಇಟ್ಟರು. ಅದರಲ್ಲಿ ಅವರೇನೂ ದುಡಿಯಬೇಕಾಗಿರಲಿಲ್ಲ. ಕೇವಲ ಮೇಲ್ವಿಚಾರಣೆ ಮಾಡಿದ್ದರು ಆದರೂ ಹಲವು ಸಲ ಮಗನಿಗೂ ಹೆಂಡತಿಗೂ ಹಂಗಿಸಿದರು.

" ನಿಮ್ಮ ಮಾತು ಕೇಳಿ, ಆ ಉಡಾಳನಿಗೆ ಹೊಲ ಕೊಟ್ಟೆ. ಈಗ ನಾನೇ ದುಡಿಯಬೇಕಾಯಿತು ನೋಡು "

ಪತಿಯ ಮಾತಿಗೆ ಚಂದ್ರವ್ವ ಪ್ರತಿಯಾಗಿ ಏನೂ ಹೇಳುವಂತಿರಲಿಲ್ಲ. ಬಾಬಣ್ಣ ತಮ್ಮವ, ದೂರಿನ ಆಪ್ತನಾಗಬೇಕು, ಎಂದು ಹೊಲ ಕೊಟ್ಟರೆ ಅವನು ಹೀಗೆ ಮಾಡಿದ್ದ. ಅದಕ್ಕಾಗಿ ಅವಳಿಗೆ ಬಾಯಿ ಇರಲಿಲ್ಲ. ಹೀಗಿ ದ್ದರೂ ಬಾಬಣ್ಣನ ಮನೆತನಕ್ಕೆ ತನ್ನ ಪತಿಯ ವರ್ತನೆಯಿಂದ ಎಂಥ ದೊಡ್ಡ ಹಾನಿ ತಗುಲಿದೆ ಎಂಬುದು ಅವಳಿಗೆ ಗೊತ್ತಿತ್ತು. ಅಂತಲೇ ಅವಳು ಒಂದು ದಿನ ಮುಂಜಾನೆ ಪದ್ಮಾವತಿಗೆ ಸಮಾಧಾನ ಹೇಳಲಿಕ್ಕೆ ಹೋದಳು.

ಚಂದ್ರವ್ವನನ್ನು ಕಂಡೊಡನೆಯೇ ಪದ್ಮಾವತಿಯು ಓಡಿ ಬಂದು, ಅಂಗಳದಲ್ಲಿಯೇ ಹುಚ್ಚರಂತೆ ಕಾಲಿಗೆರಗಿದಳು. ಅಳುತ್ತ ನುಡಿದಳು.—

" ನನ್ನ ಗಂಡನ ತಪ್ಪ ಇಷ್ಟ ಹೊಟ್ಟೆಯೊಳಗ ಹಾಕಿಕೊಳ್ಳಿರಿ ತಾಯಿ ! "

" ಹೀಗೇಕೆ ಮಾಡತಿಯೋ ಪದು ? ಅಂಥಾದ ಏನು ತಪ್ಪು ಮಾಡಿದಾನ ನಿನ್ನ ಗಂಡ? ಯಾರೇನು ಹುಡುಗರಿಗೆ ತಿನ್ನಲಿಕ್ಕೆ ಸೀತನಿ ತರುವದಿಲ್ಲೋ ಏನು ? ಏನಾಯ್ತು ತಂದರೆ ? "

ಅವಳನ್ನು ಕೈ ಹಿಡಿದು ಎತ್ತಿ, ತೆಕ್ಕೆಯಲ್ಲಿ ಹಿಡಿದುಕೊಂಡು ಒಳಗೆ ಬಂದು ಕೇಳಿದಳು.

" ಬಂದೇನಬೇ ಬಾಬು ? "

" ಇಲ್ಲ ಅಬಚಿ ! ಮೂರು ದಿನ ಆಯ್ತು, ಕೆರಿ ಬಾವಿ ತಿರಗಲಿಕ್ಕೆ ಹತ್ತಿದಾನ ಮಾಮಾ. ಹೊಲದೊಳಗಿನ ಗಿಡಗಳನ್ನೆಲ್ಲ ನೋಡಿ ಆಯ್ತು ! "

ಎಂದು ಪದ್ಮಾವತಿ ಬಿಕ್ಕಿ ಬಿಕ್ಕಿ ಅಳಹತ್ತಿದಳು.

"ಹೆಂಗಸರಂಗ ಹಾಗೇನ ಮಾಡತಾನ ಬಾಬು ? ಹುಚ್ಚ ಗಿಚ್ಚ ಇದ್ದೀರೇನು ನೀವು ? ಎಲ್ಲಿ ಆದರೂ ಊರಿಗೆ ಹೋಗಿದಾನ ಆಯ್ತು ! "

ಸಮಾಧಾನ ಹೇಳುತ್ತ ಚಂದ್ರವ್ವ ನುಡಿದಳು.

" ಇಲ್ಲ, ಅಬಚಿ ! ಅವರು ಜೀವ ಇಡುವದಿಲ್ಲ ಇನ್ನು ! "

ಪದ್ಮಾವತಿ ದನಿ ತೆಗೆದು ಅಳಹತ್ತಿದಳು. ಮಕ್ಕಳು ಸುತ್ತಲೂ ಕೂಡಿದರು.

" ನನಗೆಲ್ಲಿಂದ ಕೆಟ್ಟ ಬುದ್ಧಿ ಬಂದಿತೋ ಏನೋ, ನಿಮ್ಮ ಮನೆಯಿಂದ ರೂಪಾಯಿ ತಂದ ಖರ್ಚ ಮಾಡಲಿಕ್ಕೆ ಕೊಡಲಿಲ್ಲ. ಎರಡು ಮೂರು ದಿನ ಹೊಸ ಜೋಳದ ಹಿಟ್ಟ ತಂದ ನನ್ನ ಮುಂದ ರೊಟ್ಟಿ ಮಾಡಲಿಕ್ಕೆ ಇಟ್ಟರು. ಆಗಲೂ ನಾನು ಹೆಚ್ಚಿಗೆ ಕೇಳಲಿಲ್ಲ. ಎಂಥಾ ಹುಚ್ಚ ಇದ್ದಾದೀನು ನಾನು. ನಾನಾದರೂ ಏನು ಮಾಡುವಾಕೆ, ಕರ್ಮ ನನ್ನ ಬುದ್ಧಿಗೂ ಮಂಕ ಮಾಡಿತು. ಅಯ್ಯೋ! ಹಯ್ಯೋ ! ಪಯ್ಯೋ! " ಎಂದು ಪದ್ಮಾವತಿ ಹಾಡಿ ಹಾಡಿ ಅಳಹತ್ತಿದಳು.

" ಹಸಿ ಮೈಯೊಳಗೆ ಅಳಬೇಡಬೇ. ನಿನ್ನ ಗಂಡನಿಗೆ ಏನೂ ಆಗುವದಿಲ್ಲ. ನನ್ನ ಮಾತು ಕೇಳು ನೀ " ಎಂದು ವಿವಿಧ ರೀತಿಯಿಂದ ಸಾಂತ್ವನ ವಚನಗಳನ್ನಾಡಿದಳು.

ಅದೇ ದಿನ ಸಾಯಂಕಾಲಕ್ಕೆ ಜೋಳದ ಗಾಡಿ ಪದ್ಮಾವತಿಯ ಮನೆಗೆ ಬಂದಿತು. ಮಾಸ್ತರರ ತಂದೆಯು ಹೊಲದ ರಾಶಿಯನ್ನೆಲ್ಲ ಮಾಡಿಸಿ, ಆಳು

ಹೋಳುಗಳ ವೆಚ್ಚವನ್ನೆಲ್ಲ ಮುರಿದುಕೊಂಡು, ಹೊಲದ ಬಗ್ಗೆ ಬಾಬಣ್ಣನ ಕಡೆಯಿಂದ ಬರಬೇಕಾದ ಹಣದಲ್ಲಿ ಸರಕಾರಿ ಲೆಕ್ಕದಂತೆ ಎಷ್ಟು ಜೋಳ ಇಟ್ಟುಕೊಳ್ಳಬೇಕೋ ಅಷ್ಟನ್ನೂ ಇಟ್ಟುಕೊಂಡು, ನಾಲ್ಕು ಚೀಲ ಜೋಳ ಗಳನ್ನು ಮಾತ್ರ ಬಾಬಣ್ಣನ ಮನೆಗೆ ಕಳಿಸಿದ್ದನು. ಬಂಡಿಯನ್ನು ನೋಡಿ ದೊಡನೆಯೇ ಪದ್ಮಾವತಿಯ ದುಃಖ ಉಕ್ಕಿಬಂದಿತು. ಮತ್ತೂ ಹಾಡಿ ಹಾಡಿಕೊಂಡು ಅತ್ತಳು.

ಆಳುಗಳು ಜೋಳದ ಚೀಲಗಳನ್ನು ಪಡಸಾಲೆಯಲ್ಲಿ ಇಳಿಸಿ ಹೋಗು ವಾಗ ಕೇಳಿದರು:

"ಎತ್ತನ್ನ ನಿಮ್ಮ ಮನೆಗೇ ಕಳಿಸಬೇಕೋ, ಏನು ಮಾಸ್ತರರ ಮನೆ ಯಲ್ಲಿಯೇ ಇರಲೋ ?"

"ಏನು ಎಲ್ಲಿದ್ದರೂ ಅಷ್ಟೇ ಅದೆ"

ಎಂದು ಪದ್ಮಾವತಿ ಹೇಳಿದಳು. ರಾಶಿಗೆಂದು ಒಯ್ದ ಎತ್ತು ಇನ್ನೂ ಅವರಲ್ಲಿಯೇ ಇದ್ದಿತು. ಈಗ ತಮ್ಮ ಮನೆಗೆ ತಂದರೂ ಹುಡುಗರೇ ಅದರ ಉಸಾಬರಿ ಮಾಡಬೇಕು. ತಾತಪ್ಪನಂತೂ ಅಳಿಯನನ್ನು ಗೊತ್ತು ಹಚ್ಚದೆ ಊರಿಗೇ ಬರುವದಿಲ್ಲೆಂದು ಹೋಗಿದ್ದಾನೆ. ಈಗ ಇಲ್ಲಿ ಎತ್ತನ್ನು ತಂದಾ ದರೂ ಏನು ಮಾಡುವುದು ? ಎಂದುಕೊಂಡು ಪದ್ಮಾವತಿ ಹೀಗೆ ಹೇಳಿದ್ದಳು.

ಈಗ ಪದ್ಮಾವತಿಯ ಮನೆಯಲ್ಲಿ ತಿನ್ನುಣ್ಣಲಿಕ್ಕೆ ಏನೂ ಕೊರತೆ ಇಲ್ಲ. ಕಾಳುಕಡಿಗಳು ಬೇಕಾದಷ್ಟಿವೆ. ಆದರೆ ತಿನ್ನುವವರೇ ಇಲ್ಲ. ಮನೆಯ ಮೇಲೆಯೇ ಒಂದು ನಿರುತ್ಸಾಹದ ವಾತಾವರಣ ಆವರಿಸಿದೆ. ಹೆಣದ ಕಳೆ ಬಂದಿದೆ. ಓಣಿಯೊಳಗಿನ ಹಲವು ಜನ ಹೆಂಗಸರು ಹಲವು ತರದ ಮಾತುಗಳ ನ್ನಾಡುವರು. ಅಣ್ಣತಮ್ಮಂದಿರೆಲ್ಲ ಚುಚ್ಚಿ ಚುಚ್ಚಿ ಮಾತನಾಡುವವರೇ. ಅವನ್ನೆಲ್ಲ ಕೇಳಿದರೆ ಪದ್ಮಾವತಿಗೂ ಮೋರೆ ಕಟ್ಟಿಕೊಂಡು ಎಲ್ಲಿಯಾದರೂ ಹೋಗಬೇಕೆನಿಸುವುದು. ಆದರೆ ಮಕ್ಕಳ ಮುಖ ನೋಡಿ ಕಾಲ ಹಾಕುವಳು.

ಇಂಥ ದಿನಗಳಲ್ಲಿ ನಾಲ್ಕು ದಿನ ಬಾಳವ್ವನನ್ನೂ ಕರೆಯಿಸಿಕೊಂಡಿದ್ದರೆ ಮನಸ್ಸಿಗೆ ಸಮಾಧಾನವಾಗುತ್ತಿತ್ತು ಎನಿಸುವುದು. ಆದರೆ ಯಾರಿಂದ ಹೇಳಿ ಕಳಿಸುವುದು ? ಕಾಗದ ಬರೆಯಿಸಲಿಕ್ಕೆ ಇನ್ನಾರ ಮನೆಗೆ ಬಾಯಿ ತೆರೆಯುತ್ತ ಹೋಗಲಿ? ಎಂದುಕೊಂಡು ಸುಮ್ಮನಾಗುವಳು ಒಂದೊಂದು ದಿನ ಹುಡುಗನ ಕೈಯಿಂದ ಮಾಸ್ತರರಿಗೆ ಹೇಳಿ ಕಳಿಸಿ ಕಾಗದ ಬರೆಯಿಸ

ಬೇಕೆನಿಸುವುದು. ಮತ್ತೆ ಮರುಕ್ಷಣದಲ್ಲಿ ಅವಳು ಸುಖದಲ್ಲಿದ್ದಾಳೆ, ನಮ್ಮ ದುಃಖವನ್ನು ಹೇಳಿಕೊಂಡು ಅವಳನ್ನೂ ಚಿಂತೆಗೆ ಗುರಿ ಮಾಡುವದರಲ್ಲಿ ಏನರ್ಥವಿದೆ, ಎಂದು ವಿಚಾರಿಸಿ ಬಿಡುವಳು. ಒಮ್ಮೊಮ್ಮೆ ಪದ್ಮಾವತಿಗೆ ಸತ್ತ ತನ್ನ ತಂದೆ ತಾಯಂದಿರ ನೆನಪೂ ಆಗುವುದು ಅವರು ಎಂಥ ಪುಣ್ಯವಂತರು! ಇದನ್ನೆಲ್ಲ ನೋಡಲಿಕ್ಕೆ ಇರದೆ ಹೋದರು ! ದೇವರು ಅವರ ಕಣ್ಣು ಬೇಗ ಮುಚ್ಚಿದ್ದು ಒಳಿತು ಮಾಡಿದ, ಎನ್ನುವಳು. ಅದೇ ಕ್ಷಣದಲ್ಲಿ ತನ್ನ ಅಣ್ಣ, ಅಣ್ಣನ ಹೆಂಡಿರ ನೆನಪೂ ಆಗುವುದು ಒಂದು ಗಳಿಗೆ ಅವರ ಮೇಲೆ ಸಿಟ್ಟು ಆಗುವಳು. ಆದರೆ ಇನ್ನೊಂದು ಗಳಿಗೆಯಲ್ಲಿ ಯಾರ ಮೇಲೆ ಸಿಟ್ಟಾಗಿ ಏನು ಮಾಡುವದಿದೆ? ಅವರಷ್ಟಕ್ಕೆ ಅವರು ಇರುವರು ನನ್ನ ಕರ್ಮ ನಾನು ಭೋಗಿಸಲಿಕ್ಕೆಬೇಕು. ಯಾರಿದ್ದೇನು ಮಾಡುವವರು ? ಎಂದು ತನ್ನ ಮನಸ್ಸಿಗೇ ತಾನು ಕೇಳಿಕೊಳ್ಳುವಳು.

ತನ್ನ ತಂದೆಯಿಂದ ಎಂಥ ಅನರ್ಥವಾಯಿತೆಂಬುದು ಆದಪ್ಪ ಮಾಸ್ತರರಿಗೆ ಗೊತ್ತು. ಅದರಿಂದ ಅವರು ಆಗಾಗ ಬಾಬಣ್ಣನ ಮನೆಗೆ ಹೋಗಿ ಪದ್ಮಾವತಿಗೆ ಸಮಾಧಾನ ಹೇಳುವರು. ಮನೆಗೆ ಏನಾದರೂ ಸಾಮಾನು ಬೇಕಾದರೆ ತರಿಸಿಕೊಡುವೆ ಎನ್ನುವರು. ಆದರೂ ಪದ್ಮಾವತಿ ಅವರಿಂದ ಏನೂ ಸಹಾಯ್ಯ ಪಡೆಯಲು ಬಯಸುತ್ತಿರಲಿಲ್ಲ. ಅದೇಕೋ ಅವರ ಮನೆತನದ ವಿಷಯಕ್ಕೇನೇ ಮನಸ್ಸು ಬೇಸರವಾಗಿದ್ದಿತವಳಿಗೆ. ಇದನ್ನರಿತಿದ್ದರೂ ಚಂದ್ರವ್ವ ಆದಪ್ಪ ಇಬ್ಬರೂ ಅವಳ ಮನೆಗೆ ಎಡತಾಕುವರು. ಕ್ಷೇಮವನ್ನು ವಿಚಾರಿಸುವರು.

" ಗಂಡ ಅಂಥದನ್ನ ಮಾಡಿ ಊರ ಬಿಡಿಸಿ ಓಡಿಸಿದ ಹುಡುಗನ್ನ. ಇವರ ತಾಯಿ ಮಗ ಒಂದ ಮೋರೆಯ ಮೇಲೆ ಕೈ ತಿರಿಯುತಾರ ಈಗ ! "

ಎಂದು ಗಂಗವ್ವ ಪದ್ಮಾವತಿಯನ್ನು ಕಾಣಲು ಬಂದಾಗ ಹಲವು ಸಲ ಅಂದಳು. ಆದರೂ ಅದಕ್ಕೂ ಪದ್ಮಾವತಿಯು ಪ್ರೋತ್ಸಾಹನೆ ದೊರೆಯು ವಂತೆ ಏನೂ ಅನ್ನಲಿಲ್ಲ. ಆಗ ಗಂಗವ್ವನೇ ಸೆಟಗೊಂಡು ಹೋದಳು.

ಹೀಗೆ ಕೆಲ ದಿನ ಕಳೆದುವು. ಪದ್ಮಾವತಿ ಬೇಡ ಬೇಡವೆಂದರೂ ಆದಪ್ಪ ಮಾಸ್ತರರು ಬಾಬಣ್ಣನ ಹುಡುಗನನ್ನು ಒಯ್ದು ಸಾಲೆಗೆ ಹೆಸರು ಹಚ್ಚಿದರು. ಪಾಟಿ ಪೆನ್ಸಿಲುಗಳನ್ನು ಕೊಂಡುಕೊಟ್ಟರು. ಮಧ್ಯಾಹ್ನದ ಬಿಡುವಿನಲ್ಲಿ

ಆತನನ್ನು ಊಟಕ್ಕೆ ತಮ್ಮ ಮನೆಗೇನೇ ಕರೆದುಕೊಂಡು ಹೋಗುವರು ಬಾಬಣ್ಣನಂಥವರು ಯೋಗ್ಯ ಶಿಕ್ಷಣವಿಲ್ಲದುದಕ್ಕೆ ಹೀಗೆ ವರ್ತಿಸುವರು ಅವರ ಮಕ್ಕಳಾದರೂ ಸುಶಿಕ್ಷಿತರಾದರೆ ದೇಶದ ಇಂಥ ಪರಿಸ್ಥಿತಿ ದೂರವಾಗುವುದ ರಲ್ಲಿ ಏನೂ ಸಂಶಯುವಿಲ್ಲ, ಎಂದು ಅವರ ನಂಬುಗೆ.

ಇಷ್ಟರಲ್ಲಿ ಓಂದು ದಿನ ತಾಲೂಕ ಕಚೇರಿಯಿಂದ ಬಾಬಣ್ಣನ ಹೆಸರಿ ಗೊಂದು ನೋಟೀಸೂ ಬಂದಿತು. ಸಾಲ ಪರಿಹಾರ ಸಂಬಂಧದಲ್ಲಿ ಅವನು ಮಾಡಿದ ಅರ್ಜಿಯ ವಿಚಾರಣೆಯಾಗುವದಿತ್ತು. ಅದಕ್ಕೆ ಬಾಬಣ್ಣ ಹಾಜ ರಿರಬೇಕಾಗಿತ್ತು. ಆದರೆ ಅವನೇ ಊರಲ್ಲಿ ಇರಲಿಲ್ಲ. ಎಲ್ಲಿರುವನೆಂಬುದೂ ಗೊತ್ತಿರಲಿಲ್ಲ. ಇದು ಕಲ್ಲಪ್ಪನಿಗೂ ಸೆಟ್ಟರಿಗೂ ಬೇಕಾದ ಸಂಗತಿಯಾಗಿತ್ತು. ಅವರಿಗೆ ಆನಂದವೇ ಆಯಿತು.

" ಕಳ್ಳ ಸೂ.... ಮಗ ಹೊಲ ಬಿಡಿಸಿಕೊಳ್ಳತಾನಂತ ಹೊಲ! ಊರೊ ಳಗ ಇರಲಿಕ್ಕೆ ದಿಕ್ಕಿಲ್ಲ ಸೂ.... ಮಗನಿಗೆ!"

ಎಂದು ಕಲ್ಲಪ್ಪನಂತೂ ಸಿಕ್ಕ ಸಿಕ್ಕವರ ಮುಂದೆ ಅನ್ನುತ್ತ ತಿರುಗ ತೊಡಗಿದ. ಸೆಟ್ಟರೊಡನೆ ಸೇರಿ ಮುಂದಿನ ಕಾರ್ಯದ ಬಗ್ಗೆ ಅಪ್ತಾಲೋಚನೆ ಯನ್ನೂ ನಡೆಯಿಸಿದ.

ಇದನ್ನೆಲ್ಲ ಕಂಡು ಆದಪ್ಪ ಮಾಸ್ತರರಿಗೆ ಚಿಂತೆ. ಈಗ ಬಾಬಣ್ಣ ಎಲ್ಲಿ ಯಾದರೂ ಇರುವನೆಂದು ತಿಳಿದರೆ ಹೋಗಿ ಕರೆದು ತರಬಹುದಾಗಿತ್ತು, ಎಂದು ಯೋಚಿಸುವರು ಒಮ್ಮೊಮ್ಮೆ ಮನಸಿನಲ್ಲಿ ಬರುವದು 'ಇರುವನೋ ಸತ್ತಿರುವನೋ ಯಾರಿಗೆ ಗೊತ್ತು?' ಎಂದು. ಆಗ ಅವರಿಗೆ ತಮ್ಮ ತಂದೆಯ ಮೇಲೆ ಬಹಳ ಸಿಟ್ಟು ಬರುವದು. ಆದರೂ ಆಗಿ ಹೋದ ಕಾರ್ಯಕ್ಕೆ ಏನೂ ಅಂದು ಉಪಯೋಗವಿರಲಿಲ್ಲ. ಮುಂದಿನ ಕಾರ್ಯದ ವಿಚಾರವನ್ನೇ ಅವರು ಯೋಚಿಸಬೇಕಾಗಿತ್ತು.

ಪದ್ಮಾವತಿಯ ಕಡೆಯಿಂದ ಸಾಲ ಪರಿಹಾರ ಸಮಿತಿಯವರಿಗೆ ಒಂದು ಅರ್ಜಿಯನ್ನು ಕೊಡಿಸಬೇಕೆಂದು ಆದಪ್ಪ ಮಾಸ್ತರರು ವಿಚಾರಿಸಿದರು. ಅದ ರಂತೆ ತಾಲೂಕಿಗೆ ಹೋಗಿ ವಿಚಾರಿಸಿಕೊಂಡೂ ಬಂದರು. ಇನ್ನೂ ಮುದ್ದತ್ತು ಹದಿನೈದು ದಿನಗಳವರೆಗೂ ಇತ್ತು.

ಬರೆಯಬೇಕಾದುದನ್ನೆಲ್ಲ ಅರ್ಜಿಯಲ್ಲಿ ಬರೆದರು. ಪದ್ಮಾವತಿಯ ಕಡೆಗೆ ಹೆಬ್ಬೊಟ್ಟಿನ ಗುರುತಿಗಾಗಿ ತನ್ನ ತಾಯಿಯ ಕಡೆಯಿಂದ ಕೊಟ್ಟು ಕಳಿಸಿದರು. ಆದರೆ ಅದಕ್ಕೆ ಪದ್ಮಾವತಿ ತನ್ನ ಅಂಕಿತ ಕೊಡಲಿಲ್ಲ.

“ ಬಂಗಾರದಂಥ ಅವರೇ ಹೋದ ಮೇಲೆ ಈ ಹೊಲ ಮನೆ ತಗೊಂಡ ಏನು ಮಾಡಬೇಕಾಗೇದ ನನಗ ? ”

ಎಂದು ಕೇಳಿ ನಿರಾಕರಿಸಿದಳು. ಪದ್ಮಾವತಿಯ ಈ ನಿರಾಶೆಗಾಗಿ ಆದಪ್ಪ ಮಾಸ್ತರರೂ ಅವಳ ಮನೆಯ ತನಕ ಹೋಗಬೇಕಾಯಿತು. ಅನೇಕ ಉಪದೇಶದ ಮಾತುಗಳನ್ನು ಹೇಳಬೇಕಾಯಿತು. ತಾಸೆರಡು ತಾಸುಗಳವರೆಗೆ ಬೋಧಿಸಿದರು. ಮಕ್ಕಳ ಮುಖದ ಕಡೆಗೆ ನೋಡಿ ಅರ್ಜಿಗೆ ಅಂಕಿತ ಹಾಕೆಂದರು ಕಣ್ಣೀರು ಮಿಡಿದರು.

ಮಾಸ್ತರರ ಸ್ಥಿತಿಯನ್ನು ಕಂಡು ಪದ್ಮಾವತಿಗೆ ಬೇರೆ ಭಾವನೆಯೇ ಉಂಟಾಯಿತು. ತನ್ನ ಗಂಡ ಇಹಲೋಕದಲ್ಲಿಯೇ ಇಲ್ಲ. ಇದು ಇವರಿಗೆ ತಿಳಿದಿದೆ. ಅಂತಲೇ ನನ್ನನ್ನು ಮುಂದೆ ಮಾಡುವರು. ಆದರೂ ನನಗೆ ನಿಜ ಸಂಗತಿಯನ್ನು ದುಃಖಿಸುವೆನೆಂದು ತಿಳಿಸರು, ಎಂದು ಅನುಮಾನಿಸಿದಳು. ಅದರಿಂದ ಒಮ್ಮೆಲೇ ಅಳಲಿಕ್ಕೆ ಆರಂಭಿಸಿದಳು.

“ ಅವರು ಜೀವಂತ ಇದ್ದಾರೋ ಇಲ್ಲ, ಹೇಳಿರಿ ಮಾಸ್ತರರ. ಏನು ಆದದ್ದ ಹೇಳಿರಿ. ನನ್ನ ಮುಂದ ಮುಚ್ಚಿ ಇಡಬೇಡಿರಿ ! ” ಎಂದು ಅಂಗಲಾಚಿ ಕೇಳಿದಳು.

ಪಾಪ ಮಾಸ್ತರರಿಗೆ, ಪದ್ಮಾವತಿಗೆ ಏನು ಸಮಾಧಾನ ಹೇಳಬೇಕೆಂಬುದು ತಿಳಿಯದಾಯಿತು. ಅವಳೊಡನೆ ತಾವೂ ಕಣ್ಣೀರು ಸುರಿಸಿದರು. ಈಗ ಹೆಬ್ಬೊಟ್ಟಿನ ಗುರುತು ತಕ್ಕೊಳ್ಳುವುದು ಸರಿಯಲ್ಲ, ಇನ್ನೂ ಹತ್ತೆಂಟು ದಿನ ಅವಕಾಶವಿದೆ, ತಕ್ಕೊಂಡರಾಯಿತು ಎಂದು ಮನೆಗೆ ಬಂದರು ಪದ್ಮಾವತಿಯ ಸ್ಥಿತಿಯನ್ನು ನೆನೆದು ಮನದಲ್ಲಿ ಮರಮರ ಮರುಗಿದರು.

ಮಗನ ಈ ಎತ್ತುಗಡೆಯನ್ನೆಲ್ಲ ನೋಡುತ್ತಿದ್ದ ಮಾಸ್ತರರ ತಂದೆ ಅಂದರು:

“ ಹೇಡೀ ಬೆನ್ನ ಕಟ್ಟಬಾರದು, ಹೇಸೀ ಮದುವೆಗೆ ಹೋಗಬಾರದಂತ. ಸುಮ್ಮನೆ ಅರ್ಜಿ ಗಿರ್ಜಿ ಏನು ಮಾಡಲಿಕ್ಕೆ ಹತ್ತಿರುವಿ ? ಮತ್ತ ಊರೊಳಗೆ ನಾವು ನಾಲ್ಕ ಮಂದಿಗೆ ಕೆಟ್ಟೇ ಆಗುವದಲ್ಲ. ”

"ಆಗಲಿಕ್ಕೆ ಬೇಕಲ್ಲ. ಅಪ್ಪ ಮಾಡಿದ್ದನ್ನ ಮಕ್ಕಳ ತೀರಿಸಲಿಕ್ಕೆ ಬೇಡಾ ?" ಎಂದು ಕೆರಳಿದ ಧ್ವನಿಯಲ್ಲಿ ಮಾಸ್ತರರು ತಂದೆಗೆ ಕೇಳಿದರು.

"ನಾನೇನ ಮಾಡಿದೇನು ಆ ತುಡುಗ ಸೂ.... ಮಗನಿಗೆ ? ಹತ್ತೆಂಟ ದಿನ ಹೊಲದೊಳಗಿನ ತೆನೆ ತರತಿದ್ದ. ಹಿಡಿದರೇನಾಯ್ತು ? ಅವನೇನು ತುಡುಗ ಮಾಡಿದ್ದು ಸುಳ್ಳೇನು?"

"ಮಾಡಿದ್ದು ನಿಜ. ಅಷ್ಟು ತಪ್ಪಿಗೆ ಎಂಥ ಶಿಕ್ಷೆ ನೋಡಿದು ? ಅಲ್ಲೇ ಹೊಲದೊಳಗೆ ಕಡಿಯುವಾಗಲೇ ಹಿಡಿದು, ಮರ್ಯಾದೆಯಿಂದ ನಾಲ್ಕು ಬುದ್ಧಿ ಮಾತು ಹೇಳಿ ಬಿಟ್ಟಿದ್ದರೆ ಹೇಗೆ ? ಇದು ಜನರೊಳಗೆ ತಂದು ಮಾನ ಹಾನಿ ಮಾಡಿದ್ದು ಹೇಗೆ ? ನೀನೇ ನೋಡು, ನೀ ಮಾಡಿದ್ದು ನೆಟ್ಟಗಾಯ್ತೇನು ?" ತಂದೆಗೆ ಮಗ ಪ್ರಶ್ನೆ ಹಾಕಿದ.

"ಕಲಿತವರೆಲ್ಲ ನೀವು ಹೀಗೇನೋ. ನಾಳೆ ನಾ ಸತ್ತ ಮರುದಿನ ನಾ ಗಳಿಸಿದ ಹೊಲ ಅಷ್ಟ ಕಳಕೊಂಡು, ಎಲ್ಲಿಯಾದರೂ ಇಷ್ಟ ನೌಕರಿ ಮಾಡ್ತ ಬುಟ್ಟಿಯೊಳಗ ಕಾಳ ಕೊಂಡ ತಂದ ತಿನತ ತಿರಗುವ ಜಾತಿ ನಿಮ್ಮದು. ನಮ್ಮಂತೆ ಏನು ಜೋಳದ ಚೀಲಗಳ ನಿಟ್ಟು ನಿಮ್ಮ ಮನೆಯೊಳಗೆ ಇರುವದಿಲ್ಲ, ಏನಿಲ್ಲ."

ತಂದೆಯ ಮಾತಿಗೆ ಆದಪ್ಪ ಏನೂ ಉತ್ತರ ಕೊಡಲಿಲ್ಲ. ಅವನ ವಿಚಾರಕ್ಕೂ ತನ್ನ ವಿಚಾರಕ್ಕೂ ಅಂತರ ಬಹಳ. ಅವು ಹೊಂದುವಂತೆಯೂ ಇಲ್ಲ. ಸುಮ್ಮನೆ ವಾದಿಸಿ ಉಪಯೋಗವಿಲ್ಲೆಂದು ಮೌನ ತಾಳಿದ. ಆದರೆ ಒಳಮುಗ್ಗಲಿಗೆ ಇದ್ದ ಚಂದ್ರವ್ವ ಸುಮ್ಮನಿರಲಿಲ್ಲ. ಗಂಡನಿಗೆ ಉತ್ತರವಿತ್ತಳು,—

"ಜೋಳದ ನಿಟ್ಟು ತಗೊಂಡು ಏನು ಸುಡುವದದ ಏನು ? ಮನಸ್ಸಿಗೆ ಸಮಾಧಾನ ಇಲ್ಲದಿದ್ದರೆ ತಗೊಂಡು ಏನು ಮಾಡುವದದು?" ತುಸು ತಡೆದು "ಈಗ ನೋಡು. ಆ ಬಡವ ಜೀವಕ್ಕೆ ಏನಾದರೂ ಮಾಡಿಕೊಂಡಿದ್ದ ಅಂದರೆ ಜನ್ಮ ತನಕ ನಮ್ಮ ತಲೆಗೆ ಅಪಕೀರ್ತಿ ಬಂತಿಲ್ಲ ?" ಎಂದು ಕೇಳಿದಳು.

"ಅಪಕೀರ್ತಿ ಯಾತರದು ? ಅವನೇಕೆ ಹಾಗೆ ಮಾಡಬೇಕು ? ಊರೊಳಗೆ ಎಲ್ಲರಿಗೂ ಅವನ ನಡತೆ ಗೊತ್ತದ. ನಮಗೆ ಯಾರೂ ಅನ್ನುವ

ದಿಲ್ಲ. ಹೊರಗೆ ಹೋಗಿ ಕೇಳಿರಿ ಒಂದ ಸ್ವಲ್ಪ. ಗೌಡ, ಸೆಟ್ಟಿ, ಕಲ್ಲಪ್ಪ ಎಲ್ಲರೂ ಅವನನ್ನೇ ಬೈಯುವರು."

"ಅವರು ಬೈದಾರು, ತಮ್ಮ ಮನೆಯೊಳಗೆ ಕೂತಾರು. ಅವನನ್ನ ಕೊಂದ ಪಾಪ ನಿಮ್ಮ ತಲೆ ಮೇಲೇ ಕೂತಿತಲ್ಲ!" ಎಂದು ನಿಟ್ಟುಸುರು ಬಿಟ್ಟು ನುಡಿದಳು.

ಆದರೆ ಆ ಪಾಪದ ಹೊರೆ ಮಾಸ್ತರರ ತಂದೆಯ ಮೇಲೆ ಬಹಳ ದಿನ ನಿಲ್ಲುವಂತಿರಲಿಲ್ಲ. ಮುಂದೆ ಒಂದು ವಾರ ಕಳೆಯುವದರಲ್ಲಿಯೇ ಬಾಬಣ್ಣ ನಿಂದ ಕಾಗದ ಬಂದಿತು. ಅದೂ ಮಾಸ್ತರರ ತಂದೆಯ ಹೆಸರಿಗೇನೇ.ನೋಡಿ ಎಲ್ಲರೂ ಬೆರಗಾದರು ಓದಿಸಿ ಕೇಳಿದರು: ಅದರಲ್ಲಿ ವಿಶೇಷವೇನಿರಲಿಲ್ಲ.

"ಟೆನೆಸ್ಸಿ ಬಿಲ್ಲಿನ ಪ್ರಕಾರ ಹೊಲವನ್ನು ನೀವು ಅನ್ಯರಿಗೆ ಲಾವಣಿ ಕೊಡುವಂತಿಲ್ಲ. ಯಾವಾಗಾದರೂ ಅದು ನನ್ನದೇ ಹೊಲ. ಸಾಗುವಳಿ ಮಾಡುವ ಕಾಲಕ್ಕೆ ಬರುವೆ. ಸರಕಾರ ಹೇಳಿದ ರೀತಿ ಪಾಲ ಹಾಕುವೆ." ಎಂದಿಷ್ಟೆ ಬರೆಯಿಸಿದ್ದ.

ಕಾಗದದಲ್ಲಿ ಏನು ಬರೆಯಿಸಿರುವನೆಂಬುದರ ಗೊಡವೆ ಚಂದ್ರವ್ವನಿಗೆ ಇರಲಿಲ್ಲ. ಬಾಬಣ್ಣ ಜೀವಂತ ಇದ್ದಾನೆಂಬುದೇ ಅವಳಿಗೆ ತುಂಬ ಆನಂದ ವನ್ನು ನೀಡಿತು. ಕೂಡಲೆ ಪದ್ಮಾವತಿಗೆ ಈ ಸಂತೋಷದ ಸುದ್ದಿಯನ್ನು ಅರುಹಲಿಕ್ಕೆ ನಡೆದಳು.

"ನೋಡಿದಿ? ಅವನ ಸೊಕ್ಕ ಇನ್ನೂ ಇಳಿದಿದೆ. ಏನು ನೋಡು ಈಗ ನಮ್ಮ ಹೊಲವನ್ನೇ ಬಿಡಲಿಕ್ಕೆ ಸಿದ್ಧ ಇಲ್ಲ ಆತ. ನೋಡೋಣಲ್ಲ, ಮುಂದಿನ ವರ್ಷ ನಾನೇ ಮನೆಯಿಂದ ಹೊಲ ಇಡತೇನಂತ ಹೇಳಿದರೆ ಸರ ಕಾರ ಹೇಗೆ ಕೊಡಿಸುವದಿಲ್ಲ ಅನ್ನೋದ"...ಮಾಸ್ತರರ ತಂದೆ ಅಂದರು.

"ಯಾರಾದರೂ ದುಡಿದವರು ತಿಂದಾರೇಳು."....ಎಂದಿಷ್ಟೇ ನುಡಿದು ಅವಳು ಹೋದಳು.

ಸಾಲೆಯಿಂದ ಬಂದು ಆದಪ್ಪ ಮಾಸ್ತರರೂ .ಪತ್ರವನ್ನು ಓದಿದರು. ನಿರೀಕ್ಷಿಸಿದರು. ಸೊಲ್ಲಾಪುರದಿಂದ ಹಾಕಿದ ಕಾಗದವದು. ಬೇಕಂತಲೇ ಬಾಬಣ್ಣ ತಾನಿರುವ ಊರನ್ನು ಬರೆಯಿಸಿರಲಿಲ್ಲ. ಆದರೆ ಅಂಚೆಯ

ಮುದ್ರೆಯು ಮೇಲಿಂದ ಅದನ್ನು ಕಂಡುಹಿಡಿಯಲು ಒರುವಂತಿತ್ತು. ಒಂದೆ ರಡು ಸಲ ಮಾಸ್ತರರು ಕಾಗದ ಓದಿದರು. ಹೊರಳಿಸಿ ಹೊರಳಿಸಿ ನೋಡಿ ದರು ತುಸು ಹೊತ್ತು ಸುಮ್ಮನೆ ಕುಳಿತು ವಿಚಾರಿಸಿದರು. ಬಾಬಣ್ಣನ ಮನೋವೃತ್ತಿಯನ್ನು ತರ್ಕಿಸಿದರು. ಅವನೇನು ಊರಿಗೆ ತಿರುಗಿ ಬರು ವಂತಿಲ್ಲ. ಸುಮ್ಮನೆ ಏನಾದರೊಂದು ಹೀಗೆ ಬರೆಯಿಸಿರುವನಾಯಿತು ಸಾಕು, ಇಂಥ ಊರಲ್ಲಿ ಇರುವನೆಂದಾದರೂ ಗೊತ್ತಾಯಿತು. ಹೋಗಿ ಏನಾದರೂ ಸಮಾಧಾನ ಹೇಳಿ ಕರೆದುಕೊಂಡು ಬರಲಿಕ್ಕಾದರೂ ಬರುವುದು, ಎಂದು ಭಾವಿಸಿದರು. ಅದರಿಂದ ಅವರ ಮನಸ್ಸಿಗೆ ಸ್ವಲ್ಪ ಸಮಾಧಾನವೂ ಆಯಿತು. ಅದರಂತೆ ಮರುದಿನ ಪದ್ಮಾವತಿಯ ಮನೆಗೆ ಹೋಗಿ ಹೇಳಿಯೂ ಬಂದರು.

"ನಾಲ್ಕಾರು ದಿನಗಳಲ್ಲಿ ಸಾಲೆಯ ಇನಸ್ಪೆಕ್ಟರರು ಬಂದು ಹೋಗು ವವರಿದ್ದಾರೆ. ಆ ನಂತರ ನಾಲ್ಕು ದಿನ ರಜೆಹಾಕಿ, ಸೊಲ್ಲಾಪುರದ ವರೆಗೆ ನಾನೇ ಹೋಗಿ ಕರೆದುಕೊಂಡು ಬರುವೆ. ಸೊಲ್ಲಾಪುರದಲ್ಲಿದ್ದಾನೆ, ಏನೂ ಚಿಂತೆ ಮಾಡುವಂತಿಲ್ಲ."

"ಹೋಗೋದು ಒಂದು ಹಾದಿ ಹುಡುಕೋದು ಹನ್ನೆರಡು ಹಾದಿ. ಎರಡು ತಿಂಗಳಾಗಿ ಹೋಯಿತು ತಾತ್ಯಾಮಾಮಾ ಎತ್ತ ತಿರಗತ ಹೋದರೋ ಏನೋ!"

ಎಂದು ಪದ್ಮಾವತಿ ಇನ್ನೊಂದು ಚಿಂತೆಯನ್ನು ಪ್ರದರ್ಶಿಸಿದಳು.

× × × ×

ಈಗ ಮಾಸ್ತರರ ತಂದೆ ಮೂರು ನಾಲ್ಕು ದಿನಗಳಿಂದ ಗೌಡರ ಮನೆಗೆ ಎಡತಾಕುತ್ತಿದ್ದ. ಅವನಿಗೆ ಬಾಬಣ್ಣನ ಕಡೆಯಿಂದ ಹೊಲವನ್ನು ಹೇಗೆ ಬಿಡಿಸಿಕೊಳ್ಳಬೇಕೆಂಬುದೇ ಚಿಂತೆ. ಮಗ ಮಾಸ್ತರನಾದರೂ ಅವನಿಗೆ ಬುದ್ಧಿ ಯಿಲ್ಲ. ತನ್ನ ಹೊಲ ತನ್ನ ಮನೆಗಳ ವಿಚಾರವಿಲ್ಲ ಅವನಿಗೆ. ಇಂಥವನು ಮನೆಯಲ್ಲಿ ಕಲಿತವನಿದ್ದರೂ ಮಾಡುವವೇನು? ಹೊರಗೇ ಇನ್ನೊಬ್ಬರ ಹತ್ತರ ಮುದುಕನಾಗಿ ತಾನು ಬಾಯಿ ತೆರೆಯಬೇಕು. ಅವರ ಪ್ರಪಂಚದ ಚಿಂತೆ ಅವರಿಗಿಲ್ಲ. ನಾನು ಬದುಕಿರುವವರೆಗಾದರೂ ಮಾಡಲಿಕ್ಕೆ ಬೇಕಲ್ಲ,

ಎಂದು ಅವನ ವಿಚಾರ. ಅದರಿಂದ ಮನೆಯಲ್ಲಿ ಯಾರಿಗೂ ಹೇಳದೆ ಆತ ಗೌಡನ ಮುಖಾಂತರ ಪ್ರಯತ್ನ ನಡೆಯಿಸಿದ್ದ.

ಗೌಡ ಒಂದೇ ಮಾತನ್ನು ಹೇಳಿದ್ದ.

“ ಇದೇನು ದೊಡ್ಡ ಕೆಲಸ ಅಲ್ಲ. ಸಹಜ ಆಗುವ ಕೆಲಸ ಆದರೆ ಬಾಬಣ್ಣ ಊರೊಳಗೆ ಇಲ್ಲದೇನೇ ಕೆಟ್ಟಿದೆ. ಇದೇ ಹನ್ನೆರಡನೆಯ ತಾರೀಖಿನೊಳಗೆ ರೈತರಿಗೆ ನೋಟೀಸು ಕೊಟ್ಟರೆ ತೀರಿತು. ನಿಮ್ಮ ನಿಮ್ಮ ಹೊಲಗಳು ಮುಂದಿನ ವರ್ಷ ನಿಮ್ಮ ಸ್ವಾಧೀನ ಆಗುವವು. ಅದರಂತೆ ಮಾಮಲೇದಾರರಿಗೂ ಒಂದು ಅರ್ಜಿ ಹಾಕಿ ತಿಳಿಸಿದರಾಯಿತು. ಬಾಬಣ್ಣನ ವಿಳಾಸ ತಂದಿದ್ದರೂ ಆಗುತ್ತಿತ್ತು. ”

“ ಅವನ ಪತ್ತೆ ಇಲ್ಲ ಎಲ್ಲಿಂದ ತರಲಿ? ”

ಎಂಬುದೇ ಮಾಸ್ತರರ ತಂದೆಯ ಚಿಂತೆ. ಸೊಲ್ಲಾಪುರ ದೆವ್ವಿನಂತಹ ದೊಡ್ಡ ಊರು. ಅಲ್ಲಿ ಎಲ್ಲಿರುವನೋ ಯಾರಿಗೆ ಗೊತ್ತು? ಇನ್ನು ನೋಟೀಸು ಕೊಡುವ ಅವಧಿಯೂ ಮೂರೇ ದಿನ ಉಳಿಯಿತು. ನಿನ್ನೆ ಮಾಸ್ತರ ಮಗ ಹುಡುಕಿ ಕರಕೊಂಡು ಬರುವೆನೆಂದು ಹೋಗಿರುವ. ಎರಡು ದಿನಗಳಲ್ಲಿ ಕರಕೊಂಡು ಬಂದರೆ ಒಳ್ಳೇದಾಗುವುದು. ಇಲ್ಲವಾದರೆ ಮುಂದಿನ ಸುಗ್ಗಿಯೊಂದು ಬಾಬಣ್ಣನ ಕಡೆಗೇ ಹೊಲ ಉಳಿಯುವುದು. ಕಾಂಗ್ರೇಸ ಸರಕಾರವಂತೆ, ನಮ್ಮವರಂತೆ. ಏನು ಕಾಯಿದೆಗಳನ್ನು ಮಾಡುವರೋ! ಹಚ್ಚಿದ ಹೊಲ ರೈತನ ಕಡೆಯಿಂದ ತಿರುಗಿ ತಕ್ಕೊಳ್ಳುವ ಅಧಿಕಾರ ಮಾಲಕರಿಗೇ ಇಲ್ಲವಂತೆ! ಏನು ಸರಕಾರ, ಏನು ವ್ಯವಸ್ಥೆ, ಎಂದು ಹಗಲಿರುಳೂ ಕಾಂಗ್ರೇಸ ಜನರನ್ನು ಮನದಲ್ಲಿ ಶಪಿಸುತ್ತಲೇ ಮುದುಕನಿದ್ದ.

ಮೊದಲು ಆದಪ್ಪ ಮಾಸ್ತರರು ಬಾಬಣ್ಣನನ್ನು ಹುಡಿಕಿಕೊಂಡು ಬರಲಿಕ್ಕೆ ಹೋಗುವದೆಂದರೆ ಇದೇ ತಂದೆಗೆ ಸಿಟ್ಟು ಬರುತ್ತಿದ್ದಿತು. ಈಗ ಮಗನು ಒಂದೆರಡು ದಿನಗಳಲ್ಲಿ ಎಲ್ಲಿಂದಾದರೂ ಬಾಬಣ್ಣನನ್ನು ಕರೆದುಕೊಂಡು ಬರುದಾನೆಯೇ ಎಂದು ದಾರೀ ಕಾಯುತ್ತಲಿದ್ದ.

ಮುದುಕನ ನಿರೀಕ್ಷೆ ಸಫಲವಾಯಿತು. ಆದರೆ ತನ್ನ ಮಗನಿಂದ ಅಲ್ಲ, ತಾತಪ್ಪನ ಕಡೆಯಿಂದ. ಅದೇ ದಿನ ಸಾಯಂಕಾಲಕ್ಕೆ ಬಾಬಣ್ಣನನ್ನು ಕರೆದುಕೊಂಡು ತಾತಪ್ಪ ಬಂದನೆಂದು ಸುದ್ದಿ ಹತ್ತಿತು. ಏನೋ ಬಾಬಣ್ಣನ

ವ್ಟೆಯಲ್ಲಿ ನೆಟ್ಟಗಿಲ್ಲವಂತೆ. ನಾಲ್ಕೆಂಟು ದಿನಗಳಿಂದ ಅಲ್ಲಿಯೂ ಹಾಸಿಗೆ ಯನ್ನೇ ಹಾಕಿದ್ದನಂತೆ ಊರ ಕಡೆಗೆ ಬರಲೂ ಒಪ್ಪುತ್ತಿರಲಿಲ್ಲವಂತೆ. ಅವನಿಗೆ ಊರೊಳಗಿನ ಜನರಿಗೆ ಮುಖ ತೋರಿಸುವುದೇ ಬೇಡೆನಿಸಿತ್ತು. ಆದರೆ ತಾತಪ್ಪ ಆಗ್ರಹದಿಂದ ಉಗಿಬಂಡಿಯಲ್ಲಿ ಹಾಕಿಕೊಂಡು ಬಂದಿದ್ದಾನೆ. ಹುಡುಗ ಬಹಳ ಸೋತಿದ್ದಾನೆ. ಗಡ್ಡವೂ ಬೆಳೆದಿವೆ. ಇವನೇ ಬಾಬಣ್ಣನೆಂಬುವ ಗುರುತು ಕೂಡ ಹತ್ತದು. ಎಂಬ ಸಂಗತಿಗಳೆಲ್ಲ ಚಂದ್ರವ್ವನಿಂದ ಅವನಿಗೆ ಮನೆಯಲ್ಲಿ ತಿಳಿದುವು.

" ಸಾಯುವಲ್ಲನೇಕೆ ಸೂ.... ಮಗ. ಹೊತ್ತಿಗೆ ಸರಿಯಾಗಿ ಊರಿಗೆ ಬಂದ, ಸಾಕು. "

ಎಂದುಕೊಂಡು, ಗೌಡರ ಮನೆಗೆ ಓಡಿ ಹೋದ. ಅವರೂ ಅದೇ ಸಿದ್ಧತೆಯಲ್ಲಿ ಇದ್ದರು. ಇವನು ಹೋಗುವುದೇ ತಡ, ಹೇಳಿಬಿಟ್ಟರು, —

" ಇನ್ನೇನ ಚಿಂತೆ ಮಾಡ ಬೇಡ ಹೋಗ ನೀ. ಇಂದ ರಾತ್ರಿಗೆ ಬರೆದ ಇಟ್ಟಿರತೇನೆ. ನಾಳೆ ಮುಂಜಾನೆ ಬಾ. ಸಹಿ ಮಾಡಿ ಕೊಡುವಿ ಅಂತೆ ನಾಳಿನ ಟಪಾಲಿಗೆ ರಜಿಸ್ಟರ ಮಾಡಿ ಹಾಕಿ ಬಿಡೋಣಂದರ ನಾಡದ ಹೋಗಿ ಮುಟ್ಟತದ. ಅಂದೇ ಹನ್ನೆರಡನೇ ತಾರೀಖು. ನಿನ್ನದೇ ವೇಳೆ ಇನ್ನೂ ಸರಳ ಆದ ಹೋಗು. "

" ಬೆವರ ಸುರಿಸಿ ಗಳಿಸಿದ ಹೊಲಾ ಅದರೀ ! ಈಗ ಬಂದ ಇನ್ನೊಬ್ಬರು ಉಣ್ಣಲಿಕ್ಕೆ ನಿಂತರೆ ? "

" ನಿನ್ನದ ಅವರಿಗೆ ಹೇಗೆ ದಕ್ಕೀತು ಹೋಗೋ ! ತಿಂದರೂ ತಿರುಗಿ ಕಾರ ಬೇಕಾದೀತು. " ಗೌಡ ನಗೆಯಾಡಿದ. ಸ್ವಲ್ಪ ತಡೆದು ತಿರುಗಿ ಕೇಳಿದ " ನಿನ್ನ ಮಗಾ ಬಂದೇನ ತಿರುಗಿ ? "

" ಅದ ಎತ್ತ ತಿರಗತ ಹೋಗೆದನೊ ಇವರ ಎತ್ತಿಂದ ಬಂದರೋ ! ಒಂದಕ್ಕೊಂದ ತಾಳ ಇಲ್ಲ, ಮೇಳ ಇಲ್ಲ. "

ಮಗ ಸಾಲೆಯಲ್ಲಿ ಮಾಸ್ತರನಾದರೂ ಇವನಿಗೇನು ? ತುಚ್ಛತೆಯಿಂದ ನುಡಿದುಬಿಟ್ಟ.

× × × ×

ಬಾಬಣ್ಣನನ್ನು ಪಡಸಾಲೆಯಲ್ಲಿ ತಂದು ಹಾಕಿದರು. ತುಂಬ ಅಶಕ್ತ ನಾಗಿದ್ದ. ಅದರಲ್ಲಿ ಪ್ರವಾಸದ ಆಯಾಸ ಬೇರೆ. ಆದ್ದರಿಂದ ಅವನಿಗೆ ಆದಿನ ರಾತ್ರಿ ಜ್ವರ ತುಂಬ ಏರಿದುವು. ಬೆಳತನಕ ಬಡಬಡಿಸಿದ ತಾತಪ್ಪ ಅಳಿಯನ ಹಾಸಿಗೆಯ ಹತ್ತರವೇ ಕುಳಿತು ಆರೈಕೆ ಮಾಡುತ್ತಿದ್ದ. ಅವನ ಕಣ್ಣು ಗಳೂ ಒಳನಟ್ಟಿದ್ದುವು. ಮುಖ ನಿಸ್ತೇಜವಾಗಿತ್ತು. ಎರಡು ಮೂರು ತಿಂಗ ಳಿಂದ ಕ್ಷೌರವಿಲ್ಲದ ಮುಖ ಅಸಹ್ಯವೇದನೆಯಿಂದ ಕಂದಿತ್ತು. ಅವನ ಸೋದ ರಳಿಯ ಬಾಬಣ್ಣ, ಅವನ ಸ್ಥಿತಿಯೂ ಹಾಗೆಯೇ ಇತ್ತು.

ಪದ್ಮಾವತಿ ಪತಿಯ ಆರೈಕೆಗೆ ಬಂದಳು. ಬಾಬಣ್ಣ ಗೋಡೆಯ ಕಡೆಗೆ ಮುಖ ತಿರುವಿ ಮಲಗಿದ. ಮಕ್ಕಳು ಮಾತನಾಡಲಿಕ್ಕೆ ಬಂದರು. "ಅಯ್ಯೋ ನಮ್ಮೂರವರು ಬಂದರೋ!" ಎಂದು ಒತ್ತಿ ಮುಖಕ್ಕೆ ಮುಸುಕು ಹಾಕಿ ಮಲಗುವನು. ಏನು ಮಾಡಿದರೂ ಮುಖ ತೆರೆಯಲಿಲ್ಲ.

ಪದ್ಮಾವತಿಗೆ ತಾತಪ್ಪ ಹೇಳಿದ.

"ಯಾರ ಬಂದರೂ ನೀನೇ ಹೊರಗೆ ಹೋಗಿ ಮಾತಾಡಿಸಿ ಕಳಿಸಿ ಬರತ ಬಾ. ಇಲ್ಲಿ ಬಂದರೆ ಇವನಿಗೆ ಕಷ್ಟ ಆಗತದ."

"ಹೊರಗಿನವರ ಬಂದಾಗ ಒಂದ ಹಾಗೆ ಮಾಡಿದರೆ ಏನಾದರೂ ಮಾಡಲಿಕ್ಕೆ ಬಂದೀತು. ನಾವು ಮನೆಯವರು ಇದ್ದಾಗೂ ಹೀಗೇ ಅಂದರೆ...." ಪದ್ಮಾವತಿ ತುಂಬ ನೊಂದುಕೊಂಡು ನುಡಿದಳು. ಧ್ವನಿಯು ಸ್ವಲ್ಪ ಸಿಡುಕಿ ನಿಂದ ಕೂಡಿದ್ದಿತು.

"ಅವನ ಮೇಲೆ ಸಿಟ್ಟಿಗೆ ಬರುವ ಪುಣ್ಯ ಉಳದಿಲ್ಲ ಈಗ ಪದ್ಮಾವತಿ. ಅವನು ಮೊದಲು ಊರಿಗೆ ಬರಲಿಕ್ಕೇ ತಯಾರ ಇರಲಿಲ್ಲ. ನಾನೇ ಆಗ್ರಹ ದಿಂದ ಗಾಡಿಯೊಳಗ ಹಾಕಿಕೊಂಡು ಬಂದಿದೇನೆ. ಮನೆ ಬಿಟ್ಟ ಮೇಲೆ ಅಂಗಳ ಪರದೇಶಿ ಅಂತ. ಅಲ್ಲಿ ಯಾರ ಕೇಳಬೇಕು ನಮ್ಮನ್ನ?"

"ಎಲ್ಲಿದ್ದರು?" ಮಾವನ ಮಾತನ್ನು ತಡೆದು ಪದ್ಮಾವತಿ ಕೇಳಿದಳು.

"ಸೊಲ್ಲಾಪುರದೊಳಗೆ ಇದ್ದ. ಗಿರಣಿಯೊಳಗ ಕೆಲಸ ಮಾಡತಿದ್ದ. ಎಲ್ಲಿಯಾದರೂ ತಿನ್ನೋದು, ಎಲ್ಲಿಯಾದರೂ ಮಲಗೋದು. ಒಂದೊಂದು ದಿನ ಸಿಗರೇಟ ಸೇದತ ಕುಳಿತ ಅಂದರೆ ಊಟದ ವೇಳೆ ತನಕ ಸೇದತ ಇರ ತಿದ್ದ ಅಂತ. ಅಲ್ಲಿ ಯಾರು ಕೇಳುವವರು, ಹೇಳುವವರು. ಹೀಗಾಗಿ ಅವನ

ಪ್ರಕೃತಿ ಎಲ್ಲಾ ಹಾಳ ಆಗಿ ಹೋಗೇದ. ಕಣ್ಣಿಗೆ ಹೀಗೆ ಕಾಣತಾನ ಆದರೂ ಒಳಗೆ ಹುಳ ತಿಂದ ಕೊರಡ ಇದ್ದಂತೆ ಇಂದಿಗೆ ಹನ್ನೆರಡು ದಿನ ಆಯ್ತು ಉರಿ ಬಂದ "

" ಎಲ್ಲಿ ಮಲಗಿದ್ದರು ? "

" ಎಲ್ಲೇನು ? ಇವನಂಥವರೇ ಕೂಲಿ ಜನರ ಮನೆಯೊಳಗ ಬಿದ್ದಿದ್ದ. ನನಗಾದರೂ ಈತ ಸಿಗತಿದ್ದ ಅನ್ನುವಿ ಏನು ? ಹೀಗೇ ನೂರಾರ ಊರ ತಿರಗಿದೆ. ಬೇಸತ್ತ ಸೊಲ್ಲಾಪುರಕ್ಕೆ ಬಂದಿದ್ದೆ. ಅಲ್ಲಿ ನಮ್ಮ ಮದಬಾಂವಿ ಸಿದ್ದ್ಯಾ ಗಿರಣಿಯೊಳಗ ಕೂಲಿಗೆ ಇದ್ದಾನ. ಸಹಜ ಒಂದಿನ ಅವನ ಭೆಟ್ಟಿ ಆಯ್ತು. ಅವನನ್ನ ಹಿಡಿದು ಗೊತ್ತ ಹಚ್ಚಿದ ಮೇಲೆ ಸಿಕ್ಕ. ಏನ ಹೇಳಲಿ ಆ ಕತೆ ? " ಎಂದು ತಾತಪ್ಪ ದುಃಖದಿಂದ ಮಾತು ಮುಗಿಸಿದ

ನಿಜವಾಗಿಯೂ ಬಾಬಣ್ಣನಿಗೆ ಊರಿಗೆ ಬರುವ ಇಚ್ಛೆ ಇರಲಿಲ್ಲ. ತಮ್ಮ ಕಡೆಯವರು ಯಾರಾದರೂ ಬಂದರೆಂಬ ಸುದ್ದಿ ತಿಳಿದರೂ ಅವನ ಮುಖ ಸಪ್ಪಗಾಗುತ್ತಿದ್ದಿತು. ಮುಖ ತಿರುವಿಕೊಂಡು ಎಲ್ಲಿಯೋ ಒಂದು ಕಡೆಗೆ ಹೋಗಿ ಬಿಡುತ್ತಿದ್ದ. ಜ್ವರದ ಉಪದ್ರವ, ಅಶಕ್ತತೆ, ತಾತಪ್ಪನ ಆಗ್ರಹಗಳಿಂದ ಊರಿಗೆ ಬಂದಿದ್ದನಾತ. ಇಲ್ಲಿ ಬಂದರೂ ಯಾರ ಮುಖವನ್ನೂ ನೋಡಲಿಕ್ಕೆ ಅವನಿಗೆ ನಾಚಿಕೆ. ನೊಂದ ಹೃದಯ. ಮೇಲೆ ತುಂಬ ಜ್ವರ

ಆದೊಂದು ದಿನ ಕಳೆಯಿತು. ಬಾಬಣ್ಣನ ಜ್ವರ ತಗ್ಗಲಿಲ್ಲ. ಮನೆಗೆ ಬರುವ ಹೋಗುವ ಜನ ಇರಿವೆಗಳ ಸಾಲಿನಂತೆ ಹತ್ತಿಯೇ ಇದ್ದಿತು. ಇದರಿಂದ ಅವನಿಗೆ ಇನ್ನಿಷ್ಟು ಬೇಜಾರು. ಹೊರಗೆ ಇನ್ನೊಬ್ಬರ ಧ್ವನಿ ಕೇಳಿದನೋ ಇಲ್ಲಿ ಹಾಸಿಗೆಯಲ್ಲಿಯೇ ತಳಮಳಿಸುವನು, ಕಳವಳಿಸುವನು.

" ಹೀಗೇಕೋ ಬಾಬು, ಅವರೇನ ಮಾಡತಾರೋ ನಿನಗ ? "

ತಾತಪ್ಪ ಸಮಾಧಾನ ಹೇಳುವ.

" ನನ್ನ ಕಡೆಗೆ ನೋಡಿ ನಗತಾರಲ್ಲ ? "

ಬಾಬಣ್ಣ ಬಡಬಡಿಸುವನು.

" ನಕ್ಕ ನಿನಗೇನ ಮಾಡತಾರೋ? ಅವರ ನಗೆಗೆ ನೀನೇಕೆ ಅಂಜುವಿ? ಜಗ ನಗತs ಇರತದ. ಯಾರನ್ನ ನೋಡಿ ನಗುವದಿಲ್ಲ ? ಇನ್ನೊಬ್ಬರನ್ನ ನೋಡಿ ನಗುವದು ಅದರ ಸ್ವಭಾವ. ತಮ್ಮನ್ನ ನೋಡಿ ಎರಡನೆಯವರೂ ನಗತಿರತಾರ ಅಂಬೋದ ಅವರಿಗೆ ತಿಳದಿರುವದಿಲ್ಲ. "

"ನನ್ನ ನೋಡಿ ಅವರ ಹೇಗೆ ಗುಜುಗುಜು ಮಾತ ಆಡತಾರ ನೋಡು." ಹುಚ್ಚರಂತೆ ದಿಗ್ಗನೆ ಎದ್ದು ಕುಳಿತು, ಕೈಮಾಡಿ ತೋರಿಸಿ "ನೋಡಿದಿ? ಅಲ್ಲಿ ನೋಡ ಅಲ್ಲಿ, ನೀರ ಕೊಡ ತಲೆ ಮೇಲೆ ತಗೊಂಡ ಹೊರಟಾರ ನೋಡು ಅಲ್ಲಿ—ಹ್ಯಾಗ ನನ್ನ ಕಡೆಗೆ ಹೊರಳಿ ಹೊರಳಿ ನೋಡಿ ನಗತಾರ—ಮತ್ತ ತಮ್ಮೊಳಗ ಮಾತಾಡತಾರ....ಅಯ್ಯೋ....!"

ಎಂದೇನೇನೋ ಅನ್ನುವನು. ತಾತಪ್ಪ ಒತ್ತಿ ಹಿಡಿದು ಕೆಳಗೆ ಮಲಗಿಸುವನು. ಮೈಮೇಲೆ ಅರಿವೆಗಳನ್ನು ಚನ್ನಾಗಿ ಹೊದಿಸುವನು. ಆ ದಿನ ಹೀಗೇ ಕಳೆಯಿತು. ಸಂಜೆಯವರೆಗೆ ಅನೇಕ ಸಲ ಬಾಬಣ್ಣ ಹಾಸಿಗೆ ಬಿಟ್ಟು ಏಳುವ. ಕೈ ಕಡಿದುಕೊಳ್ಳುವ. ಮುಖ ಮುಚ್ಚಿಕೊಂಡು ಅಳುವ. ಒತ್ತಿ ಹಿಡಿದು ಮಲಗಿಸುವರು. ತಂದೆಯ ಸ್ಥಿತಿಯನ್ನು ಕಂಡು ಮನೆಯ ಮಕ್ಕಳು ಸಮೀಪಕ್ಕೆ ಬರಲಿಕ್ಕೂ ಹೆದರತೊಡಗಿದವು.

ಆದಿನ ಇರುಳು ಯಾರಿಗೂ ನಿದ್ರೆಯಿಲ್ಲ. ಬಾಬಣ್ಣನ ನಿದ್ರೆಯಂತೂ ಎಂದೋ ಹಾರಿ ಹೋಗಿದ್ದಿತು. ಇಂದು ಅವನಿಗೆ ಕೆಮ್ಮು ಆರಂಭವಾಯಿತು. ಎದೆಯೂ ಬಿಗಿಯಿತು ಕಫ ಹೆಚ್ಚಾಗಿರಬೇಕು. ಮರುದಿನ ಬೆಳಗಾಗುತ್ತಲೇ ತಾತಪ್ಪ ಅಪ್ಪಣ್ಣನ ಕಡೆಯಿಂದ ಡಾಕ್ಟರನ್ನು ಕರೆಯಿಸಿದ.

ಡಾಕ್ಟರರು ಬಂದು ನೋಡಿದರು. ಆಗ ಬಾಬಣ್ಣ ಸಿಕ್ಕ ಸಿಕ್ಕದ್ದನ್ನು ಬಡಬಡಿಸುತ್ತಲಿದ್ದ. ಒಮ್ಮೆ ಸ್ಮೃತಿಯ ಮೇಲೆ ಇರುವ, ಇನ್ನೊಂದು ಕ್ಷಣದಲ್ಲಿ ಸ್ಮೃತಿ ಹಾರುವದು.

"ನನಗೇನು ಆಗಿದೆ? ನನ್ನನ್ನೇಕೆ ನೋಡಲಿಕ್ಕೆ ಬಂದಿರುವರು?"

ಎಂದೂ ಕೇಳುವನು. ಅವನನ್ನು ಸಮಾಧಾನ ಪಡಿಸಿ, ಡಾಕ್ಟರರು ಪ್ರಕೃತಿಯನ್ನು ಪರೀಕ್ಷಿಸಲು ಅನುವು ಮಾಡಿಕೊಡಲಿಕ್ಕೆಂದರೆ ಎಲ್ಲರಿಗೂ ಸಾಕುಬೇಕಾಗಿ ಹೋಯಿತು. ಡಾಕ್ಟರರು ಬಹಳ ಹೊತ್ತಿನವರೆಗೆ ನೋಡಿದರು. ಮುಖ ಕಿವುಚಿದರು. ನೋಡಿ ಹೊರಗೆ ಬಂದರು. ಸಂಗಡ ತಾತಪ್ಪ ಅಪ್ಪಣ್ಣ ಇಬ್ಬರೂ ಹೋರಗೆ ಬಂದರು. ಹತ್ತರ ಚಂದ್ರವ್ವನೂ ಇದ್ದಳು. ಡಾಕ್ಟರರು ಏನು ಹೇಳುವರೆಂದು ಎಲ್ಲರೂ ಕುತೂಹಲಿಗಳಾಗಿದ್ದರು.

"ಬಾಟಲಿ ಕೊಟ್ಟು ಕಳಿಸಿರಿ. ಔಷಧ ಕೊಡುವೆ."

ಎಂದಿಷ್ಟೇ ಹೇಳಿ ಡಾಕ್ಟರರು ನಡೆದರು. ಅಪ್ಪಣ್ಣ ಬಾಟಲಿ ತಕ್ಕೊಂಡು ಸಿದ್ಧನಾಗಿದ್ದ. ತಾತಪ್ಪ ಹಾಗೆಯೇ ಡಾಕ್ಟರರ ಹಿಂದೆ ನಾಲ್ಕು ಹೆಜ್ಜೆ ಹೋದ. ಅವರು ಹಿಂದೆ ತಿರುಗಿ ನೋಡುವ ಲಕ್ಷಣ ತೋರಲಿಲ್ಲ.

"ಏನರ್ರಿ!" ತಾತಪ್ಪನ ಬಾಯಿಂದ ಉದ್ಗಾರ ಹೊರಟಿತು.

ಡಾಕ್ಟರರು ಹೊರಳಿ ಹೇಳಿದರು:

"ಬೇನೆ ಏನು ಅಂಥಾ ದೊಡ್ಡದಲ್ಲ. ಮನಸ್ಸಿಗೆ ಬಹಳ ತಾಪ ಆಗಿದೆ. ಮೊದಲಿನಿಂದೂ ಆರೈಕೆಯೂ ಇಲ್ಲ. ಇನ್ನೂ ಮೂರ ದಿನ ಹೋಗಬೇಕು."

ದವಾಖಾನೆಯಲ್ಲಿ ಔಷಧ ಕೊಡುತ್ತ ಡಾಕ್ಟರರು ಅಪ್ಪಣ್ಣನಿಗೆ ಕೇಳಿದರು:

"ಅವನ ಅಕ್ಕನ ಎಲ್ಲಿಯೋ ಕೊಟ್ಟಿತ್ತಲ್ಲ!"

"ಹೌದರಿ! ಮ್ಯಾಲತ...."

"ಆಕೆಗೆ ಗೊತ್ತ ಆಗಿಲ್ಲ ಕಾಣತದ?"

"ಹೌದರಿ! ಇಂದ ಹೇಳಿ ಕಳಿಸತೇವು."

ಅಪ್ಪಣ್ಣನಿಗೆ ತಾವು ಹೇಳುವ ಮಾತಿನ ಅರ್ಥ ಹೊಳೆಯಿತೆಂದು ತಿಳಿದು ಸುಮ್ಮನಾದರು. ಔಷಧದ ಬಾಟಲಿ ಕೈಯಲ್ಲಿ ಕೊಟ್ಟರು.

ಅಪ್ಪಣ್ಣ ಔಷಧದ ಬಾಟಲಿಯನ್ನು ತಂದು ಪದ್ಮಾವತಿಯ ಕೈಯಲ್ಲಿ ಕೊಟ್ಟ. ಆಮೇಲೆ ತುಸು ತಡೆದು ತಮ್ಮ ಮನೆಯ ಕಡೆಗೆ ತೆರಳಿದ. ಮನೆಯಲ್ಲಿ ಹೆಂಡತಿಗೆ ಮೆಲ್ಲನೆ ಹೇಳಿದ:

"ಬಾಬು ತಾಳುವ ಲಕ್ಷಣ ಕಾಣುವದಿಲ್ಲ!"

"ಯಾಕೆ? ಡಾಕ್ಟರರು ಹೇಳತಿದ್ದರೇನು ನಿನ್ನ ಮುಂದೆ?" ಗಂಗವ್ವ ಕೇಳಿದಳು.

"ಇಲ್ಲ, ಬಾಳವ್ವನನ್ನು ಕರೆಯಿಸಿರಿ ಅಂದರು!"

"ಅಕ್ಕ ಏಕೆ ಬಂದಿಲ್ಲ ಅಂತ ಅಂದಿರಬೇಕು."

"ಇಲ್ಲಃ. ಅವರು ಹೇಳುವ ರೀತಿ ಹಾಗಿರಲಿಲ್ಲ."

"ಹಾಗಾದರೆ ಹೇಳಿ ಕಳಿಸಬೇಕು."

ಹೆಂಡತಿಯ ಅಪ್ಪಣೆಯನ್ನು ಪಡೆದು ಅಪ್ಪಣ್ಣ ಒಂದು ಆಳನ್ನು ಬಾಳವ್ವನ ಊರಿಗೆ ಕಳಿಸಿಕೊಟ್ಟ. ತಾನಿಷ್ಟು ಪಚಪಚ ತಿಂದು ಮತ್ತೆ ಬಾಬಣ್ಣನ ಮನೆಯ ಕಡೆಗೆ ಬಂದ.

ಇಷ್ಟರಲ್ಲಿ ಪೋಷ್ಟಮನ್ನನು ಯಾವುದೋ ಒಂದು ಕಾಗದವನ್ನು ತಕ್ಕೊಂಡು ಬಂದು, ಬಾಬಣ್ಣನ ಸಹಿ ಕೇಳಿದ.

" ನಾನು ಬಟ್ಟು ಒತ್ತಿದರೆ ನಡೆದೀತೆ ? " ಎಂದು ತಾತಪ್ಪ ಕೇಳಿದ.

" ಇಲ್ಲ. ಅವರದೇ ಬೇಕು " ಎಂದ ಅಂಚೆಯಾಳು.

" ಏನದು ? " ಎಂದ ತಾತಪ್ಪ ಚಿಕಿತ್ಸಕ ದೃಷ್ಟಿಯಿಂದ.

" ಏನೋ ನೋಟೀಸು ಅದೆ. "

" ಎಲ್ಲಿಂದ ತಾಲೂಕಿನಿಂದ ಬಂದದೆ ಏನು ? "

ಅಂಚೆಯಾಳು ಹೇಳಲಿಕ್ಕೆ ಯಾಕೋ ಅನಮಾನಿಸಿದ. ಗೌಡನಿಂದ ಸೂಚನೆಯೂ ಈ ಮೊದಲೇ ಅವನಿಗೆ ಹೋಗಿತ್ತು.

ಪದ್ಮಾವತಿ ಒಂದು ಮಾತು ಹೇಳಿದಳು.

" ನಡುವೆ ಒಮ್ಮೆ ತಾಲೂಕಿನಿಂದ ನೋಟೀಸು ಬಂದು ತಿರುಗಿ ಹೋಗಿದೆ. "

ತಾತಪ್ಪ ಹೆಚ್ಚಿಗೇನು ವಿಚಾರಿಸಲಿಲ್ಲ. ಬಾಬಣ್ಣನ ಹೆಬ್ಬಟ್ಟಿನ ಗುರುತು ಮಾಡಿಸಿಕೊಟ್ಟ. ಆಗ ಬಾಬಣ್ಣನಿಗೆ ಮೈಮೇಲೆ ಅರಿವೂ ಇರಲಿಲ್ಲ. ಹೊರಗೆ ಒಯ್ದು ಓದಿಸಿ ಕೇಳಿದರು. ಹೊಲ ಬಿಡಿಸಲು ಮಾಸ್ತರರ ತಂದೆ ಕೊಟ್ಟ ನೋಟೀಸಾಗಿತ್ತದು. ಹರಿದು ಹಾಕಿ ಒಳಗೆ ಬಂದ ತಾತಪ್ಪ ಅವನ ಉತ್ಸಾಹ ಇನ್ನೂ ಅಳಿದಿತ್ತು. ತನ್ನಲ್ಲಿಯೇ ಅಂದುಕೊಂಡ:

" ಏನು ದೊಡ್ಡ ಕೆಲಸ ಮಾಡಿದರೋ ? "

ಆದಿನ ಬಾಬಣ್ಣ ಸ್ವಲ್ಪವೂ ಸುದ್ದಿಯ ಮೇಲೆ ಬರಲಿಲ್ಲ. ಕಫ ಹೆಚ್ಚುತ್ತಲೇ ಇತ್ತು. ಉಸಿರು ಸರಳ ಆಡುತ್ತಿರಲಿಲ್ಲ. ಅಂದು ಬೇಕು ಬೇಕಾದವರು ಬಾಬಣ್ಣನ ಹತ್ತರ ಬಂದು ನೋಡಿಕೊಂಡು ಹೋದರು. ಅದಕ್ಕೆ ಅವನಿಂದ ಪ್ರತಿಕ್ರಿಯೆ ಏನೂ ನಡೆಯಲಿಲ್ಲ. ಆದರೂ ಆಗೊಮ್ಮೆ ಈಗೊಮ್ಮೆ ಬಡಬಡಿಸುವ.

" ಬಹಳ ಜನ ಕೂಡಿದರು ! ಊರೆಲ್ಲ ನೋಡಿದರು ! ಮೂರ ಮಂದಿ ನೋಡಿದರೆ ಮೂರು ಲೋಕ ನೋಡಿದಂತೆ ! "

" ಇರಲಿ ಸುಮ್ಮ ಕೂಡರಿ ಇನ್ನು !"

ಎಂದು ಪದ್ಮಾವತಿ ಕಣ್ಣೀರು ಸುರಿಸುತ್ತ ಸಮಾಧಾನ ಮಾಡಿದಳು. ಇಂದು ಅವಳ ಸ್ಥಿತಿಯೂ ಅರೆಹುಚ್ಚಿಯಂತಾಗಿದ್ದಿತು. ಮನೆಗೆ ಬಂದ ಬಂದ ವರಿಗೆಲ್ಲ:

" ನಮ್ಮವರನ್ನ ನೋಡಲಿಕ್ಕೆ ಬಂದಿರಿ ! ಬರ್ರಿ ! ನೋಡಬರ್ರಿ ! ನೋಡಿ ಹೋಗ ಬರ್ರಿ ! ನಾಳೆ ಏನು ನೋಡಲಿಕ್ಕೆ ಬರತೀರಿ ? "

ಎಂದು ಹೇಳಿ, ಒಳಗೆ ಕರೆದು ಕೊಂಡು ಹೋಗಿ ಬಾಬಣ್ಣಾನನ್ನು ತೋರಿಸುವಳು. ತಾತಪ್ಪ ಅಳಿಯನ ತಲೆದಿಸೆಗೆ ಕುಳಿತಲ್ಲಿಯೇ ಕುಳಿತಿದ್ದ. ಮೈಮೇಲೆ ಎಚ್ಚರ ಇತ್ತೊ ಇಲ್ಲವೊ !

ಮರುದಿನ ಬೆಳಗಿಗೆ ಬಾಳವ್ವ ಬಂದಳು. ಇಾದು ಬಾಬಣ್ಣಾನು ಎಚ್ಚ ರದಮೇಲೆ ಬಂದಿದ್ದ. ಸುತ್ತಲೂ ನೋಡುವ. ಎಲ್ಲರ ಮುಖವನ್ನು ಟಕ ಮಕ ನಿರೀಕ್ಷಿಸುವ. ಆದರೆ ಇದ್ದಲ್ಲಿಂದ ಗೋಣನ್ನು ಹೊರಳಿಸುವ ತ್ರಾಣವಿ ರಲಿಲ್ಲ. ಮಕ್ಕಳನ್ನು ಹತ್ತರ ತಂದು ಕೂಡಿಸಿದರು. ಬಾಬಣ್ಣಾನ ಕಣ್ಣಿಂದ ನಾಲ್ಕು ಹನಿ ನೀರು ಉರುಳಿದುವು ಏನೋ ಮಾತಾಡಬೇಕೆಂದ. ಆಗಲಿಲ್ಲ. ಪದ್ಮಾವತಿಯ ಕಡೆಗೆ ದೃಷ್ಟಿ ಬೀರಿದ. ಇಂತಹ ಪವಿತ್ರ ಜೀವಿಯ ಮೇಲೆ ಎಂಥ ಅಪವಾದ ಹೊರಸಿದ್ದೆನಲ್ಲ; ತಂದೆ ಮಗಳಂತಿರುವ ತಾತಪ್ಪ ಪದ್ಮಾ ವತಿಯರ ಬಗ್ಗೆ ಎಂಥ ಅನುಚಿತ ಸಂಬಂಧ ಜೋಡಿಸಿದ್ದೆ ಪಾಪಿ ನಾನು ! ಎಂದು ಪಶ್ಚಾತ್ತಾಪಪಟ್ಟುಕೊಂಡ. ಅಷ್ಟರಲ್ಲಿ ಪದ್ಮಾವತಿ ಹತ್ತರ ಬಂದಳು. ಮತ್ತೆರಡು ಹನಿ ಕಣ್ಣೀರು ಹೊರಬಂದುವು.

ಬಾಬಣ್ಣಾ ಬಾಯಿ ತೆರೆದ. ಹುಡುಗರು ಅಂಜಿ ಹಿಂದೆ ಸರಿದುವು.

ತಾತಪ್ಪ " ನೀರು ! ಬಟ್ಟಲೆಲ್ಲಿ ! " ಅಂದ.

ಯಾರೋ ನೀರಿನ ತಂಬಿಗೆಯೊಂದನ್ನು ತಂದು ಕೊಟ್ಟರು. ತಲೆದಿಸೆ ಯಲ್ಲಿ ಔಷಧ ಹಾಕುವ ಸಿಂಪಿಯೊಂದಿತ್ತು. ಆದರಿಂದ ನೀರು ಹಾಕಿದರು. ನಾಲ್ವರೂ ಮಕ್ಕಳ ಕೈ ಹಿಡಿಹಿಡಿದು ನೀರು ಹಾಕಿಸಿದರು. ಕೊನೆಗೆ ಪದ್ಮಾ

ವತಿ, ಬಾಳವ್ವ, ತಾತಪ್ಪ ಎಲ್ಲರೂ ನೀರು ಹಾಕಿದರು. ಬಾಬಣ್ಣನ ಕರೆಯ ಗುಡ್ಡೆ ತಿರುಗಿ ಬೆಳ್ಳಗಾದುವು. ಬಾಯಿ ಮುಚ್ಚಿದ. ತಿರುಗಿ ಬಾಯಿ ತೆರೆದ. ಮರಳಿ ಮುಚ್ಚಲಿಲ್ಲ.

ಮಕ್ಕಳು ಹೆದರಿ ಚೀರಿದುವು. ಯಾರೋ ಎತ್ತಿಕೊಂಡು ಹೊರಗೆ ಒಯ್ದರು.

ಎದುರಿಗೆ ಅಂಚೆಯಾಳು ಬಂದು ಒಂದು ಟಪಾಲು ಕೊಡುತ್ತ ತಾನೇ ಹೇಳಿದ:

"ಮುದ್ದಪ್ಪ ಮುಂದೆ ಬಿದ್ದಿದೆಯಂತೆ."

ಮನೆಯೊಳಗಿನ ಕೋಲಾಹಲದಲ್ಲಿ ಅವನ ಮಾತು ಯಾರ ಕಿವಿ ಸೇರ ಬೇಕು?

ಅಳುವ ಸ್ವರವನ್ನು ಕೇಳಿ ಓಣಿಯೊಳಗಿನ ಜನವೆಲ್ಲ ಸೇರಿದರು ಮುಂದಿನ ವ್ಯವಸ್ಥೆಗೆ ತೊಡಗಿದರು.

† † † †

ಆದಪ್ಪ ಮಾಸ್ತರರು ಸೊಲ್ಲಾಪುರವನ್ನೆಲ್ಲ ಶೋಧಿಸಿ ನಿರಾಶರಾಗಿ ಊರಿಗೆ ಮರಳಿದರು. ಬೆಳಗಿನ ರೇಲಿಗೆ ಇಳಿದು ಜೋಲು ಮೋರೆ ಮಾಡಿ ಕೊಂಡು ಊರಿನ ಕಡೆಗೆ ನಡೆದರು. ಹಾದಿಯಲ್ಲಿ ತಮ್ಮ ಹೊಲ ಹತ್ತಿತು. ಕರ್ರಿಗೆ ವಿಸ್ತಾರವಾಗಿ ಹಬ್ಬಿದ್ದಿತು. ನೋಡಿ, ಏನೋ ನೆನಪಾಗಿ ಬಿಸಿಯುಸಿ ರೊಂದನ್ನು ಬಿಟ್ಟರು. ಹಾಗೆಯೇ ಭಾರವಾದ ಮನಸ್ಸಿನಿಂದ ಮುಂದೆ ಬಂದರು. ಊರ ಮುಂದಿನ ಬಾವಿಯ ಮೇಲೆ ಬೆಳಗಿನ ಎಳೆಬಿಸಿಲಿನಲ್ಲಿ ಜನರು ನೀರು ಸೇದುತ್ತಿದ್ದರು. ಗಾಲಿಗಳು 'ಕೊರ್ರ ಕೊರ್ರ' ಎಂದು ಒದರು ತ್ತಿದ್ದುವು. ಯಾವುದೋ ಒಂದು ಪ್ರಸಂಗ ಮಾಸ್ತರರ ಕಣ್ಣೆದುರಿಗೆ ಸುಳಿದು ಹೋಯಿತು. ಆ ಗಾಲಿಯ ಸಪ್ಪಳ ಕರ್ಕಶವಾಗಿ ಕೇಳಿಸಿತು.

ಕೊಡ ತುಂಬಿಕೊಂಡು ಹೊರಟ ಹೆಂಗಸರಿಬ್ಬರು ತಮ್ಮಲ್ಲಿ ಮಾತಾ ಡುತ್ತ ಇದ್ದರು:

"ನಾಲ್ಕು ದಿನ ಆಯ್ತು ಅಂತಲ್ಲ ತಂದ?"

" ಬರುವಾಗಲೂ ಉರಿ ಬಂದಿದ್ದು ಅಂತ...."

" ನಾಲ್ಕು ಕೂರಿಗೆ ಅಡವಿ ಇಷ್ಟು ಆರೋಸಿ ಸತ್ತ ಹೋಯ್ತು ಆಯ್ತು. ಇನ್ನೇನ ನಾಲ್ಕೂ ಹುಡುಗರು ಇವನ ಹೆಸರ ಹೇಳಿ ಪರಟಿ ಹಿಡಿದು ಮನೆ ಮನೆ ತಿರುಗಿ ತಿನ್ನಬೇಕಾಯಿತು. "

ಈ ಮಾತುಗಳನ್ನು ಕೇಳುತ್ತಿದ್ದಂತೆಯೇ ಮಾಸ್ತರರ ಕಾಲುಗಳು ಬಾಬಣ್ಣನ ಮನೆಯ ಕಡೆಗೆ ಹೊರಳಿದುವು. ಒತ್ತರದಿಂದ ಸಾಗತೊಡಗಿದ

ಎದುರಿಗೆ ಸ್ವಾತಂತ್ರ್ಯ ದಿನೋತ್ಸವದ ಮೆರವಣಿಗೆ ಬಂದಿತು. ಇಂದು ಅಗಸ್ಟ ಹದಿನೈದು ಎಂಬುದು ಆಗ ಮಾಸ್ತರರಿಗೆ ಹೊಳೆಯಿತು. ನಿನ್ನೆ ಸೊಲ್ಲಾಪುರದಲ್ಲಿ ಉತ್ಸವದ ಸಿದ್ಧತೆ ನಡೆದುದರ ಅರ್ಥ ಈಗ ತಿಳಿಯಿತು.

ಮೆರವಣಿಗೆಯ ಮುಂದೆ ಅಶೋಕ ಚಕ್ರಾಂಕಿತ ಧ್ವಜ ಹಾರಾಡುತ್ತಿದೆ. ಭಾರತದ ಬಂಧವಿಮೋಚನೆಯನ್ನು ಸಾರುತ್ತಲಿದೆ. ಜನಸಂದಣಿಯೊಳಗಿಂದ ನುಸುಳಿ ಬರಬೇಕಾದರೆ ಆದಪ್ಪ ಮಾಸ್ತರರಿಗೆ ಅರ್ಧ ತಾಸು ಹಿಡಿಯಿತು

ಮೆರವಣಿಗೆಯ ಹಿಮ್ಮಗ್ಗಲು ಕಲ್ಲಪ್ಪ ಯಾರಿಗೋ ಹೇಳುತ್ತಲಿದ್ದ,—

" ಸತ್ತರೂ ನಮಗೆ ತೊಂದರೆ ಕೊಟ್ಟೇ ಸತ್ತ. ಊರೊಳಗ ಈ ಮೆರವಣಿಗೆ ಏನು, ಉತ್ಸವ ಏನು ! ನಾವು ಹೋಗಬೇಕು, ಇದನ್ನೆಲ್ಲ ಬಿಟ್ಟು ಮಣ್ಣಿಗೆ. ಅಣ್ಣಾತಮ್ಮರೊಂದ ಆಗಿದೇವೆ. ಹೋಗದೆ ಇರಲಿಕ್ಕೆ ಬಂದು ಬರುವದಿಲ್ಲ. " ಎಂದು ನಿರುಪಾಯನಾಗಿ ತಿರುಗಿ ನಡೆದಿದ್ದ.

ಗೌಡರೂ ಸೆಟ್ಟರೂ ಮೆರವಣಿಗೆಯಲ್ಲಿ ಮುಂದಾಗಿ ಸಾಗಿದ್ದರು. ಆನಂದದಲ್ಲಿದ್ದರು. ಅವರಿಗೆ ಯಾರ ಸತ್ತ ಗೊಡವೆ ಏನು ?

ಬಾಬಣ್ಣನ ಮನೆಯ ಮುಂದೆ ಸಿದಿಗೆ ಕಟ್ಟುತ್ತಲಿದ್ದಾರೆ. ಮಾಸ್ತರರ ತಂದೆಯವರೂ ಅಲ್ಲಿ ಬಂದು ನೆರವಾಗುತ್ತಿದ್ದಾರೆ.

ಗಂಗವ್ವ ಕಟ್ಟೆಯ ಮೇಲೆ ನಿಂತು ಹೇಳುತ್ತಿದ್ದಾಳೆ.

“ ಮೊನ್ನಿನ ಹುಡುಗ ತಾಯಿ! ನಮ್ಮ ಮುಂದಃ ಮುದುವೆ ಆಯ್ತು! ನಾಲ್ಕ ಮಕ್ಕಳ ಆದುವು. ಇಂದ ಹಾಂ! ಹಾಂ! ಅನ್ನತ ಹೋಗಿ ಬಿಟ್ಟ! ಏನು ದೈವಗತಿ ವಿಚಿತ್ರ ಇದ್ದೀತು ಅನ್ನತೇನೆ. ”

ಇವರೆಲ್ಲರ ಕೃತಿಗಳ ಚಿತ್ರಪಟ ಆದಪ್ಪ ಮಾಸ್ತರರ ಬಗೆಗಣ್ಣಿನೆದುರಿಗೆ ಬಂದು ನಿಂತಿತು. ಇಂಥವರ ಗುಂಪಿನಿಂದಲೂ ಭಾರತದ ಜನಸಾಮಾನ್ಯರ ಸುತ್ತ ಇನ್ನೊಂದು **ಆ-ಶೋಕ ಚಕ್ರ** ನಿರ್ಮಾಣವಾಗಿದೆಯಲ್ಲ! ಈ ಅಶೋಕ ಚಕ್ರ ನಷ್ಟವಾದಾಗಲೇ ಆ ರಾಷ್ಟ್ರಧ್ವಜದ ಮೇಲಿನ ಅಶೋಕ ಚಕ್ರ ಸಾರ್ಥಕವಾದೀತು. ಎಂಬ ವಿಚಾರ ಒಂದು ಕ್ಷಣ ಅವರ ತಲೆಯಲ್ಲಿ ಮಿಂಚಿ ಮಾಯವಾಯಿತು. ಹಾಗಾಗಲಿಕ್ಕೆ ಪದ್ಮಾವತಿಯು ಹಾಡಿ ಹಾಡಿಕೊಂಡು ಅಳುವ ಧ್ವನಿಯೇ ಕಾರಣವಾಗಿರಬೇಕು.

